ನಾನೊಂದು ಚಿಂದಿಗೊಂಬೆ ಎಂಬುದನ್ನು ದೇವರು ಒಂದು ಕ್ಷಣ ಮರೆತು, ಒಂದು ಚೂರು ಬದುಕು ಕೊಟ್ಟರೆ, ಪ್ರಾಯಶಃ ನಾನು ಯೋಚಿಸಿದೆಲ್ಲವನ್ನೂ ಹೇಳುವುದಿಲ್ಲವೇನೋ, ಆದರೆ ಹೇಳಬೇಕಾದುದೆಲ್ಲವನ್ನೂ ಯೋಚಿಸುತ್ತ ಕೂತೇನು. ವಿಷಯಗಳಿಗೆ ನಾನು, ಅವುಗಳ ಮೌಲ್ಯಕ್ಕಾಗಿ ಅಲ್ಲ, ಅವು ಸೂಚಿಸುವ ಅರ್ಥಗಳ ಸಲುವಾಗಿ ಬೆಲೆ ಕೊಟ್ಟೇನು. ಒಂದು ನಿಮಿಷ ಕಣ್ಣು ಮುಚ್ಚಿದರೂ ಸಾಕು, ಅರವತ್ತು ಸೆಕೆಂಡು ಬೆಳಕು ಕಳೆದುಕೊಳ್ಳುತ್ತೇನೆ ಎಂಬ ತಿಳಿವಳಿಕೆಯಿಂದ ಕಡಿಮೆ ಮಲಗಿಯೇನು, ಹೆಚ್ಚು ಕನಸು ಕಂಡೇನು.

ಉಳಿದವರು ಹಾಗೇ ಕುಳಿತಿರುವಾಗ ನಾನು ಅಡ್ಡಾಡಿಯೇನು. ಉಳಿದವರು ಮಲಗಿರುವಾಗ ನಾನು ಎಚ್ಚರದಿಂದಿದ್ದೇನು. ಉಳಿದವರು ಮಾತಾಡುವಾಗ ನಾನು ಕೇಳುತ್ತ ಕುಳಿತೇನು. ಸಿಕ್ಕರೆ ಒಳ್ಳೆಯ ಚಾಕೊಲೆಟ್ ಐಸ್‌ಕ್ರೀಂ ಸವಿದೇನು! ದೇವರು ಒಂದು ಚೂರು ಬದುಕು ನೀಡಿದರೆ, ಸರಳವಾಗಿ ಉಡುಪು ಧರಿಸಿ ಸೂರ್ಯನಿಗೆ ಮೊದಲು ಮುಖ ಒಡ್ಡಿಯೇನು. ದೇಹ ಮಾತ್ರವಲ್ಲ, ಆತ್ಮವನ್ನೇ ತೆರೆದುಕೊಂಡೇನು.

ನನ್ನ ದೇವರೆ, ನನಗೆ ಹೃದಯವಿದ್ದರೆ ನನ್ನ ದ್ವೇಷವನ್ನು ಹಿಮದ ಮೇಲೆ ಬರೆಯುವೆ, ಸೂರ್ಯ ಮೂಡಲೆಂದು ಕಾಯುವೆ. ನನ್ನ ಕಂಬನಿಯಿಂದ ಗುಲಾಬಿಗೆ ನೀರುಣಿಸಿ, ಮುಳ್ಳುಗಳ ನೋವಿನೊಂದಿಗೇ ದಳಗಳನ್ನ ಕೆಂಪಗೆ, ಮೃದುವಾಗಿ ಮುದ್ದಿಸುವೆ.

ನನ್ನ ದೇವರೆ, ನನಗೆ ಇನ್ನೊಂದು ಚೂರು ಬದುಕಿದ್ದರೆ... ಪ್ರೀತಿಸುವ ಜನರಿಗೆ ಅಕ್ಕರೆ ಅರುಹದೆ ಒಂದು ದಿನವನ್ನೂ ಕಳೆಯಲಾರೆ. ವಯಸ್ಸಾದಾಗ ಪ್ರೀತಿಸಲಾಗುವುದಿಲ್ಲ ಎನ್ನುವುದು ಸುಳ್ಳು. ಪ್ರೀತಿಸಲಾಗದಾಗ ವಯಸ್ಸಾಗುತ್ತದೆ. ಮಗುವಿಗೆ ನಾನು ರೆಕ್ಕೆಗಳನ್ನು ಕೊಡುವೆ, ಆದರೆ ಹಾರಲು ಅವನೇ ಕಲಿಯಲಿ. ವಯಸ್ಸಿನೊಡನೆ ಸಾವು ಬರುವುದಿಲ್ಲ, ಬದಲಾಗಿ, ಅದು ಬರುವುದು ಮರೆವಿನೊಡನೆ.

ಪ್ರತಿಯೊಬ್ಬನೂ ಶಿಖರದ ಮೇಲೇ ಇರಬಯಸುತ್ತಾನೆ, ನಿಜಸಂತೋಷ ಅದನ್ನು ಹತ್ತುವ ಬಗೆಯಲ್ಲಿದೆ ಎನ್ನುವುದನ್ನು ಅರಿಯದೆ. ಹೊಸ ಶಿಶು ತನ್ನ ಪುಟ್ಟ ಮಿಡಿವ ಹಿಡಿಯಲ್ಲಿ ಅಪ್ಪನ ಬೆರಳನ್ನು ಅದುಮಿದ ಕ್ಷಣದಲ್ಲೇ ಹೊಸದೊಂದು ಜಗತ್ತು ಉದಯಿಸುತ್ತದೆ.

-ಮಾರ್ಕ್ವೆಜ್

(ಪ್ರಾಣಾಂತಿಕ ಕಾಯಿಲೆಯಿಂದಾಗಿ ಮೌನ ತಳೆದಿರುವ ಲ್ಯಾಟಿನ್ ಅಮೆರಿಕನ್ ಲೇಖಕ ಮಾರ್ಕ್ವೆಜ್, ತನ್ನ ಸ್ನೇಹಿತರಿಗೆ ಬರೆದ ಎನ್ನಲಾದ ಕಾಗದದಿಂದ. ಅನುವಾದ: ಚಿಂತಾಮಣಿ.)



ಕಂಪಿಸಿದ ಭೂಮಿಯಲ್ಲಿ ಉಧ್ವಸ್ಥಗೊಂಡ ಒಡಲುಗಳಿಗೆ ತಂಪು ಬರಲಿ ಎಂದು ಪ್ರಾರ್ಥನೆ.

-ಸಂಪಾದಕ



# ಮೊಗ್ಗಿನ ಜಡೆ

ಸುಘೋಷ್ ವೀರಾಂಬುಧಿ
ಆರನೇ - ತರಗತಿ

## ಮುಯ್ಯಿಗೆ ಮುಯ್ಯಿ

ಒಂದು ಊರಿನಲ್ಲಿ ಇಬ್ಬರು ಸ್ನೇಹಿತರಿದ್ದರು. ಅವರ ಹೆಸರು ರಾಮು ಮತ್ತು ಸೋಮು. ಅವರಲ್ಲಿ ಆತ್ಮೀಯ ಸ್ನೇಹ ಬೆಳೆದಿತ್ತು. ಒಂದು ಸಲ ಇಬ್ಬರೂ ರಸ್ತೆಯಲ್ಲಿ ಸೈಕಲ್‌ನಲ್ಲಿ ಹೋಗುತ್ತಿದ್ದರು. ಸೋಮುವಿನ ಸೈಕಲ್ ಬಹಳ ಹಳೆಯದು ಮತ್ತು ರಾಮುವಿನ ಸೈಕಲ್ ಬಹಳ ಹೊಸದು. ಸೋಮು ಸೈಕಲ್‌ನಿಂದ ಬಿದ್ದು ಗಾಯ ಮಾಡಿಕೊಂಡ. ಸೈಕಲ್ ಕೂಡ ಮುರಿದು ಹೋಯಿತು. ಸೋಮು ರಾಮುವನ್ನು ತನ್ನನ್ನು ಮನೆಗೆ ಬಿಡು ಎಂದು ಕೇಳಿಕೊಂಡ. ರಾಮು ಜಂಭದಿಂದ ''ಉಹೂಂ'' ಎಂದ. ಸೋಮು ಅಳುತ್ತ ಮನೆಗೆ ಹೋದ. ಸೋಮು, ಅವರ ತಂದೆಗೆ ಹೇಳಿದಾಗ ಅವರ ತಂದೆ, ''ರಾಮುವಿನ ಜತೆ ಸ್ನೇಹ ಮಾಡಬೇಡ'' ಎಂದು ಹೇಳಿದರು.

ಹೀಗೆ ಇನ್ನೊಂದು ದಿನ ಸೋಮು ಮತ್ತು ರಾಮು ಶಾಲೆಗೆ ಬಂದರು. ರಾಮು ಮರವನ್ನು ಹತ್ತಿದ. ನಲ್ಲಿ ಕಾಯಿಯನ್ನು ಕಿತ್ತು ಕೊಳ್ಳುತ್ತಿದ್ದಾಗ ಮರದಿಂದ ಕೆಳಗೆ ಬಿದ್ದ. ಅವನು ಜೋರಾಗಿ ಕಿರಿಚಿಕೊಂಡ. ಸೋಮು ಯಾರು ಎಂದು ನೋಡಲು ಹೋದಾಗ ರಾಮು ಕಾಣಸಿದ. ರಾಮು ಸೋಮುವನ್ನು ಸಹಾಯ ಮಾಡು ಎಂದು ಕೇಳಿಕೊಂಡ ಆದರೆ ಸೋಮು ಒಪ್ಪಲಿಲ್ಲ. ಅವನು ಹೇಳಿದ ''ನೀನು ಆವತ್ತು ನನಗೆ ಸಹಾಯ ಮಾಡಲಿಲ್ಲ ಆದ್ದರಿಂದ ನಾನು ಮಾಡುವುದಿಲ್ಲ''

ನನ್ನ ನೀತಿ : ಸಹಾಯ ಮಾಡಿ, ಸಹಾಯ ಪಡೆಯಿರಿ.



ಇದು ಮುದ್ದು ಮಕ್ಕಳ ಮುಕ್ತ ಪುಟ. ಮಕ್ಕಳೇ ಬರೆದ ಚಿತ್ರ, ಕಥೆ, ಚುಟುಕ, ಕವಿತೆಗಳಿಗೆ ಸ್ವಾಗತ.

# ನನ್ನ ಗೆಳೆಯ ಚೇತನ



ನಮ್ಮ ಶಾಲೆಯಲ್ಲಿ ಚೇತನ ಎಂದು ನನ್ನ ಗೆಳೆಯನಿದ್ದಾನೆ. ಅವನು ಬಹಳ ನಗಿಸುತ್ತಾನೆ. ಅವನು ಬಹಳ ಡುಂಮ ಇದ್ದಾನೆ. ಅವನು ಒಂದು ದಿನ ನಮಗೆಲ್ಲಾ ಆಟಕ್ಕೆ ಬಿಟ್ಟಾಗ ಶಾಲೆಯು ಬಿಟ್ಟಿತು ಎಂದು ತಿಳಿದನು. ಪಾಠಿ ಚೀಲ ಹೆಗಲಿಗೆ ಹಾಕಿಕೊಂಡು, ''ನಮ್ಮ ಶಾಲೆ ಬಿಟ್ಟಿತು'' ಎಂದು ಹಾಡುತ್ತಾ, ಕುಣಿಯುತ್ತಾ ಹೊರಟನು. ಆಗ ಆಯಾ, ''ಏಕೆ ಮನೆಗೆ ಹೊರಟೀ, ಪಾಟಿ ಚೀಲ ಇಟ್ಟು ಆಟಕ್ಕೆ ಹೋಗು'' ಎಂದು ಹೇಳಿದಳು. ಪಾಟಿಚೀಲ ಇಟ್ಟು ಬರುವಾಗ ಮೆಟ್ಟಿಲಿನ ಇಳಿಜಾರಿನ ಮೇಲಿಂದ ಬಿದ್ದನು.

ಒಂದು ದಿನ ಮೇಡಂ ಏನೋ ಹೇಳಲು ಕರೆದರು. ಆಗ ಅವನು, ''ಏ ಮೇರೆ ದಿಲ್ ತೊ ಗಾಯೇ ಜಾ'' ಎಂದು ಹಾಡುತ್ತಾ ಕಣ್ಣು ಮುಚ್ಚಿಕೊಂಡು ಹೋಗುವಾಗ ನನ್ನ ಪಾಟಿ ಚೀಲಕ್ಕೆ ಕಾಲುತಟ್ಟಿ ನನ್ನ ಮೇಲೆ ಡುಬುಲ್ ಎಂದು ಬಿದ್ದ. ನಾವೆಲ್ಲ ನಕ್ಕೆವು.



ಅಪೂರ್ವ ಬರೆದ ಚಿತ್ರಗಳು



ಕರ್ಣ ಬಾದರದಿನ್ನಿ



## 'ತಾಚಿ' 'ತಾಚಿ'



ತಾರಸಿಯ ಕೊಂಡಿಯಿಂದ ನೇತು ಬಿದ್ದ ಹಗ್ಗದ ತುದಿಯಲ್ಲಿ ಬಟ್ಟೆಯ 'ಜೋಲಿ'. ಅದನ್ನು ತೂಗಿ ತೂಗಿ ತೂಗಿ ಮಲಗಿಸಿದ ಬಳಿಕ, ಇದೀಗ ಮಗು ನಿದ್ದೆ ಹೋಗಿದೆ. ಬರೀ ತೂಗಿದರೆ ಸಾಲದು-ಹಾಡಲೂ ಬೇಕು. ರಾತ್ರಿ ಎಲ್ಲ ತೂಗುವ ಈ ಅನಿವಾರ್ಯ ಶಿಕ್ಷೆ ಅನುಭವಿಸಿದ ಅಮ್ಮ, ಈಗ ತೂಗಿ ತೂಗಿ ಕೈಸೋತು, ಮೈ ದಣಿದು, ಹಾಡಿ ಹಾಡಿ ಕೊರಳು ಸೋತು ಉಸ್ಸಪ್ಪಾ ಎಂದು ಪಕ್ಕದಲ್ಲೇ ನೆಲದ ಮೇಲೆ ಒರಗಿ ನಿದ್ದೆ ಹೋಗಿದ್ದಾಳೆ. ಸುತ್ತ ಹಂಚಿಹೋದ ಬೊಂಬೆಗಳ ನಡುವೆ.

ಒಂದು ಮಗು ಮಲಗಿದರೆ ಎಷ್ಟೊಂದು ಸಂಗತಿಗಳು ಮಲಗುತ್ತವೆ! ಅವಳ ಕಂಠದಿಂದಲೇ ಹೊಮ್ಮುವ 'ಲಾಲಿ ಲಾಲಿ' ಹಾಡು... (ಜೋಲಿಗೆ ಹಾಕಿ ತೂಗುವಾಗೆಲ್ಲ ಅವಳು 'ಲಾಲಿ' ಎನ್ನುತ್ತಲೇ ಇರುತ್ತಾಳೆ. ಎರಡನೇ 'ಲಾಲಿ'ಯನ್ನು ತುಸು ಹ್ರಸ್ವವಾಗಿ, 'ಲಿ'ಯನ್ನು ಸ್ವಲ್ಪ ಒತ್ತಿ ಉಚ್ಚರಿಸುವ ಅವಳ ರೀತಿ ಅದೆಷ್ಟು ಮಧುರ!) ಹಿಂದಕ್ಕೆ ಮುಂದಕ್ಕೆ ತೂಗಿದಾಗೆಲ್ಲ ಒನೆದು ಈಗ ಸುಮ್ಮನಾಗಿರುವ ಹಗ್ಗ... ಹಾಡುತ್ತಿದ್ದ ಸ್ವಾಮೀಜಿಗೆ ಕೂಡ ಈಗ ಸುಸ್ತಾಗಿರಬೇಕು. ರಿಕಾರ್ಡ್ ಪ್ಲೇಯರ್ ಸುಮ್ಮನಿದೆ. ಅದಕ್ಕೆ ಪವರ್ ಪೂರೈಕೆಯಾಗುತ್ತಿರುವ ಸಂಕೇತವಾಗಿ ಕೆಂಪುದೀಪವೊಂದು ಕಣ್ಣು ಮಿಟುಕಿಸುತ್ತ ಗೋಡೆಯಲ್ಲಿ ಸ್ಥಿರವಾಗಿದೆ.

ಹತ್ತು ನಿಮಿಷದ ಮೊದಲು, ಮಗು ಮಲಗುವ ಮುನ್ನ, ಅಪ್ಪನ ಮೇಜಿನ ಮೇಲೆ ಎಂಥ ದೊಂಬಿ ನಡೆದಿತ್ತು. ಕಲ್ಪಿಸಿಕೊಳ್ಳಿ: ಫೋನಿನ ರಿಸೀವರ್ ತನ್ನ ತೊಟ್ಟಿಲಿನಿಂದ ಈಚೆ ಬಂದು ಅಂಗಾತ್ತನಾಗಿ ಬಿದ್ದಿದೆ. ಪೆನ್ನುಗಳೆಲ್ಲ ಟೋಪಿ ಕಳೆದುಕೊಂಡು ಯುದ್ಧದಲ್ಲಿ ತಲೆ ಕತ್ತರಿಸಿಹೋದ ಯೋಧರಂತೆ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಕನ್ನಡಕದ ಕಾಲು ಮುರಿದಿದೆ. ದಿನಚರಿಯ ಒಡಲು ಬಿರಿದು ಹೋಗಿದೆ. ಜೋಡಿಸಿಟ್ಟಿದ್ದ ಕಾಗದಗಳೆಲ್ಲ ಸುಂಟರಗಾಳಿಗೆ ಸಿಕ್ಕ ತರಗೆಲೆಗಳಾಗಿವೆ.

ಒಳ ಬರಬರುತ್ತಿದ್ದಂತೆ ಮೇಜಿನ ರಣಾಂಗಣ ಕಂಡ ಅಪ್ಪನ ಹುಬ್ಬು ಗಂಟಿಕ್ಕಿದೆ. ಮರುಕ್ಷಣ ಮುಗುಳ್ನಗು ಸುಳಿದಿದೆ. ವಿಶಾಲವಾಗಿ ಹರಡುತ್ತ ಆ ನಗೆ, ಮುಖವನ್ನೆಲ್ಲ ಆವರಿಸಿದೆ. ತನ್ನ ಪುಟ್ಟ imp(= ತುಂಟ, ಮರಿ ಪಿಶಾಚಿ)ನ ಅಸಾಧ್ಯ ತುಂಟತನದ ಬಗ್ಗೆ ತೋರಿಕೆಯ ಮುನಿಸು, ಇನ್ನೂ ಒಂದು ವಸಂತವನ್ನಷ್ಟೇ ಕಂಡಿರುವ ಆ ಪುಟ್ಟ ಜೀವದ ಅದ್ಭುತ ಚೈತನ್ಯದ ಬಗೆಗಿನ ಬೆರಗಿನಲ್ಲಿ ಆತ, ತಲೆ ಒದರುತ್ತ ಮೇಜಿಗೆ ಕೈ ಹಚ್ಚಿದ್ದೇ-

ಈಗೆಲ್ಲ ಶಾಂತವಾಗಿದೆ. ರಿಸೀವರ್ ಕ್ರೇಡಲ್ ಸೇರಿದೆ. ಪೆನ್ನುಗಳೆಲ್ಲ ಟೋಪಿ ಹೊತ್ತು ಸ್ಟಾಂಡಿನಲ್ಲಿ ಶಿಸ್ತಾಗಿ ನಿಂತಿವೆ. ಡೈರಿ ಒಡಲು ಮುಚ್ಚಿ ಕೂತಿದೆ. ಕಾಗದಗಳೆಲ್ಲ ಒಂದನ್ನೊಂದು ತಬ್ಬಿ ಮಲಗಿವೆ. ಕನ್ನಡಕ ಮಾತ್ರ, ಕುಂಟು ಕುದುರೆಯಾಗಿ, ತನ್ನ ಲಾಯವಾದ ಗೂಡು ಸೇರಿದೆ. ಈ ಒಪ್ಪ-ಓರಣದಲ್ಲಿ, ಅತೀವ ಓರಣದಲ್ಲಿ, ಅವೆಲ್ಲ ಅಪ್ಪನ ಸಪಾಟಾಗಿ ಬಾಚಿದ ಕೂದಲಂತೆ ಕೊಂಚ ಕಳಾಹೀನವಾಗಿವೆಯೇ? ಈ ಮೇಜಿನ ಹಾಗೆ ಆ ತಲೆಯನ್ನೂ ಮಗು ಕೊಂಚ ಕೆದರಿದ್ದರೆ...

ಅಡಿಗೆ ಮನೆಯಲ್ಲಿ ಮಾತ್ರ ಮಗುವಿನ ಕಾರ್ಯಕ್ಷಮತೆಯ ಪ್ರಾತ್ಯಕ್ಷಿಕೆ ಮುಂದುವರಿದಂತಿದೆ. ತರಕಾರಿ ತರುವ ಪ್ಲಾಸ್ಟಿಕ್ ಬುಟ್ಟಿ ಅಡ್ಡಾಗಿ



ಮಲಗಿ ನಿದ್ದೆ ಮಾಡಿದೆ. ಯಾವಾಗಲೂ ಆ ಬುಟ್ಟಿಯನ್ನು ಕೈಯಲ್ಲಿ ಹಿಡಿದೇ ಮಗು 'ಟಾಟಾ' ಹೋಗುತ್ತಿದ್ದುದು. ಈಗ ಈರುಳ್ಳಿ, ಆಲೂಗಡ್ಡೆ, ಬೆಂಡೆ, ಬದನೆ, ಕೊತ್ತಂಬರಿ ಸೊಪ್ಪು, ಕರಿಬೇವು ಎಲ್ಲ ಬುಟ್ಟಿಯ ಒಡಲಿಂದ ಈಚೆಗೆ ಉರುಳಿ ಧರಾಶಾಯಿಯಾಗಿವೆ. ಪಕ್ಕದಲ್ಲಿ ಹಾಲಿನ ಪೊಟ್ಟಣ. ಅದರ ಮೇಲಿನ ಕೃಷ್ಣ ಕೂಡ ಗಡಿಗೆಯಿಂದ ಬೆಣ್ಣೆ ತೆಗೆದು ಮುಕ್ಕುವ ತನ್ನ ಕಾಯಕ ನಿಲ್ಲಿಸಿ, 'ತಾಚಿ' ಮಾಡಿದ್ದಾನೆ. ಮಗುವನ್ನು ಮಲಗಿಸುವ ಗಡಿಬಿಡಿಯಲ್ಲಿ ಇವನ್ನೆಲ್ಲ ಜೋಡಿಸಲು ಅಮ್ಮನಿಗೆ ಸಾಧ್ಯವಾಗದ ಕಾರಣ, ಎಲ್ಲ ಪಾತ್ರೆ ಪಗಡೆಗಳು ಕೂಡ ಅಡಿಗೆ ಮನೆಯ ಉದ್ದಗಲ ಆಳುವ ಸ್ವಾತಂತ್ರ್ಯ ಗಳಿಸಿದ ಹಾಗಿದೆ.

ಮಗು ಮಲಗಿದಲ್ಲಿಗೆ ಬಂದರೆ-ಸ್ತಬ್ಧ ಜೋಲಿ. ತಳದಲ್ಲಿ ಪವಡಿಸಿದ ಅವಳ ಹೊರ ರೇಖೆ. ಲಯಬದ್ಧವಾಗಿ ಆಡುವ ಉಸಿರು. ಜೋಲಿಯಿಂದ ಹೊರ ಚಾಚಿರುವ ಪುಟ್ಟ ಪಾದ. ನೀರಿಗೆ ಕಾಲು ಇಳಿಬಿಟ್ಟು ಆಡಿಸಿದ ಹಾಗೆ ಗಾಳಿಯಲ್ಲಿ ಆಡುವ ಅವಳ ಕಾಲು, ಹಾಗೆ ಆಡಿಸಿದಾಗೆಲ್ಲ ಘಲ್ಲೆನುವ ಗೆಜ್ಜೆ ಈಗ ನಿದ್ದೆಯ ಮೋಡಿಯಲ್ಲಿ.

'ಆಡಿಸಿ, ಬೀಳಿಸಿ, ನೋಡಿ'ದರೂ 'ಉರುಳಿ ಹೋಗದು' ಟೆಡ್ಡಿ ಬೊಂಬೆ-ಅದೊಂದು ಮಾತ್ರ ಧ್ಯಾನಸ್ಥ ಮುನಿಯಂತೆ ಕುಳಿತೇ ಇದೆ-ಕಳೆದ ವಾರ ಪುಟ್ಟಿ ಅದರ ಬಣ್ಣದ ಮೂಗನ್ನು ಕಿತ್ತುಬಿಟ್ಟಿದ್ದಾಳೆ. ಹಾಗೆಯೇ ತರಾವರಿ ಕಾರುಗಳು, ಗಿಲಕಿಗಳು. ಒಡಲನ್ನು ಒತ್ತಿದರೆ 'ಕುಂಯ್' ರಾಗ ಹೊರಡಿಸುವ 'ಚಾಚಾ'ಗಳು. ಅವುಗಳ ಕೊರಳಿಗೆ ತಲಾ ನಾಲ್ಕೋ, ಆರೋ ಬಳೆಗಳನ್ನು ತೂರಿಸಿಟ್ಟಿದ್ದಾಳೆ ಪುಟ್ಟಿ.

ನಡುವೆ ನೆಲದಲ್ಲಿ ಕೈಕಾಲು ಮುದುರಿ ಮಗ್ಗುಲಾಗಿ ಮಲಗಿರುವ ಅಮ್ಮ. ಏರಿಳಿವ ಎದೆ-ಭುಜ ಅವಳ ನಿಡಿದಾದ ಉಸಿರಿಗೆ ಸಾಕ್ಷಿ ಹೇಳುತ್ತಿವೆ.

ಕಂದ ರಚ್ಚೆಯ ಹಿಡಿದು
ಅಮ್ಮ ಗುಮ್ಮನ ಕರೆದು
ಬೊಂಬೆಗಳೆಲ್ಲ ಮಲಗಿ
ತಾಸು ರಾತ್ರಿಯ ಹೊತ್ತು
ಇಗೋ ಈಗ ಮೌನ ಭಂಗ!

ಮೌನ ಲಹರಿಯ ಮುರಿವಂತೆ ಸಣ್ಣಗೆ ತೊಟ್ಟಿಕ್ಕುತ್ತದೆ ಸದ್ದು. ಜೋಲಿಯಿಂದ ತೊಟ ತೊಟ ಬಸಿದು ನೆಲದಲ್ಲಿ ಹರಿಯುತ್ತಿರುವ 'ಬೂಚಿ' ನದಿ. ಜೋಲಿಯ ಬಸಿರಲ್ಲಿ ಸಂಚಲನೆ.

ಅಮ್ಮ ಮಗ್ಗಲು ಬದಲಿಸುತ್ತಿದ್ದಾಳೆ. ಗೊಂಬೆಗಳೆಲ್ಲ ಮೈ ಮುರಿದು ಏಳುತ್ತಿವೆ. ಮತ್ತೆ ರಥ, ಕುದುರೆ ಸಿದ್ಧವಾಗುತ್ತಿವೆ.

ಶ್! ಸುಮ್ಮನಿರಿ. ಸುಮ್ಮನೆ ಆಲಿಸಿ. ನಿರಿಗೆಗಳ ಸರಭರ, ಗೆಜ್ಜೆ ಕಾಲುಗಳ ಝುಣತ್ಕಾರ. ಖುರಪುಟದ ಸದ್ದು-ಹೇಷಾರವ, ಕತ್ತಿಗಳ ಮಿಂಚು, ಕಿರೀಟಗಳ ಹೊಳಪು. 'ತಾಚಿ' 'ತಾಚಿ'.

**ಗೋವಿಂದ ಹೆಗಡೆ**






ಜೂನ್ ಹತ್ತರ ಆ ಬೆಳಗ್ಗೆ, ಆಫೀಸಿಗೆ ಹೋಗಲು ಸಿಟಿ ಬಸ್ಸಿನಲ್ಲಿ ರಾಜರ್ಸ್ ಕ್ಯಾಂಪಿನಿಂದ ಟೌನ್‌ಗೆ ಬರುತ್ತಿದ್ದ ಜಸಿಂತಾಗೆ, ಬಸ್ ಮುನಿಸಿಪಲ್ ಆಫೀಸಿನ ಸ್ಟಾಪಿನಲ್ಲಿ ನಿಂತಾಗ ವಿಚಿತ್ರವಾದ ದೃಶ್ಯವೊಂದು ಕಂಡಿತು. ಆಫೀಸಿನ ಕಾಂಪೋಂಡಿನಲ್ಲೇ ಇರುವ ದೊಡ್ಡ ಅರಳಿ ಮರದ ಮರೆಯಿಂದ, ಅಡಿಯಿಂದ ಮುಡಿಯವರೆಗೆ ಬಿಳಿ ಬಟ್ಟೆ ಧರಿಸಿದ್ದ ಆಕಾರವೊಂದು ಹೊರಬಂದು, ಕೈಬೀಸಿ ಬಸ್ ನಿಲ್ಲಿಸಲೆಂಬಂತೆ ಸನ್ನೆ ಮಾಡುತ್ತ, ಓಡಿ ಓಡಿ ಬರುತ್ತಿರುವಂತೆ ತೋರಿತು. ಒಂದು ಕ್ಷಣ, ಅದು ಬಸ್ಸನ್ನಲ್ಲ, ನಿಲ್ಲಿಸಲು ಯತ್ನಿಸುತ್ತಿರುವುದು ತನ್ನನ್ನೇ ಎಂದೂ ಭಾಸವಾಯಿತು ಅವಳಿಗೆ. ಬಸ್ಸಿನಲ್ಲಿದ್ದ ಯಾರೂ, ಕಡೆಗೆ ಅತ್ತಲೇ ನೋಡುತ್ತ ಸ್ಟಿಯರಿಂಗ್ ಹಿಡಿದಿದ್ದ ಡ್ರೈವರ್ ಸಹ, ನಿಂತಲ್ಲೇ ಓಡುತ್ತಿದ್ದಂತಿದ್ದ ಅದನ್ನ ಗಮನಿಸಲೇ ಇಲ್ಲವೇನೋ ಅನ್ನಿಸಿತವಳಿಗೆ. ಡ್ರೈವರ್‌ಗೆ ಹೇಳುವ ಮನಸ್ಸಾದರೂ, ತನಗೇಕೆ ಎಂದು ಸುಮ್ಮನಾದಳು. ಬಸ್ ಹೊರಟಿತು. ಹಿಂದೆಯೇ ಯಾಕೋ, ಅದರ ವಿಲಕ್ಷಣತೆಗೆ ಸ್ವಲ್ಪ ಹೆಚ್ಚೇ ಅನ್ನಿಸುವಷ್ಟು ಅಳುಕಾಯಿತು. ಕ್ರಾಸ್ ತಡವಿ 'ಜೀಸಸ್' ಅಂದಳು. ಅವತ್ತಿಡೀ ಅವಳಿಗೆ ಆ ದೃಶ್ಯವನ್ನು ಮರೆಯಲು ಸಾಧ್ಯವಾಗಲಿಲ್ಲ. ಅದ್ಯಾವುದೋ ತೀರಾ ಪರಿಚಿತ ವ್ಯಕ್ತಿಯ ಆಕೃತಿಯಂತೆ ಭಾಸವಾಗುತ್ತಿತ್ತು. ತೆರೆಸಾ ಕಾನ್ವೆಂಟಿನಲ್ಲಿ, ಕಿಂಡರ್



## ಆರ್. ವಿಜಯರಾಘವನ್

# ಭೂತ

ಗಾರ್ಟನ್ ಓದು ಓದುತ್ತಿದ್ದಾಗಿಲಿಂದ, ಮೂವತ್ತು ಮೂವತ್ತೈದು ವರ್ಷಗಳ ಈ ದಾರಿಯ ಪಯಣದಲ್ಲಿ, ಅವಳಿಗೆ ಇಂದು ಮಾತ್ರ ಇಂಥ ಅನುಭವವಾಗಿದ್ದು. ಅದು ಯಾರದಾರ ಭೂತವೋ ಎಂಬ ಸಂಶಯ ಆಫೀಸಲ್ಲಿ ಕೂತ ಮೇಲೆ ಅವಳಿಗೆ ಶುರುವಾಯಿತು. ಅವತ್ತಿಡೀ ಅವಳಿಗೆ ಆ ದೃಶ್ಯವನ್ನು ಮರೆಯಲು ಸಾಧ್ಯವಾಗಲಿಲ್ಲ.

ಆಮೇಲೆ, ಸುಮಾರು ಮೂರು-ನಾಲ್ಕು ವಾರ, ಅವಳಿಗೆ ಅಂಥ ಅನುಭವವೇನೂ ಆಗಲಿಲ್ಲ. ಅಂದಿನ ಅಂಜಿಕೆ ನಿಧಾನವಾಗಿ ಮನಸ್ಸಿಂದ ಮಾಯವಾಗಿ, ಮಾಮೂಲಿನಂತೆ ಆದೆ ಅಂದುಕೊಂಡಾಗ, ಮತ್ತೆ, ಆ ಆಗಸ್ಟ್ 15ರಂದು, ಅವಳು ಎಂ.ಜಿ. ಮಾರ್ಕೆಟ್ಟಿಗೆ ತರಕಾರಿ-ಮೀನು ತರಲು ಹೋಗುತ್ತಿದ್ದಾಗ, ಅದು ಅದೇ ರೀತಿ, ಅದೇ ಮರದ ಮರೆಯಿಂದ ಹೊರಬಂದು, ಬಸ್ಸಿನಲ್ಲಿದ್ದ ತನ್ನನ್ನೇ ಉದ್ದೇಶಿಸಿ ಎರಡೂ ಕೈಬೀಸಿ ಬೀಸಿ ಕರೆದಂತಾಗಲು, ಅವಳಿಗೆ ನಾಲಗೆಯ ಪಸೆ ಆರಿಹೋಗಿ, ಕಣ್ಣಿಗೆ ಕತ್ತಲೆ ಬಂದು, ಎದುರು ಸೀಟಿನ ಕಂಬಿ ಹಿಡಿದು ಸಾವರಿಸಿಕೊಂಡಳು. ಅವತ್ತೇ ಅವಳಿಗೆ ತಡೆಯಲಾರದಷ್ಟು ತಲೆ ಸಿಡಿತ ಮತ್ತು ಅಸಾಧ್ಯ ಜ್ವರ ಬಂದು ಮಲಗಿಬಿಟ್ಟಳು. ಇಲಾಜಿಗೆ ಡಾಕ್ಟರ್ ಸಂಪತ್ ಹತ್ತಿರ ಕರೆದುಕೊಂಡು ಹೋದ ಅವಳ ಗಂಡ



ಪ್ಯಾಟ್ರಿಕ್, ಡಾಕ್ಟರ್ ಹತ್ತಿರ, ರಾತ್ರಿ ಇಡೀ ಅವಳು ಅರೆನಿದ್ರೆ, ಅರೆ ಎಚ್ಚರದಲ್ಲಿ 'ಪೇಯಿ, ಪೇಯಿ' ಅಂತ ಕನವರಿಸಿಕೊಳ್ಳುತ್ತಿದ್ದಳೆಂದು ತಲ್ಲಣದಿಂದ ವರದಿ ಮಾಡುತ್ತಿದ್ದ. ಕೇಳಿ ಅವಳಿಗೆ ಆಶ್ಚರ್ಯವಾಗಲಿಲ್ಲ. ಅಷ್ಟು ಅಂಜಿಕೆಯಾಗಿತ್ತು. ಡಾ|| ಸಂಪತ್, ಅವಳ ಬಿಪಿ, ಪಲ್ಸ್, ಟೆಂಪರೇಚರ್, ಹಾರ್ಟ್‌ಬೀಟ್, ಚೆಸ್ಟ್, ಬೆನ್ನು, ನಾಲಗೆ, ಕಣ್ಣು-ಎಲ್ಲ ಪರೀಕ್ಷಿಸಿ, ಜ್ವರ ಜಾಸ್ತಿ ಆಗಿರೋದರಿಂದ ಈ ರೀತಿ ಡಿಲಿರಿಯಂ ಆಗಿರಬೇಕು ಎಂಬ ಅಭಿಪ್ರಾಯ ವ್ಯಕ್ತಪಡಿಸಿ, ''ಒಳ್ಳೇ ಮಾತ್ರೆ ಬರೀತೀನಿ. ತಗಂಡು ಮೂರು ದಿನ ಆದಮೇಲೆ ಬನ್ನಿ'' ಅಂದರು, ಚೀಟಿ ಪ್ಯಾಟ್ರಿಕ್ ಕೈಲಿಡುತ್ತಾ. ಔಷಧಿ ಅಂಗಡಿಗೆ ಹೋಗಿ ಮಾತ್ರೆ ತರದೆ ವಾಪಸ್ಸು ಬಂದ ಪ್ಯಾಟ್ರಿಕ್, ಆಚೆ ನಿಂತಿದ್ದ ಅವಳಿಗೆ ಕೇಳಿಸದಂತೆ, ''ಇದು ತುಂಬಾ ದುಬಾರಿ, ಬೇರೆ ಯಾವುದಾರ ಬರೀರಿ'' ಅಂತ ಕೇಳಿಕೊಂಡ. ಡಾ|| ಸಂಪತ್ ಡ್ರಾವರಿನಲ್ಲಿದ್ದ ಸ್ಯಾಂಪಲ್‌ಗಳನ್ನು ಹುಡುಕಿ, ಒಂದಾರು ಮಾತ್ರೆ ಅವನ ಕೈಲಿಟ್ಟು ''ಇದನ್ನ ತಗೊಳ್ಳಲಿ. ಚಿಂತೆ ಮಾಡೋದು ಬೇಡ. ಷಿ ವಿಲ್ ಬಿ ಆಲ್‌ರೈಟ್'' ಅಂತ ಅವನ ಬೆನ್ನು ತಟ್ಟಿ ಕಳುಹಿಸಿದರು. ಆಚೆ ಬರುತ್ತ ಪ್ಯಾಟ್ರಿಕ್, ಇವಳಿಗೆ ಒಳ್ಳೇ ಮಾತ್ರೆ ಕೊಡಿಸುವ ಯೋಗ್ಯತೆ ಗಂಡನಾದ

ತನಗಿಲ್ಲದೆ ಹೋಗಿದ್ದಕ್ಕೆ ತನ್ನನ್ನು ತಾನೇ ಶಪಿಸಿಕೊಂಡ. ಅವಳ ಕನ್ಸಾಲಿಡೇಟೆಡ್ ಪೇ, ತನ್ನ ಡೈಲಿ ವೇಜಸ್ ಎಲ್ಲ ಸೇರಿಯೂ ಎರಡು ಸಾವಿರವಾಗದಿದ್ದರೂ, ತಿನ್ನುವ ಆರೆಂಟು ಬಾಯಿ. ಯಾಕೋ ಭವಿಷ್ಯ ಅವನನ್ನ ಹೆದರಿಸಿತು. ಅವನೂ ಕ್ರಾಸ್ ತಡವಿ 'ಜೀಸಸ್' ಅಂದುಕೊಂಡ.

ಜ್ವರ ಶಮನವಾದ ಬಳಿಕ ನಿಧಾನವಾಗಿ ಧೈರ್ಯ ತಂದುಕೊಂಡ ಜಸಿಂತಾ, ಹೀಗೇ ಯೋಚಿಸುತ್ತಿದ್ದಾಗ ಥಟ್ಟನೆ ಹೊಳೆಯಿತು. ಆ ಆಕೃತಿ ವೆಂಕಟರಾಯನದು! ಅಂದರೆ ವೆಂಕಟ ರಾಯ ಸತ್ತುಹೋದನೇ? ಸತ್ತು, ಪ್ರೇತವಾಗಿ, ಹೀಗೆ ತನ್ನನ್ನು ನೋಡಲು, ತಾನು ಓಡಾಡುವ ದಾರಿಯ ಅರಳಿ ಮರವನ್ನು ಆಶ್ರಯಿಸಿದನೇ? ತನ್ನ ಕರೆಯಲು ಹಾಗೆ ಕೈ ಸನ್ನೆ ಮಾಡಿದನೇ ಎಂಬ ಯೋಚನೆ ಬಂತು. ಯೋಚನೆ ತಲೆಯಲ್ಲಿ ತುಂಬಿಕೊಂಡು ಭಾರವಾಗಿ, ಕೆಲಸ ಮಾಡಲು ಸಾಧ್ಯವಾಗಲಿಲ್ಲ. ಹಾಗೂ ಹೀಗೂ ಒಂದೂವರೆ ತನಕ ಕಾಲ ಹಾಕಿ, ಆಫೀಸರಿಗೆ ಮೈ ಹುಷಾರಿಲ್ಲದ ಕಾರಣ ಹೇಳಿ, ಯಾರಾದರೂ ಇನ್ಸ್‌ಪೆಕ್ಷನ್‌ಗೆ ಬಂದರೆ ಇರಲಿ ಎಂದು ಅರ್ಧ ದಿನ ರಜಾ ಚೀಟಿ ಬರೆದಿಟ್ಟು ಹೊರಬಂದು, ಮತ್ತೆ ಅದೇ ದಾರಿಯಲ್ಲಿ ಹೋಗಬೇಕೆಂಬ ಕಳವಳಕ್ಕೆ ಈಡಾದಳು. ಹಿಂದೆಯೇ, ಅವಳಿಗೆ ಈ ಸಂಗತಿಯನ್ನು ತಿಳಿಸಬೇಕೆಂಬ ನಿರ್ಧಾರ ಮೂಡಿತು. ನಡೆದುಕೊಂಡೇ ಮುನಿಸಿಪಲ್ ಆಫೀಸಿಗೆ ಬಂದಳು. ಆ ಮರ ನಿಸೂರಾಗಿ ನಿಂತಿತ್ತು, ಗಾಳಿಗೆ ಎಲೆಗಳನ್ನು ಪಟಪಟ ಬಡಿದು ಕೊಳ್ಳುತ್ತಾ. ಅವಳಿಗೆ ಅಲ್ಲೇನೂ ಕಾಣಲಿಲ್ಲ. ಕ್ರಾಸ್ ತಡವಿಕೊಂಡು ಆಫೀಸ್ ಹೊಕ್ಕಳು.

ಮುನಿಸಿಪಲ್ ಕಮೀಷನರ್ ರಜೆಯ ಮೇಲೆ ಇದ್ದಿದ್ದರಿಂದ ಇಡೀ ಆಫೀಸು ಖಾಲಿ ಖಾಲಿ ಇತ್ತು. ಮೇನೇಜರ್, ಅಕೌಂಟೆಂಟ್ ಆದಿಯಾಗಿ ಮುಕ್ಕಾಲು ಮೂರು ಪಾಲು ಜನ ಊಟಕ್ಕೆ ಅಂತ ಹೋಗಿಬಿಟ್ಟಿದ್ದರು, ಒಂದು ಘಂಟೆಗೆಲ್ಲ. 'ಬಂದರೂ ಬಂದರೆ, ಇಲ್ಲದಿದ್ದರೆ ಇಲ್ಲ, ಯಾವಾಗಲೂ ಹೀಗೇ' ಅಂತ ಅಲ್ಲಿ ಅಷ್ಟು ದಿನ ಕೆಲಸ ಮಾಡಿದ್ದ ಜಸಿಂತಾಗೆ ಗೊತ್ತಿತ್ತು. ಇಡೀ ಆಫೀಸಿನ ರಿಯರ್‌ವಿಂಗ್‌ನಲ್ಲಿ, ಅವಳ ಒನ್‌ಟೈಂ ಕಲೀಗ್ ಸುಶೀಲ ಮಾತ್ರ ಬರ್ತ್ ಅಂಡ್ ಡೆತ್ ರಿಜಿಸ್ಟರು ಬರೆಯುತ್ತ ಕೂತಿದ್ದಳು. ಕೆಲಸಕ್ಕೆ ಸೇರಿದ ಪ್ರಾರಂಭದಲ್ಲಿ ವೆಂಕಟರಾಯನೂ ಅವೇ ರಿಜಿಸ್ಟರ್‌ಗಳನ್ನು ಬರೀತಿದ್ದ. ಆಗ ಅಲ್ಲಿ ಜಸಿಂತಾ, ವರ್ಕ್ಸ್ ಡಿಪಾರ್ಟ್‌ಮೆಂಟಿನಲ್ಲಿ ಬಿಲ್ಲಿಂಗ್ ಮಾಡುತ್ತಿದ್ದಳು. ಅವನು ಪಿಎಸ್‌ಸಿ ಸೆಲೆಕ್ಷನ್. ಅವಳು ನಾಮಿನಲ್ ರೋಲ್. ಡೈಲಿ ವೇಜರ್ ಆಗಿ, ದಿನಕ್ಕೆ ನಾಲ್ಕು ರೂಪಾಯಿ-ಜಸಿಂತಾ ಬಿ.ಎ. ಜಸಿಂತಾಳನ್ನ ಇಲ್ಲಿಗೆ, ಈಗ ಎಳೆತಂದಿದ್ದು ಆ ಪೂರ್ವ ವಾಸನೆಯೇ. ವೆಂಕಟರಾಯ ಸತ್ತುಹೋಗಿದ್ದರೆ ಅಲ್ಲಿ ವರ್ತಮಾನವಿರುತ್ತದೆ.

ಜಸಿಂತಾಳನ್ನ ಕಂಡಿದ್ದೇ, ಸುಶೀಲಳ ಮುಖ ಅರಳಿತು. ಪೆನ್ನಿನ ಕ್ಯಾಪು ಹಾಕಿ, ರಿಜಿಸ್ಟರ್ ಮಡಿಸಿ, ಆಸ್ಪತ್ರೆಯಿಂದ ಬಂದಿದ್ದ ಬರ್ತ್-ಡೆತ್ ರಿಪೋರ್ಟುಗಳ ಮೇಲೆ ಸ್ಟಾಂಪ್ ಪ್ಯಾಡ್ ಇರಿಸಿ, ಕುತೂಹಲವೇ ತಾನಾದವಳಂತೆ, ''ಬಾರೇ ಬಾ, ಜಸಿಂತಾ. ಎಷ್ಟು ದಿನಾ ಆಯ್ತು ನಿನ್ನ ನೋಡಿ. ಒಂದೇ ಊರಲ್ಲಿದ್ದರೂ ಎಷ್ಟು ದೂರ ಕಣೇ. ಅಂದಹಾಗೆ ಹೇಗಿದ್ದಾರೆ ನಿನ್ನ ಗಂಡ, ಮಕ್ಕಳು, ಅತ್ತೆ, ಮಾವ? ಯಾಕೇ ಇಷ್ಟು ನವೆದು ಹೋಗಿದ್ದೀ ಅಂತ ಸುಮಾರು ಒಂದು ವಾರ ವಾದರೂ ಉತ್ತರ ಕೊಡುತ್ತಲೇ ಇರಬೇಕಾದಷ್ಟು ಪ್ರಶ್ನೆ ಹಾಕಿ, ಉತ್ತರಕ್ಕೆ ಕಾಯುತ್ತಾ ಕೂತಳು.

ಜಸಿಂತಾ ಸ್ವಭಾವ ಎಲ್ಲವನ್ನು ಬಿಚ್ಚಿಡು ವಂಥಾದ್ದಲ್ಲ. ತನ್ನದನ್ನು ಎಷ್ಟು ಹೇಳಿದರೂ, ಕೇಳುವವರು ಆಲಿಸಿಯಾರೇ ತೀರಿಸಿಯಾರೇ?

''ಮೂರು ದಿನ ಜ್ವರ ಬಂದಿತ್ತು ಸುಶೀಲ, ಅದಕ್ಕೇ ನಿನಗೆ ಹಾಗೆ ತೋರಿರಬೇಕು'' ಅಂದಳು.

ಸುಶೀಲ ಗಡಿಯಾರ ನೋಡಿಕೊಂಡಳು. ಎರಡು ಘಂಟೆ. ''ಅರೇ, ಒಂದೂವರೆ

ಲಂಚ್‌ಟೈಂ. ಎರಡೂವರೆಗೆ ವಾಪಸ್ಸು ಬರಬೇಕು. ಬಾ, ಮನೆಗೆ ಹೋಗಿ ಊಟ ಮಾಡ್ತಾ ಮಾತಾಡೋಣ" ಅಂತಂದಳು. ಟಿಫಿನ್ ಕ್ಯಾರಿಯರ್ ಬ್ಯಾಗಲ್ಲೇ ಇದ್ದರೂ, "ನಂದು ಊಟ ಆಗಿದೆ" ಅಂದಳು ಜಸಿಂತ. "ಆದರೆ ಏನಂತೆ? ನನ್ನ ಜೊತೆ ಇನ್ನೊಂದು ತುತ್ತು ತಿನ್ನಲು ಜಾಗ ಇದ್ದೇ ಇರುತ್ತೆ ಈ ಹೊಟ್ಟೇಲಿ" ಅಂತ ಅವಳ ಹೊಟ್ಟೆ ತಿವಿದು ನಕ್ಕಳು, ಸುಶೀಲ. ಹಾಗೇ, ಅಲ್ಮೇರಾ ಬೀಗ ಹಾಕುತ್ತ, "ಎಷ್ಟು ಮಕ್ಕಳು" ಅಂತ ಕೇಳಿದಳು.

"ಎರಡು. ಒಂದು ಹೆಣ್ಣು. ಒಂದು ಗಂಡು. ಮೊದಲನೇದು ಹೆಣ್ಣು. ಯಾವಾಗಲೂ ನನಗೆ ಅದರದ್ದೇ ಯೋಚನೆ ಸುಶೀಲ. ಅದು ಮೆಂಟಲಿ ರಿಟಾರ್ಡೆಡ್. Autism ಅಂತಾರೆ, ನನ್ನ ಹಣೆಬರಹ. ಸ್ಪೆಷಲ್ ಸ್ಕೂಲಿಗೆ ಕಳಿಸ್ತಿದ್ದೀನಿ. ಹದಿನಾರು ತುಂಬಿದೆ. ಯಾಕೋ ಇನ್ನೂ ಮೈನರೆದಿಲ್ಲ. ತಾಯಿ ಕಣ್ಣೇ ದೃಷ್ಟಿ ಅಂತಾರಲ್ಲ, ಹಾಗಿದ್ದಾಳೆ. ಅದೇನು ಬರೆದಿದೆಯೋ ಅದರ ಹಣೇಲಿ" ಅಂತನ್ನುವಾಗ ಅವಳ ಕಣ್ಣಲ್ಲಿ ನೀರು ತುಂಬಿ, ಧ್ವನಿ ಭಾರವಾಯ್ತು.

"ಛೀ ಹುಚ್ಚಿ. ಹಣೇಬರಹಕ್ಕೆ ಅತ್ತರೆ ಏನು ಪ್ರಯೋಜನ" ಅಂದಳು ಸುಶೀಲ. ಆದರೂ, ತನ್ನ ಧ್ವನಿಯೂ ನಡುಗಿ, ತಾನು ದೃಢ ಎಂಬ ತನ್ನ ನಂಬಿಕೆಯೇ ಸುಳ್ಳಾದಂತೆ ಅವಳಿಗೆ ಅನ್ನಿಸಿತು.

ಆಫೀಸಿನಿಂದ ಆಚೆ ಬಂದು, ಹಿಂದೆಯೇ ಇದ್ದ ಕ್ವಾರ್ಟರ್ಸ್ ಒಂದರ ಮುಂದೆ ಸುಶೀಲ ನಿಂತಾಗ, ಜಸಿಂತಾ ಕೇಳಿದಳು: "ಓ! ಈ ಮನೇಲಿದೀಯಾ?"

"ಯಾಕೆ? ವೆಂಕಟ ರಾವ್ ನೆನಪಾಯಿತಾ", ಬೀಗ ತೆರೆಯುವುದು ನಿಲ್ಲಿಸಿ, ಜಸಿಂತಾಳ ಮುಖ ನೋಡಿದಳು ಸುಶೀಲ. ಅವಳು ಉರಿಗಾಂ ಸ್ಟೇಶನ್‌ನತ್ತ ನೋಡುತ್ತಿದ್ದುದನ್ನ ಗಮನಿಸಿ, ಬೀಗ ತೆರೆಯುತ್ತಾ, "ಹೌದು. ವೆಂಕಟ ರಾವ್ ಈ ಊರು ಬಿಟ್ಟು ಹೋದಮೇಲೆ, ನಾನು ಈ ಮನೆ ಸೇರಿಕೊಂಡೆ ಕಣೆ. ಇವೆಲ್ಲ ಹುಡ್ಕೋ ಮನೆಗಳಲ್ಲವಾ, ಮುನಿಸಿಪಾಲಿಟಿ ಸಾಲ ವಾಪಸ್ ಮಾಡಲಿಲ್ಲ ಅಂತ ಹರಾಜಿಗೆ ಬಂತು. ವಾಸ ಇದ್ದವರೆಲ್ಲ ಕೋರ್ಟಿಗೆ ಹೋದೆವು. ಮನೇಲಿ ಇದ್ದವರು ಸಾಕ್ಷಿ, ಪುರಾವೆ ಒದಗಿಸಿದರೆ ಅವರಿಗೇ ಕೊಡ್ತೀವಿ ಅಂತು ಹುಡ್ಕೋ. ಈ ಮನೆ ವೆಂಕಟ ರಾವ್‌ಗೆ ಅಲಾಟ್ ಆಗಿತ್ತು. ಆತನ ಹೆಸರಲ್ಲೇ ಇತ್ತು. ಅವರನ್ನ ಹುಡುಕಿ ಹೋಗಿ ಕೇಳಿದರೆ ಬರಕೊಟ್ಟರು, ತಾನು ಈ ಮನೇಲಿ ಇರಲೇ ಇಲ್ಲ, ಇದ್ದವರು ಸುಶೀಲಾನೆ ಅಂತ. ಹಾಗಾಗಿ ಮನೆ ನನಗೇ ಆಗಿದೆ" ಅಂದಳು.

ಜಸಿಂತಾ ಮಾತಾಡಲಿಲ್ಲ. ಅವಳು ಪಶ್ಚಿಮದ ಕಿಟಕಿಯ ಹತ್ತಿರದ ಕುರ್ಚಿಯಲ್ಲಿ ಕೂತು ಉರಿಗಾಂ ಸ್ಟೇಷನ್ ಕಡೆ ನೋಡಿದಳು.

"ಜಸಿಂತಾ, ನಿನ್ನ ಹೆಸರು ವಾಸಂತಿಯ ತತ್ಸಮವೋ, ತದ್ಭವವೋ ಆಗಿರಬಹುದಾ" ಅಂತ ಕೇಳಿದ್ದ, ಇದೇ ಜಾಗದಲ್ಲಿದ್ದ, ಇಂಥದೇ ಚೇರಿನಲ್ಲಿ ಕೂತು ವೆಂಕಟ ರಾವ್. ಅವನ ಮುಖಕ್ಕೆ ಒಮ್ಮೆ ರಕ್ತ ತುಂಬುತ್ತಿತ್ತು, ಒಮ್ಮೆ ಮುಖ ಬಿಳಿಚಿಕೊಳ್ಳುತ್ತಿತ್ತು. ಅಂಗೈ ಬೆವರನ್ನ ಕರ್ಚೀಫಿಂದ ಒರೆಸಿಕೊಳ್ತಿದ್ದ. ಧ್ವನಿ ನಡುಗಿಬಿಡ್ತಿತ್ತು. ನಾಪರಿಸಿ ಕೊಂಡು, 'ನಿನಗೊಂದು ಮುತ್ತು ಕೊಡ್ಲಾ' ಅಂತ ಕೇಳಿದ್ದ. 'ಛೀ' ಅಂದಿದ್ದಳು. ಆಗವನು ಸುಮ್ಮನಾಗಿದ್ದ. ಆಗ 'ವಸಂತಕಾಲ ಕೋಲಿಂಗಳ್' ಹಾಡು ಸ್ಟೇಷನ್ ಹತ್ತಿರದ ಲೈನ್ ಮನೆಗಳತ್ತಲಿಂದ ಬರುತ್ತಿತ್ತು. ಜಸಿಂತಾ ಮನೇಲು ಆ ಹಾಡಿನ ಕೆಸೆಟ್ ಇದೆ. ಅವಳು ಅದನ್ನ, ಮನೇಲಿ ಪ್ಯಾಟ್ರಿಕ್ ಇದ್ದರೆ ಹಾಕುತ್ತಿರಲಿಲ್ಲ. ಅವನು ಎದುರಿಗೆ ಇರುವಾಗ, ವೆಂಕಟ ರಾವ್ ನೆನಪಿಗೆ ಬರೋದೇ ಹಿಂಸೆಯ ವಿಚಾರವಾಗಿ ತೋರ್ತಿತ್ತು. ಪಕ್ಕದಲ್ಲಿ ಜಾನ್ ಸೈಕಲ್ ಶಾಪ್ ತೆಗೆದ ಮೇಲಂತೂ ಅವಳಿಗೆ ಆ ಹಾಡು ಕೇಳುವ ಆಸೆಯೂ ಬತ್ತಿಹೋಗಿತ್ತು. ಜಾನ್ ತನ್ನ ಡೆಕ್‌ಗೆ ಬಿಡುವು ಕೊಟ್ಟದ್ದಾದರೂ ಎಂದು?

ತಟ್ಟೆ, ಲೋಟ ಹಿಡಿದು ಬಂದ ಸುಶೀಲ, "ತಗೋ ಜಸಿಂತಾ" ಅಂದಾಗಲೇ ಇವಳು



ವಾಸ್ತವಕ್ಕೆ ಮರಳಿದ್ಲು. ಇಸ್ಕೊಳ್ತಾ ''ಅಮ್ಮ ಎಲ್ಲಿ'' ಅಂತ ಕೇಳಿದಳು. ''ಹೋಗಿ ಬಿಟ್ಟಳು. ನಾಲ್ಕು ವರ್ಷ ವಾಯ್ತು''

''ಮಗ, ಯಜಮಾನರು?'', ಮತ್ತೊಂದು ಪ್ರಶ್ನೆ ಕೇಳಿದಳು.

''ಮಗನ್ನ ಮುದ್ದೇನಹಳ್ಳಿ ಬೋರ್ಡಿಂಗ್ ಸ್ಕೂಲಿಗೆ ಸೇರಿಸಿದ್ದೀನಿ. ಗಂಡ ಇದ್ದಾನೆ, ಬೇರೆ ಮದುವೆ ಮಾಡಿಕೊಂಡು, ತಿಂದುಕೊಂಡು, ಕುಡಿದುಕೊಂಡು, ಮುಳಬಾಗಿಲಿನಲ್ಲಿ. ಹೆಂಡತಿ ರೇಷ್ಮೆ ಇಲಾಖೇಲಿ ಕೆಲಸ ಮಾಡ್ತಾಳಂತೆ. ಅವಳ ದಾರಿ ಅವಳದಂತೆ. ಆ ಗಂಡಸಿನ ಯೋಚನೆ ಬಿಟ್ಟಿದ್ದೀನಿ ಬಿಡು. ಒಂದು ಯೋಚನೆ ಇದ್ದೇ ಇದೆ, ಅದಕ್ಕೆ ಕೊನೆಯೆಲ್ಲೀದು? ನನ್ನ ಮಗನಿಗೆ ತಂದೆ ಇಲ್ಲದೆ ಹೋಯಿತಲ್ಲಾ ಅಂತ.''

ಜಸಿಂತಾಗೆ ಊಟ ಸೇರಲಿಲ್ಲ. ಬಲವಂತಕ್ಕೆ ಅವಳು ತುತ್ತು ನುಂಗೋದು ನೋಡಿ, ಸುಶೀಲಳೇ, ''ಬೇಡದಿದ್ದರೆ ಬಿಟ್ಟುಬಿಡು. ಜ್ವರ ಬಂದ ಬಾಯಿಗೆ ಊಟ ರುಚಿಸಲ್ಲ'' ಅಂದಳು.

ಕೈ ತೊಳೆದು ಬಂದ ಜಸಿಂತಾ, ಕನ್ನಡಿ ನೋಡಿಕೊಳ್ಳುವ ನೆಪದಲ್ಲಿ ರೂಮಿಗೆ ಹೋದಳು. ಅಂಥದೇ ಸ್ಟೀಲ್ ಮಂಚ, ಅದೇ ಸ್ಥಳದಲ್ಲಿ ಹಾಕಿಕೊಂಡಿದ್ದಳು ಸುಶೀಲ.

ಅವತ್ತು, ದಿನಗೂಲಿಯವರನ್ನು 'ಆಡಿಟ್ ಅಬ್ಜೆಕ್ಷನ್ ಬಂದಿದೆ. ನಾಳೆಯಿಂದ ಕೆಲಸಕ್ಕೆ ಬೇಡ' ಎಂದ ಶನಿವಾರದ ಮಾರನೇ ದಿನ. ಏನೂ ತೋಚದೆ ಮಂಕಾಗಿ, ಚರ್ಚಿಂದ ಮರಳುತ್ತ ಜಸಿಂತಾ ಕ್ವಾರ್ಟರ್ಸ್‌ಗೆ ಬಂದಳು. ವೆಂಕಟ ರಾವ್ ಮನೇಲಿದ್ದ. ಅವನೊಬ್ಬ, ತಾನು ಆಸರೆ ಆಗಬಲ್ಲೆ ಎಂಬ ಅಭಿಪ್ರಾಯ ಮೂಡಿಸಿದ್ದ. ಮೇ ತಿಂಗಳು. ದೂರದಲ್ಲಿ ಹೂ ಅರಳಿದ್ದ ಗುಲ್‌ಮೊಹರ್ ಬಿಸಿಲಲ್ಲಿ ಏಕಾಂಗಿ ನಿಂತಿತ್ತು.

ವೆಂಕಟ ರಾವ್ ಇವಳನ್ನ ಕಂಡು ಅರಳಿದ. ಬರಸೆಳೆದು ಮುತ್ತಿಟ್ಟ. 'ನೀನೇನೂ ಯೋಚಿಸಬೇಡ' ಅಂದ. ಜಸಿಂತಾಳ ಮನಸ್ಸಿನ ತಾಕಲಾಟ ಹೆಚ್ಚಾಗಿ, ನಾಲಗೆಯ ಪಸೆ ಆರಿ, ಮೈ ಬೆವರಿ ಅದೇ ಮಂಚದಲ್ಲಿ ಒರಗಿಕೊಂಡಳು. ವೆಂಕಟ ರಾವ್ ಒಂದು ಲೋಟ ನೀರು ತಂದು ಕುಡಿಸಿ, ಅವಳನ್ನು ಸಂತೈಸಿದ. 'ವಾಸಂತೀ' ಎಂದು ಅವಳ ಮಗ್ಗುಲಿಗೆ ತಾಗಿ ಮಲಗಿದ. ಸ್ವಲ್ಪ ಹೊತ್ತಾದಮೇಲೆ ಬಚ್ಚಲಿಗೆ ಹೋಗಿ ತಣ್ಣೀರ ಸ್ನಾನ ಮಾಡಿದ. ಘಮಘಮ ಪೌಡರ್ ಸುರುವಿಕೊಂಡ. ವಾರದ ಮೇಲೆ ಮತ್ತೆ ಅವಳು ಅಲ್ಲಿಗೆ ಬರುತ್ತಿರುವಾಗ, ಈ ಸುಶೀಲಳೇ, ಅವನು ಬೆಳಗಾವಿಗೆ ಒಂದು ವರ್ಷದ ಟ್ರೈನಿಂಗ್‌ಗೆ ಹೋಗಿದ್ದು, ಸಾಮಾನೆಲ್ಲ ತಗೊಂಡು ಹೋಗಿದ್ದು, ಮನೆ ತನಗೆ ಕೊಟ್ಟಿದ್ದು ತಿಳಿಸಿದಳು. ಹೇಳದೆ ಕೇಳದೆ ಹೋದ. ಹೋದವನು ವಿಳಾಸ ಕೂಡಾ ಕೊಡಲಿಲ್ಲ. ಹುಡುಕಿ ಬರೆದರೆ ಉತ್ತರವಿಲ್ಲ.

ನೆನಪಿನ ಹಿಂಸೆಯಲ್ಲಿ ಜಸಿಂತಾಳ ಕಣ್ಣಲ್ಲಿ ತೇವ ಮೂಡಿತ್ತು, ಅದೆಷ್ಟನೆಯ ಸಲವೋ?

ಬಾಗಿಲಿಗೆ ಬೀಗ ಹಾಕುತ್ತಿದ್ದಾಗ ಸುಶೀಲಳನ್ನು ಕೇಳಿದಳು, ''ವೆಂಕಟ ರಾವ್, ಅವರೆಲ್ಲಿದ್ದಾರೆ ಈಗ?''

ಕೀಲಿ ತಿರುವುವುದನ್ನು ನಿಲ್ಲಿಸಿ ಜಸಿಂತಾಳ ಮುಖ ನೋಡಿದಳು ಸುಶೀಲ. ಅಂದಳು, ''ಬಾ ಆಫೀಸಿನಲ್ಲಿ ಕೂತು ಮಾತಾಡೋಣ. ಟೈಂ ಆಯ್ತು. ನಾಳೆ ಸೆಕೆಂಡ್ ಸಾಟರ್ಡೇ. ಎಲ್ಲರೂ ಹೊರಡೋದರಲ್ಲಿ ಇರ್ತಾರೆ. ಮೇನೇಜರ್ ಗಲಾಟೆ ಮಾಡ್ತಾನೆ. ಅವನಿಗೆ ಹೋಗಲಿಕ್ಕೆ ಆಗಲ್ಲ ಅಂತ.''

ಆಫೀಸಿನ ಮುಂದೆ ಬಂದಾಗ ಜಸಿಂತಾಳ ದೃಷ್ಟಿ, ಅಯಾಚಿತವಾಗಿ ಮತ್ತೆ ಆ ಅರಳಿ ಮರದತ್ತ ಹೋಯಿತು. ಗಾಳಿ ನಿಂತು, ಬೇಸಗೆಯ ಶೆಖೆಗೆ ಅದು ಮೆಲ್ಲಗೆ ಎಲೆ ಬೀಸಿ ಗಾಳಿ ಹಾಕಿಕೊಳ್ಳುತ್ತಿತ್ತು.

ಸುಶೀಲ ಅಂದ ಹಾಗೇ ಆಫೀಸು ತೂಕಡಿಸುತ್ತಿತ್ತು. ಮೇನೇಜರ್, ಇವರು ಬರುತ್ತಲೇ ಜಸಿಂತಾಳ ಕಡೆಗೆ ಪ್ರಶ್ನಾರ್ಥಕ ನೋಟ ಬೀರಿ, ಸುಶೀಲಳನ್ನು ಹತ್ತಿರ ಕರೆದು, ಏನೋ ಮೆತ್ತಗೆ ಹೇಳಿ, ಬ್ಯಾಗ್ ಹಿಡಿದು ಹೊರನಡೆದ. ಅವನು ಅತ್ತ ಹೋದೊಡನೆ ಸುಶೀಲಳಿಗೆ ನಗು ಬಂತು. ಜಸಿಂತಾಳೂ ನಕ್ಕಳು, "ಇವತ್ತು ನಾನೂ ಹೀಗೇ, ಓ.ಸಿ." ಅಂತ.

"ವೆಂಕಟ ರಾವ್ ಟ್ರೈನಿಂಗ್ ಮುಗಿದು ಗದಗಕ್ಕೆ ಪೋಸ್ಟಿಂಗ್ ಆಯ್ತಂತೆ, ಅವನನ್ನು ಹುಡುಕಿ ಗದಗಕ್ಕೆ ಹೋಗಿದ್ದೆವು. ಅಲ್ಲಿಂದ ಅವರಿಗೆ ಬಾಗಲಕೋಟೆಗೆ ವರ್ಗವಾಯಿತು ಅಂದರು, ಅಲ್ಲಿಗೂ ಹೋದೆವು. ಅಲ್ಲಿಂದ ಸವದತ್ತಿಗೆ ಅಂದರು. ಅಲ್ಲಿ ಆತ ಸಿಕ್ಕಿದರು ಜಸಿಂತಾ, ಕೆಂಪಗೆ, ದಪ್ಪಗೆ ಹೇಗೆ ಆಗಿದ್ದರು ಅಂತೀ, ಗುರುತೇ ಸಿಗಲಿಲ್ಲ. ಆಶ್ಚರ್ಯ ಅಂದರೆ, ಆತ ಮನೆಗೆ ಕರೆಯದೆ ಹೋಟೇಲಿನಲ್ಲಿ ಊಟ ಹಾಕಿಸಿದರು. ಆತನ ಹೆಂಡತಿ ತುಂಬ ಮಡಿವಂತೆ ಇರಬೇಕು. ಯಾವುದೋ ಒಂದು. ನನಗದು ಮುಖ್ಯವಾಗಿರಲಿಲ್ಲ. ನಮಗೆ ಬೇಕಿದ್ದ ಕಾಗದ ಆತ ಸಂತೋಷವಾಗೇ ಬರೆದುಕೊಟ್ಟರು. ಕೆಜಿಎಫ್ ನಲ್ಲಿ ನನಗೆ ಆಸಕ್ತಿಯಿಲ್ಲ ಅಂದರು. ಅವರು ಬರೆದ ಕಥೆಗಳ ಪುಸ್ತಕ ಕೊಟ್ಟರು," ಸುಶೀಲ ಹೇಳುತ್ತಿದ್ದಳು. ಜಸಿಂತಾಳ ಎದೆಯಲ್ಲಿ ಏನೋ ಚುಚ್ಚಿದಂತಾಯ್ತು.



"ನೀನು ಓದಿದೆಯಾ? ಅದರಲ್ಲಿ ನನ್ನ ಬಗ್ಗೆ ಏನಾದರೂ ಬರೆದಿದ್ದಾರಾ?", ಕಾತುರದಿಂದ ಕೇಳಿದಳು. ಸಹಜವೇ. ವೆಂಕಟರಾಯ ಹೇಳುತ್ತಿದ್ದ: 'ಜಸೀ, ನಿನ್ನ ಬಗ್ಗೆ ನಾನು ಡಿವೈನ್ ಕಾಮಡಿಗಿಂತ ಶ್ರೇಷ್ಠ ಕಾವ್ಯ ಬರೀತೀನಿ'.

"ಓದಿದೆ. ಅದೇ ಆಂಗ್ಲೋ ಇಂಡಿಯನ್ ಕಾಲನಿಯ ಮರ್ಡರ್ ಕೇಸಿನ ಹಿನ್ನೆಲೇಲಿ ವೆಂಕಟ ರಾವ್ ವಿಚಾರ ಸ್ವಲ್ಪ ಇತ್ತು. ಕಮೀಶನರ್, ಮೇನೇಜರ್ ಕೂಡಿ, ಇವನ ಕೈಲಿ ಯಾವುದೋ ಸುಳ್ಳು ಡೆತ್ ಸರ್ಟಫಿಕೆಟ್ ಬರೆಸಿ ದುಡ್ಡು ತಿಂದಿದ್ದರು. ಆ ಖೂನಿಗಳು ಆದಮೇಲೆ ಆತ ತುಂಬ ಹೆದರಿಬಿಟ್ಟಿದ್ದ. ಏನೂ ಆಗಲಿಲ್ಲ ಅನ್ನು. ಮನೇಲಿದೆ ಪುಸ್ತಕ. ನಿನಗೆ ಕನ್ನಡ ಬರಲ್ಲವಲ್ಲ. ಅವನು ನಿನ್ನ ಬಗ್ಗೆ ಎಂಥದೂ ಬರೆದೂ ಇಲ್ಲ ಬಿಡು" ಅಂದಳು ಸುಶೀಲ. ನಂತರ ಸ್ವಲ್ಪ ಹೊತ್ತು ಸುಮ್ಮನಿದ್ದು, ಹೇಳುವುದೋ ಬೇಡವೋ ಎಂದು ಸ್ವಲ್ಪ ಚಡಪಡಿಸಿ ಹೇಳಿದಳು, ಹೊಟ್ಟೆ ಉಬ್ಬರ ಇಳಿಸಿಕೊಳ್ಳಲೆಂಬಂತೆ. "ಆತ ನಿನ್ನ ಬಗ್ಗೆ ಕೇಳಲಿಲ್ಲ. ತಡೆಯಾಕಾಗದೆ ನಾನೇ ಹೇಳಿದೆ, 'ಜಸಿಂತಾಗೆ ಮದುವೆಯಾಯ್ತು' ಅಂತ. ಆತ ಯಾವುದೋ ಭಾರ ಕಳೆದವನಂತೆ 'That's good' ಅಂದರು" ಎಂದಳು.

ಜಸಿಂತಾಗೆ ಗಂಟಲು ಕಟ್ಟಿಬಂತು. ಬ್ಯಾಗ್ ಹೆಗಲಿಗೇರಿಸಿ ಎದ್ದುನಿಂತು, ''ಬರಲಾ'' ಅಂದಳು. ಸುಶೀಲಳಿಗೆ ತಳಮಳ ಶುರುವಾಗಿ ಕೇಳಿದಳು: ''ಬೇಜಾರಾಯ್ತಾ ಜಸೀ, ನೀನು ಇನ್ನೂ ಅವರನ್ನ ಮರೆತಿಲ್ಲವಾ?''

ಹೇಗೆ ಮರೆತಾಳು-ಮೊದಲು ಕೂಡಿದ ಪುರುಷನನ್ನ ಹೆಣ್ಣು?

ಅವಳು ಉತ್ತರಿಸಲಿಲ್ಲ. ಬೀಳ್ಕೊಡಲು ಬಾಗಿಲವರೆಗೂ ಬಂದ ಸುಶೀಲ ಹೇಳಿದಳು: ''ಇನ್ನೊಂದು ವಿಚಾರ ಜಸೀ. ಯೂ ಮೇ ನಾಟ್ ಲೈಕ್ ಇಟ್. ಆತ ಈ ಊರಿಗೆ ಮರಳಿ ಬಂದಿದ್ದಾರೆ. ಈ ಡಿಪಾರ್ಟ್‌ಮೆಂಟ್ ಬಿಟ್ಟು, ಸುಮಾರು ಹತ್ತು ವರ್ಷಗಳ ಹಿಂದೆಯೇ ಬ್ಯಾಂಕ್ ಸೇರಿದರಂತೆ. ಈಗ ಹೊಸದಾಗಿ ಬ್ಯಾಂಕ್ ಶಾಖೆ ಶುರುವಾಗಿದೆಯಲ್ಲ, ಅದಕ್ಕೆ ಆತ ಮೇನೇಜರ್.'' ಜಸಿಂತಾಗೆ ಯಾಕೋ ತೊಡೆ ನಡುಗಿ ಭೂತ ನೆನಪಾಯಿತು. ವಾಕರಿಕೆ ಬಂದಂತಾಯ್ತು.

ಅವಳು ಆಫೀಸಿನ ಆವರಣ ದಾಟಿ, ಬಸ್‌ಸ್ಟಾಪ್ ಬಳಿಗೆ ಬರುವಾಗ, ಯಾರದೋ ಸ್ಕೂಟರಲ್ಲಿ ಹಿಂದೆ ಕೂತು ಹೋಗುತ್ತಿದ್ದ ವೆಂಕಟ ರಾವ್ ಅವಳಿಗೆ ಕಂಡ. ಇಷ್ಟು ದಪ್ಪ, ಇಷ್ಟು ಎತ್ತರ. ಮೀಸೆ ಬೋಳಿಸಿ, ನರೆಗೂದಲು ಶಾರ್ಟ್ ಕಟ್ ಮಾಡಿಸಿ, ಕನ್ನಡಕ ಧರಿಸಿ, ಹತ್ತು-ಇಪ್ಪತ್ತು ವರ್ಷ ಜಾಸ್ತಿ ವಯಸ್ಸಾದವನಂತೆ ಕಂಡವನು ಇವನೇ ಎಂದು ಅರಿವಾಗಲು ಕ್ಷಣ ಹಿಡಿಯಿತವಳಿಗೆ. ಇತ್ತ ತಿರುಗಿ ನೋಡಿದನಾದರೂ, ನವೆದು, ಬಾಡಿ, ಬಸವಳಿದು ಮತ್ತಷ್ಟು ಕಪ್ಪಗಾಗಿದ್ದ ಜಸಿಂತಾಳ ಗುರುತು ಅವನಿಗೆ ಹತ್ತಿರಲಿಲ್ಲ. ಅವಳಿಗೆ ನಿರಾಸೆಯೂ, ಆತಂಕವೂ ಒಂದೇ ಸಲ ಆದವು. ಜೊತೆಗೆ ತನ್ನ ಹೆದರಿಸಿದ ಆ ಆಕೃತಿಯ ಬಗ್ಗೆ ಕುತೂಹಲ ಜಾಸ್ತಿಯಾಗತೊಡಗಿತು.

ಜಸಿಂತಾ ರಾಜರ್ಸ್ ಕ್ಯಾಂಪಿನ ಗಣಿ ಕೆಲಸಗಾರರ ಗೂಡುಮನೆಗಳ ಸಾಲಲ್ಲಿನ ತನ್ನ ಮನೆ ತಲುಪಿದಾಗ, ಪ್ಯಾಟ್ರಿಕ್ ಆಘಾತದ ಸುದ್ದಿ ತಂದಿದ್ದ. ಗಣಿ ಮುಚ್ಚಲು ಆದೇಶ ಬಂದಿರುವುದರಿಂದ, ಮುಂದಿನ ತಿಂಗಳ ಮೊದಲನೇ ತಾರೀಖಿನಿಂದ ತನ್ನಂತಹ ತಾತ್ಕಾಲಿಕ ಕೆಲಸಗಾರರಿಗೆ ಉದ್ಯೋಗವಿಲ್ಲವೆಂದು ನೋಟೀಸ್ ಜಾರಿ ಮಾಡಿದ್ದರು. ಇಷ್ಟು ದಿನದ ಮಸ್ಟರ್ ರೋಲ್ ಕೆಲಸಕ್ಕೆ ಪ್ರತಿಫಲವಾಗಿ, ಈ ಲೈನ್ ಮನೆಯನ್ನು, ತಿಂಗಳಿಗೆ ಒಂದು ರೂ. ಬಾಡಿಗೆ ಲೆಕ್ಕದಲ್ಲಿ ತಮಗೇ ಕೊಡುವುದಾಗಿ ಯೂ. ಟರ್ಮಿನೇಶನ್ ಬೆನಿಫಿಟ್ ಅಂತ ಹತ್ತು ಸಾವಿರ ಸಿಗುತ್ತದೆಂದೂ ತಿಳಿಸಿದ ಅವನು.

ಮೂಲೆ ಹಿಡಿದಿದ್ದ ತಾಯಿ. ಮದುವೆಯಾಗದೆ ಉಳಿದಿದ್ದ ತಂಗಿ. ಬುದ್ಧಿಮಾಂದ್ಯಳಾದ ಸುಂದರಿ ಮಗಳು... ಈಗ ಇದ್ದ ಕೆಲಸಕ್ಕೂ ಸಂಚಕಾರ. ಅದೃಷ್ಟವೆಂದರೆ ಇದು. ಕೇಳಿಬರಬೇಕು ಅಂದುಕೊಂಡ. ಮತ್ತೊಂದೆಂದರೆ ಮಗಳು ಮೈನೆರೆದಿದ್ದಳು. ಸ್ಪೆಷಲ್ ಸ್ಕೂಲಿನಿಂದ ಒಬ್ಬರು ಕರೆತಂದು ಮನೆಗೆ ಬಿಟ್ಟು ಹೋಗಿದ್ದರು.

ಜಸಿಂತಾ ಮೂಲೆಯಲ್ಲಿ ಮಲಗಿದ್ದ ಮಗಳ ಬಳಿ ಕೂತು, ಕಕ್ಕಲಾತಿಯಿಂದ ಅವಳ ತಲೆ ನೇವರಿಸಿದಳು. ಅವಳಿಗೆ ತಡೆಯಲಾರದಷ್ಟು ಅಳು ಒತ್ತರಿಸಿಬಂತು. ನಡುಮನೆಯಲ್ಲಿ ಕೂತು ಬಿಕ್ಕುತ್ತಿದ್ದವಳ ಬಳಿ ಬಂದ ಪ್ಯಾಟ್ರಿಕ್. ''ಅಳಬೇಡ. ಸೈಕಲ್ ಷಾಪ್ ಜಾನ್, 'ಅಂಗಡಿ ಸಾಮಾನೆಲ್ಲ ಹದಿನೈದು ಸಾವಿರಕ್ಕೆ ತಗೊಂಡು ಬಿಡು. ಡೆಡ್ ಚೀಪ್. ನಿನಗಾಗಿ' ಅಂದಿದ್ದಾನೆ. ಹೊಸದಾಗಿ ಬ್ಯಾಂಕ್ ಆಗಿದೆಯಲ್ಲ. ಸ್ವಲ್ಪ ಸಲೀಸಾಗಿ ಸಾಲ ಸಿಗುತ್ತಂತೆ. ಐದು ಸಾವಿರ ಡಿಪಾಜಿಟ್ ಮಾಡಿ ಹದಿನೈದು ಸಾವಿರ ತಗೊಳ್ಳಾಣ. ಸ್ವಲ್ಪ ಸಾಮಾನು ಹೊಸದಾಗಿ ತಗೋಬೇಕಾಗುತ್ತೆ. ಏನಂತೀ'' ಅಂತಂದ. ಅವನು ಇನ್ನೂ ಏನಾದರೂ ಹೇಳುತ್ತಿದ್ದನೇನೋ. ''ಎಂಥಾದ್ದೂ ಬೇಡ. ಯಾರನ್ನೂ, ಏನೂ ಕೇಳೋ ಅಗತ್ಯವಿಲ್ಲ'' ಅಂದಳು. ಅವಳ ಮುಖ ನೋಡಿ, ಅಲ್ಲಿನ ಭಾವ ಅರ್ಥವಾಗದ ಅವನು, ''ಬೇರೆ ಎಂಥದು

ಮಾಡೋದು'' ಅಂತ ಅವಳನ್ನೇ ಕೇಳಿದ. ''ಎಂಥದಾದರೂ ಆದೀತು. ಕೆಲಸ ನಿಲ್ಲೋವರೆಗೂ ಸುಮ್ಮನಿರಿ'' ಅಂದಳು.

ಸಂಜೆಗತ್ತಲು ಇಳಿಯುವಷ್ಟರಲ್ಲಿ ಜಸಿಂತಾಳಿಗೆ ಜ್ವರ ಮರುಕಳಿಸಿದಂತಹ ಭಾವನೆ ಬಲಿಯಿತು. ಪ್ಯಾಟ್ರಿಕ್‌ನ ಕರೆದು, ''ಯಾಕೋ ಮತ್ತೆ ಹುಷಾರಿಲ್ಲ ಅನ್ನಿಸ್ತಿದೆ. ಡಾ|| ಸಂಪತ್ ಹತ್ತಿರ ಹೋಗಿ ಬಂದುಬಿಡ್ತೀನಿ'' ಅಂದಳು.

''ಇರು. ನಾನೂ ಬರ್ತೀನಿ'' ಅಂದ ಅವನು.

''ಬೇಡ. ಮನೇ ಕಡೇನೆ ಇರಿ. ಮಗು ಎದ್ದೀತು'' ಎಂದು ಹೊರಟು, ಸಿಟಿ ಬಸ್ ಹತ್ತಿದಳು. ಬಸ್ ಮುನಿಸಿಪಲ್ ಆಫೀಸಿನ ಮುಂದು ಬಂದಾಗ ಯಾಕೋ ಥಟ್ಟನೆ ಇಳಿದುಬಿಟ್ಟಳು. ಅರಳಿ ಮರದ ಬುಡದಲ್ಲಿ ರಾಶಿ ಹಾಕಿದ್ದ ಸೈಜುಕಲ್ಲುಗಳ ಮೇಲೆ ಕೂತಳು. ಪ್ಯಾಟ್ರಿಕ್ ಮತ್ತು ಅವನದಲ್ಲದ ತನ್ನ ಮಗಳು ಮನಸ್ಸಿಗೆ ಬಂದರು. ತಪ್ಪು ಮಾಡದ ಮನುಷ್ಯನೇ ಇಲ್ಲ ಜಸೀ ಅಂತ ಪ್ಯಾಟ್ರಿಕ್ ಅದೆಷ್ಟೋ ಸಲ ಹೇಳಿದ್ದ. ಯಾವ ಸಲವೂ ಅವನ ಮಾತಲ್ಲಿನ ಮಾರ್ದವತೆ ಕಡಿಮೆಯಾಗಿರಲಿಲ್ಲ. ಆ ಮಗುವನ್ನು ತನ್ನದೇ ಎಂಬಂತೆ ನೋಡುತ್ತಿದ್ದ.

ಹೊರಗೆ ಕತ್ತಲಾಗಿತ್ತು. ಕ್ವಾರ್ಟರ್ಸ್ ಕಡೆಯಿಂದ ಯಾರೋ ಬರುವಂತಾಗಿ ನೋಡಿದರೆ, ಮೂಲೆಯ ದೀಪದ ಬೆಳಕಲ್ಲಿ ಸುಶೀಲ ಕಂಡಳು. ಅವಳಿಗೆ, ಅರಳಿ ಮರದ ಬುಡದಲ್ಲಿ ಕೂತ ಈ ತನ್ನ ಆಕೃತಿ, ಹೆದರಿಸಿ ಓಂತಿರುಗಿಸಲು ಹುನ್ನಾರು ಹೂಡುತ್ತಿರುವಂತೆ ಅನ್ನಿಸೀತು ಎಂದು, ''ನಾನು ಸುಶೀಲಾ, ಜಸಿಂತಾ'' ಅಂತ ಕರೆದಳು.

ಸುಶೀಲಳಿಗೆ ತನ್ನ ಅರ್ಥ್ರೈಟಿಸ್‌ಗೆ ಇಲಾಜು ಮಾಡಿಸಲಿಕ್ಕೆ ಡಾಕ್ಟರ ಬಳಿ ಹೋಗಲಿಕ್ಕಿತ್ತು. ಜಸಿಂತಳೇನಾದರೂ ಮಾತಾಡಿರದಿದ್ದರೆ ಅವಳು ಮರಳಿ ಮನೆಗೆ ಹೋಗುವವಳೇ. ಅವಳಿಗೆ ಆಶ್ಚರ್ಯವಾಯಿತು. ''ಇದೇನು ಜಸೀ, ಇಷ್ಟು ಹೊತ್ತಲ್ಲಿ ಇಲ್ಲಿ ಕೂತೆ'' ಅಂದು, ಧ್ವನಿ ತಗ್ಗಿಸಿ, ''ಬಾ ಬಾ'' ಅಂತ ಅವಳನ್ನು ಎಬ್ಬಿಸಿಕೊಂಡು ಆಫೀಸಿನ ಗೇಟಿನವರೆಗೂ ಬಂದು, ''ಆ ಮರದಲ್ಲಿ ಪ್ರೇತಾತ್ಮಗಳಿವೆ. ಯಾರ್ಯಾರಿಗೆ ಏನೇನೋ ಕಾಣುತ್ತೆ. ಮೊನ್ನೆ ನನಗೆ ನನ್ನ ಗಂಡನ ರೂಪದ ಆಕೃತಿ ಕಂಡು, ನನ್ನ ಕರೆದಂತೆ ಭಾಸವಾಗಿ ಜ್ವರ ಬಂದುಬಿಟ್ಟಿತ್ತು. ತೀರಾ ಮೊನ್ನೆ ಜಸೀ'' ಅಂದಳು. ಮರವನ್ನೇ ನೋಡುತ್ತಾ, ಮುಂದುವರಿಸಿ, ''ಅದಕ್ಕೇ, ಮರಕ್ಕೆ ರಚ್ಚೆ ಕಟ್ಟಿಸಿ, ದೇವರ ವಿಗ್ರಹ ಪ್ರತಿಷ್ಠಾಪನೆ ಮಾಡಿಸಲು ನಾವೆಲ್ಲ ಚೂರು ಚೂರು ಹಣ ಹಾಕಿ ರೆಡಿ ಮಾಡಿಸ್ತಿದೀವಿ. ಅದೇ ಕಲ್ಲುಗಳವು'' ಎಂದಳು.

ಜಸಿಂತಾ ತನ್ನ ಅನುಭವವನ್ನ ಹೇಳದಳು. ತನ್ನ ಜ್ವರದ ಬಗ್ಗೆಯೂ ಹೇಳಿದಳು. ತಾನೂ ಆ ಮರದತ್ತಲೇ ನೋಡುತ್ತ, ''ವೆಂಕಟ ರಾವ್ ಆತ್ಮಸಾಕ್ಷಿ ಆ ರೂಪ ಪಡೆದಿದ್ದರೆ, ಒಂದೆರಡು ಪ್ರಶ್ನೆ ಕೇಳುವಾ ಅಂತ ಬಂದೆ ಸುಶೀಲ'' ಅಂದಳು.

ಸುಶೀಲ ಮಾತಾಡಲಿಲ್ಲ. ಬದಲಿಗೆ ಇಬ್ಬರಲ್ಲಿ ಯಾರು ಹೆಚ್ಚು ಸುಖಿಗಳು ಅಂತ ಕೇಳಿಕೊಂಡಳು.



ಸೂರಜ್ ಸರ್ಕಲ್ಲಿನ ಟ್ರಾಫಿಕ್ ಸಿಗ್ನಲ್ ಬಳಿ ಯಾರೋ 'ವಾಸಂತೀ' ಅಂದಂತಾಗಿ ಜಸಿಂತ ಹಿಂತಿರುಗಿ ನೋಡಿದಳು. ವೆಂಕಟ ರಾವ್! ಮತ್ತೊಬ್ಬ ಹೆಂಗಸು. ಒಂದು ಹೆಣ್ಣು ಮಗು. ತನ್ನ ಮಗುವಿನಂಥದೇ ರೂಪು.

''ಈಕೆ ಸುಶೀಲ. ಈಕೆ ವಾಸಂತಿ. ನಾನು ಇಲ್ಲಿದ್ದಾಗ ನನ್ನ ಒನ್ ಟೈಂ ಕಲೀಗ್ಸ್'' ಅಂದು ಪರಿಚಯ ಮಾಡಿಸಿ, ''ಈಕೆ ನನ್ನ ಹೆಂಡತಿ ಅನಸೂಯ, ಇವಳು ನನ್ನ ಮಗಳು'' ಅಂದ.

ಜಸಿಂತಾಗೆ ಯಾಕೋ ಅವನ ಫಾರ್ಮಾಲಿಟಿಗಳಿಂದ ಇರಿಸುಮುರಿಸಾಯಿತು. ಅನಸೂಯಳನ್ನು ಕುರಿತು ಅವಳು, ''ಕ್ಷಮಿಸಿ, ಬಹಳ ದಿನವಾಗಿ ನಿಮ್ಮ ಯಜಮಾನರು ನನ್ನ ಹೆಸರು



ಮರೆತಿರೋಹಾಗಿದೆ. ನಾನು ಜಸಿಂತಾ. ಜಸಿಂತಾ ಪ್ಯಾಟ್ರಿಕ್'' ಅಂದಳು. ಕನಿಕರ ತುಂಬಿದ ನೋಟ ಅನಸೂಯಳತ್ತ ಬೀರಿ, ಪ್ರೀತಿಯಿಂದ ಆ ಮಗುವಿನ ಕೆನ್ನೆ ತಟ್ಟಿದಳು. ''ಬರ್ತೀನಿ'' ಅಂದಳು.

ಅವರು ಹೋದಮೇಲೆ ವೆಂಕಟರಾಯನ ಹೆಂಡತಿಗೆ ಜಸಿಂತಾ ಎಂಬ ಆ ಹೆಸರು ತೀರಾ ಪರಿಚಿತವೆನ್ನಿಸಿ ತಲೆ ಕೆರೆದುಕೊಂಡಳು. ಹೌದು. ಅವಳಿಗೆ ನೆನಪಿಗೆ ಬಂತು: ವೆಂಕಟರಾಯ ಲಾರೆನ್ಸ್‌ನ ಪುಸ್ತಕದಲ್ಲಿ, ''ವಾಸಂತಿ, ಇವಳು ನಿತ್ಯ ವಸಂತೆ'' ಅಂತ ಬರೆದಿದ್ದ. ಈ ಸಂಬಂಧದಲ್ಲಿ ಎಂಥದೋ ಛಿಷಿ ಇರುವಂತೆ ಅವಳಿಗೆ ತೋರಿ, ಬಿಗಿದುಕೊಂಡಳು. ವೆಂಕಟರಾಯನಿಗೆ ಅರ್ಥವಾಗದೆ, ರಮಿಸಲು ಯತ್ನಿಸಿ, ಯತ್ನಿಸಿ ಮಲಗಿದ್ದ ಮಗಳು ಎದ್ದುಕೂತಳು. ಅನಸೂಯ ಅವನತ್ತ ಹಾಕಿದ್ದ ಬೆನ್ನು ತಿರುವಲಿಲ್ಲ.

ವೆಂಕಟರಾಯನಿಗೆ ಆಕಾಶವಾಣಿಯಿಂದ ಒಂದು ಕತೆ ಓದಲು ಕರೆ ಬಂದಿತ್ತು. ಜಸಿಂತಾ ಕಥಾವಸ್ತುವಾಗಿ ಅವನು ಇಲ್ಲಿಗೆ ವರ್ಗವಾದಾಗಿನಿಂದ ಹಣಕಿ ಹಾಕಿದ್ದಳು. ಇವತ್ತು ಅವಳಿಂದ, ''ಜಸಿಂತಾ, ಜಸಿಂತಾ ಪ್ಯಾಟ್ರಿಕ್'' ಎಂಬ ನಿರ್ಧಾರದ ನುಡಿ ಅವನಲ್ಲಿದ್ದ ವಸ್ತುವಿಗೆ ಹೊಸ ತಿರುವು ಕೊಡಬಹುದಾದಂತೆ ತೋರಿತು. ಸ್ವಲ್ಪ ಕಲ್ಪನೆ, ಸ್ವಲ್ಪ ಅನುಭವವಿದ್ದರೆ ಸಾಹಿತ್ಯಕ್ಕೆ ರುಚಿ ಜಾಸ್ತಿ ಅಂತ ಅವನ ನಂಬಿಕೆ, ಅವನ ದ್ರವ್ಯ ಕೂಡ.

ಬೆಳಗ್ಗೆ ಎದ್ದು, ಸುಶೀಲಳ ಹತ್ತಿರ ಮಾತಾಡಲು, ಬೈಕ್ ಹತ್ತಿ ಮುನಿಸಿಪಲ್ ಆಫೀಸಿನ ಕಡೆ ಹೊರಟ. ಹೆಂಡತಿ ಕೇಳಿದಳು: ''ಏನು ಜಸಿಂತಾ ಪ್ಯಾಟ್ರಿಕ್ ಮನೆಗಾ?'' ಉತ್ತರಿಸಲಿಲ್ಲ, ಯಾವ ರಾಮಾಯಣ ಅಂತ.

ಅವನು ಮುನಿಸಿಪಲ್ ಆಫೀಸ್ ಗೇಟು ದಾಟಿರಬೇಕು, ''ವೆಂಕಟ ರಾವ್, ವೆಂಕಟ ರಾವ್ ದೇಶಪಾಂಡೆ,'' ಅಂತ ಯಾರೋ ಕರೆದಂತಾಯ್ತು. ಧ್ವನಿ ಬಂದತ್ತ ತಿರುಗಿದರೆ, ಒಂದು ಬಿಳೀ ಆಕೃತಿ - ತನ್ನದೇ! ಅರಳಿ ಮರದ ಕೆಳಗೆ ಕೂತಿದೆ. ''ಬಾ, ಸುಶೀಲ ಯಾಕೆ? ಇಡೀ ಕತೆ ನಾನೇ ಹೇಳ್ತೇನಿ, ಬಾ'' ಅಂತ ಕರೆಯುತ್ತಿದೆ!

ವೆಂಕಟ ರಾವ್ ಮೂರ್ಛೆ ಹೋದ.



[illegible]





# ಸಾಲ್ಮಿಂಚು

ಉದ್ರೇಕಗೊಂಡ ಗಾಳಿ, ನಿಶ್ಚಲ ಗಿಡ-ಮರಗಳ ನೆರಳುಗಳ ಹಾರಿಸಿಕೊಂಡುಹೋಯಿತು.

ಮಂಜುನಾಥ ವಿ.ವಿ.

ಗೊಮ್ಮಟನೆದುರು ಕುಬ್ಜ ವಿಕಲಾಂಗ ಮೊರೆಯಿಡುತ್ತಾನೆ. ದೇವರೇ ನನ್ನ ಕೂಗಿನ ಅಳತೆಯೆಷ್ಟು?

ಉಗಮ ಶ್ರೀನಿವಾಸ್

ಪ್ರತಿ ರಾತ್ರಿ ಹನ್ನೊಂದರ ಹೊತ್ತಿಗೆ ಸದ್ದಿನ ರೈಲು ನಮ್ಮ ಏಕಾಂತಗಳ ಹಾದು ಹೋಗುವುದು.

ಸಂದೀಪ ನಾಯಕ

ಕತ್ತಲೆಗೆ ಬೆಕ್ಕಿನ ಕಣ್ಣು, ಗೂಬೆ ಮುಖ, ಮಿಂಚು ಹುಳುವಿನ ಹೊಳಪು. ಕೆ. ರಮೇಶ

ನೋಡಲಿ ಬಿಡು ಗೆಳತಿ ದೀಪ. ಅದಕ್ಕೆಲ್ಲಿದೆ ಬಾಯಿ-ಹೇಳಲು ನಮ್ಮ ಏಕಾಂತದ ಚೆಲ್ಲಾಟ.

ಡಿ.ವಿ. ಬಡಿಗೇರ

ಬವಳಿ ಬಂದು ಬಿದ್ದ ಸಿದ್ದಿ ಮಗುವನ್ನು ಮುಟ್ಟದೆ ಕಾಪಾಡಿಕೊಂಡರು ಮಡಿವಂತ ಜನ ತಮ್ಮ ಮಾನ.

ಗಣೇಶ್ ಪಿ ನಾಡೋರ

ನನಗೆ ನಿಜವಾಗಿಯೂ ಕೋಪವಿಲ್ಲ ಯಾರ ಮೇಲೂ. ಕವನಗಳೇನೋ ಹುಟ್ಟಿಬಿಟ್ಟವು.

ಗೀತಾ ಹೆಗಡೆ

ಐದು ವರ್ಷಕ್ಕೊಮ್ಮೆ ಬಣ್ಣ ಹಚ್ಚಿಕೊಳ್ಳುವ ವಿಧಾನ ಸೌಧ ಇಟ್ಟಲ್ಲಿ ಕುಂಚಗಳ ಲೆಕ್ಕ. ಡಿ.ವಿ. ಬಡಿಗೇರ

ಈ ಜಗವ ಬೆಳಗಲು ಒಬ್ಬ ಸೂರ್ಯ ಬೇಕು, ನನ್ನ ಬಾಳ ಬೆಳಗಿಸಲು ಪುಸ್ತಕವೊಂದೆ ಸಾಕು.

ಪಿ. ಜಗನ್ನಾಥ

ಹಕ್ಕಿಯಾಗುವ ಆಸೆ ಹೊತ್ತು ಬ್ರಹ್ಮನ ಮುಂದೆ ನಿಂತೆ. ಅವ ನನ್ನ ಪುಕ್ಕ ಕತ್ತರಿಸಿ, 'ಮಣ್ಣಿಗೆ ಮುತ್ತಿಕ್ಕು' ಅಂದ.

ವಲ್ಲಿ ವಗ್ಗ

ಲಘು ಕತೆ



ಕೆ. ಮಹಾಂತೇಶ

# ಗುಳೇ ಹೊರಟವರು

ಅವರು ಹೊರಟಾಗ ರಸ್ತೆಯಲ್ಲಿ ನಿಂತ ಜನ ನಕ್ಕರು. ತೂತುಬಿದ್ದ ಟ್ರಂಕಿಗೆ ಅದು ಕೇಳಿಸಲಿಲ್ಲ. ಅವರು ತೆಪ್ಪಗಾದರು.

ಮಳೆಗಾಲ ದೂರವಿತ್ತು. ಬೇಸಿಗೆ ಬಿರು ಬಾನಿನಲ್ಲಿ ಒಂದು ದಿನ ಮಧ್ಯಾಹ್ನ, ಜಾತ್ರೆಗೆ ಗಂಗ ಹಣ ಕೇಳಲು ಬಂದ. ತೆಬರನಂತಿನವನು ಅವನನ್ನು ಒಳಕ್ಕೆ ಕರೆದು, ತುರುಕು ಮೈಯಿಗೆಯಿರುವ ಹರಕು ಅಂಗಿ ತೋರಿಸಿ, ತೂತು ಬಿದ್ದ ಟ್ರಂಕು, ಚೆಂದನೆಯ ಹೆಂಡತಿಯೊಂದಿಗೆ ಗುಳೇ ಹೊರಟಿರುವುದಾಗಿ ಮೆಲ್ಲಗೆ ಹೇಳಿದ. ಅದಕ್ಕಾಗಿ ಪೆಟಿ ಬೂರ್ಷ್ವಾ ಕಂತ್ರಿ, ಗಂಗ ಕನಿಕರಪಟ್ಟ. ಅದು ಹೋದ ವರ್ಷ ಹತ್ತಿ ತೂಗಿಸಿದ್ದು ಅಲ್ಪ ಸ್ವಲ್ಪ ಇನ್ನೂ ಕೊಡಬೇಕಾದ ದುಡ್ಡಿಗಾಗಿತ್ತು.

ಅವರು ಅವರ ಊರಿಂದ ಸುಮಾರು ದೂರ ಬಂದರು. ಆ ಜಾಗ ಬರೀ ಬಂಜರಿನಿಂದ ಕೂಡಿದ್ದು ಅಲ್ಲಿ ಪುರಾತನ ಕಾಲದ ಅರಳೀ ಮರವಿತ್ತು. ಸುತ್ತಲೂ ಬಿಕೋ ಎನ್ನುತ್ತಿತ್ತು. ಅದು ಈಗ ಅಷ್ಟೇನೂ ನಿರ್ಜನವಾಗಿರದೆ ಆಗಲೇ ಹತ್ತಾರು ಗುಡಿಸಲುಗಳು ಗುಳೇ ಹೊರಟು, ಹೇಳ ಹೆಸರಿಲ್ಲದಾಗಿ ಬಂದುದವರಾಗಿದ್ದರು. ಅಲ್ಲಿ ಇವರದೊಂದಾಯಿತು. ಹತ್ತಾರು ಗುಡಿಸಲುಗಳ, ಮೂವತ್ತು-ನಲವತ್ತು ಜನರ ಐವತ್ತು-ಅರವತ್ತು ನಾಲ್ಕೈದು ವರ್ಷದ ಮಕ್ಕಳಿಗೆ, ಮರ ಆಡಿಕೊಂಡಿರಲು ಅನುವಾಯಿತು. ಸುತ್ತಲೂ ಬಿಕೋ ಎನ್ನುತ್ತಿದ್ದ ಜಾಗದಲ್ಲಿ ಅವರು ಬಿಡಾರ ಹೂಡಲು ಕಾರಣವೇನೆಂದರೆ, ಜಾಗತೀಕರಣದ ಹೆಸರಿನಲ್ಲಿ ದೂರದ ದೇಶದವರು ಇಲ್ಲಿ ನೇರ ಬಂಡವಾಳ ಹೂಡಿ, ತಮ್ಮ ಫ್ಯಾಕ್ಟರಿ ಕಟ್ಟಲು ಆ ಜಾಗವನ್ನು ಆಯ್ದುಕೊಂಡಿದ್ದಾರೆ. ಅಲ್ಲಲ್ಲಿ ಜಾಲಿ ಪೊದೆಗಳು. ಮೊದಲು ಅಲ್ಲಿ ವಾಸವಿದ್ದವರನ್ನು ಎತ್ತಂಗಡಿ ಮಾಡಿಸಿ, ನೀರು-ನೆಲ-ಬಿಸಿಲು ಹಂಗಿನಿಂದ ಬೆಳೆದವರನ್ನು ಇವರು ಸಹಿಸದಾಗಿ ಅದಕ್ಕಾಗಿ ಅವರ ಮನೆಗಳನ್ನ ನೆಲಸಮ ಮಾಡಿದರು. ಮರದ ಸುತ್ತಲೂ ಬಿಸಿಲು ಸಿಡಿಯುತ್ತಿತ್ತು. ಮರದ ಕೆಳಗೆ ಅತಿ ಹೆಚ್ಚು ತಂಪು. ಅದು ಯಾವಾಗಲೂ ಬಿಸಿಲಿಗೆ, ನೆರಳಿನ ಸಮಾನುಪಾತ ಕಾಯ್ದುಕೊಂಡಿದೆ.

ಈಗ ಅಲ್ಲಿಗೆ ದೊಡ್ಡ ದೊಡ್ಡ ಫೋಸುಗಳು, ಸಿಜರ್ ಲಿಫ್ಟ್‌ಗಳು, ಮೆಷಿನ್‌ಗಳು, ಬುಲ್ಡೋಜರುಗಳು ಬಂದವು. ದಿಬ್ಬವನ್ನು ಮಟ್ಟ ಮಾಡಲೋಸುಗ ಅವು ಹಮ್ಮಿಕೊಂಡ ಕಾರ್ಯ ಅವುಗಳಿಂದ ನರಳುತಿತ್ತು. ಅವು ಎಂದೂ ಸೋಲದಾದವು. ಅವುಗಳ ಸಾಮರ್ಥ್ಯ ನೆಲವನ್ನು ಬಡಿದೆಬ್ಬಿಸುತ್ತಿತ್ತು. ಭೋರ್ ಎಂದು ಬೀಸುವ ಗಾಳಿಗೆ ಕೆಂಧೂಳು, ಮಧ್ಯಾಹ್ನ ಇನ್ನೂ ಕೆಂಪಾಗಿ, ಕೂಲಿ ಕಾರ್ಮಿಕರಿಗೆ ತಮ್ಮ ಊರಿನ ಸಂಜೆಯ ಗೋಧೂಳಿ ನೆನಪ ತರುತ್ತಿತ್ತು.




ಕೆಲ ದಿನ ನಂತರ ಮತ್ತಷ್ಟು ಜನರು ಬಂದರು. ಬಿಡಾರ ಹೂಡಿದರು. ಅವರ ಮಕ್ಕಳು, ಅವರ ಮಕ್ಕಳನ್ನು ಅನುಸರಿಸಿದರು. 'ಮಾನವ ಸಂಘಜೀವಿ' ಎಂಬುದನ್ನ ಅವರು ಪ್ರಮಾಣೀಕರಿಸಿದರು. ಪುರಾತನ ಅಶ್ವತ್ಥ ಮರ ತಾನಿರುವ ಸ್ಥಳದಲ್ಲೇ ಜಗತ್ತಿನ ಹಳೆಯದನ್ನ ಮತ್ತೆ ಹೊಸದನ್ನು ಕಾಣುತ್ತಿದೆ. ಅದನ್ನು ನೆಟ್ಟವರು ಅಥವಾ ನೆಡದವರು, ಅವರೂ ಆಜೀವಪರ್ಯಂತ ಆಗಲೇ ಹೊರಟುಹೋಗಿದ್ದಾರೆ.

ಮರುದಿನ ಮೇಲಿಂದ ಹೆಲಿಕಾಪ್ಟರ್‌ಗಳು ಬರತೊಡಗಿದವು. ಅವರು ಉನ್ನತ ವರ್ಗದವರಾಗಿದ್ದು, ಇವರಿಗಿಂತ ನೂರು ಪಟ್ಟು ಉತ್ತಮವಾಗಿರುವ ಸೂಟು, ಬೂಟು, ಸೇಂಟು ಮೆತ್ತಿಕೊಂಡು, ಬಹುಶಃ ಈ ಭೂಮಿಗೆ ಇವರೇ ಮೊದಲು ಬಂದವರೇನೋ ಎಂಬ ಸಂಶಯ ಹುಡುಗರಿಗಾಯಿತು. ಸುಡುವ ಬಿಸಿಲಿನಲ್ಲಿಯೂ ಪ್ಲಾಸ್ಟಿಕ್ ಜರ್ಕಿನ್ನಲ್ಲಿ ನೆಮ್ಮದಿ ಕಾಣುತ್ತಿದ್ದರು. ಕೂಲಿ ಕಾರ್ಮಿಕರ ಕಪ್ಪು ಮೈಯಿಂದ

ಅವರು ಇನ್ನೂ ಹೆಚ್ಚು ಹೆಚ್ಚು ಕೆಲಸ ಬಯಸಿದರು. ಉದ್ದನೆಯ ಮೆಷರಿಂಗ್ ಟೇಪಿನಿಂದ ದಿನವೂ ಅಳತೆ ಮಾಡಿದರು. ಈ ಕೂಲಿ ಕಾರ್ಮಿಕರ ಮಕ್ಕಳು ಅಶ್ವತ್ಥ ಮರದ ನೆರಳಿನಲ್ಲಿ ಸುಮ್ಮನೆ ಆಡಿಕೊಂಡಿರುವುದು ಸಮಯ ವ್ಯರ್ಥ ಮಾಡಿದಂತೆನಿಸಿ, ಅದು ಉತ್ತಮರಿಗೆ ಸರಿಬರಲಿಲ್ಲವೇನೋ, ಅವರಿಗೂ ಕೂಲಿ ಕೊಡುತ್ತೇವೆಂದರು. ಅದಕ್ಕಾಗಿ ಅವರೂ, ಅವರ ಅಪ್ಪ-ಅವ್ವರ ಜೊತೆಗೂ ಕೆಲಸಕ್ಕೆ ಬಂದರು. ಅಲ್ಲಿಯೂ ಪ್ರತಿ ದಿನ ರಾತ್ರಿಯಾಗುತ್ತಿತ್ತು. ಹಗಲುಬದುಕಿನ ದಾರುಣ ದೆವ್ವ, ರಾತ್ರಿ ಕನಸಿನಲ್ಲಿ ಬಂದು ಪೀಡಿಸುತ್ತಿತ್ತು. ಅದಕ್ಕಾಗಿ ಹುಡುಗರು ದಿನವೂ ಬೆಚ್ಚಿಬೀಳುತ್ತಾರೆ. ಇದೇ ದೊಡ್ಡ ಜೀತ. ಅವರ ಅಪ್ಪ-ಅವ್ವ ಬಂಡವಾಳಶಾಹಿಗಳು.

ಅವರ ತಪ್ಪಲ್ಲ ಸರಾಯಿ ಸರಬರಾಜಾದದ್ದು. ಅವರು ದಿನಾ ರಾತ್ರಿ, ಕುಡಿದರು, ಮಕ್ಕಳಿಗೂ ಕುಡಿಸಿದರು. ಕುಣಿದರು, ಕತ್ತಲಲ್ಲಿ ಹೊಡೆದಾಡಿದರು. ಡೋಲು, ಹಲಗೆ, ದಬರಿ, ಚೆಂಬು, ತಗಡು ಡಬ್ ಡಬ್ ಬಡಿದು, ನಕ್ಕು ನಲಿದರು. ಹೆಸರಿಲ್ಲದವರ ಗುಡಿಸಲೊಳಗೆ ಅಸ್ಪಷ್ಟ ಚಿಮಣಿ ಬೆಳಕಿನಲ್ಲಿ ದೊಡ್ಡದಾಗೇ ಗಲಾಟೆ ಮಾಡಿದರು. ಒಮ್ಮೊಮ್ಮೆ ಕೇಕೆ, ಅಳು, ನಗು. ಪಟ್ಟಣದಿಂದ ಹತ್ತಾರು ಜನ ಬಂದು ತೀಟೆ ತೀರಿಸಿಕೊಂಡು ಹೋದರು. ಅದಕ್ಕಾಗಿ ಗುಡಿಸಲುಗಳು ರಾತ್ರಿ ತೆರೆದೇಯಿರುತ್ತವೆ. ಅವುಗಳನ್ನು ಮೊದಲು ಇದ್ದವರ ಆತ್ಮಗಳು ಕಾಯುತ್ತಿವೆ. ''ಬನ್ನಿ ಸೋಳಿಮಕ್ಕಳೆ ಏಕೆ ಹೆದರಿಕೆ, ಇಕೋ ಮಡಿಕೆ, ಇಕೋ ಮುರಿದ ಪಾತ್ರೆ, ಇಕೋ ಜೊತು ಬಿದ್ದ ಮೊಲೆ, ಚಿಂದಿ, ಇಕೋ ಒಡೆದ ಕನ್ನಡಿ ಇತ್ಯಾದಿ ಇತ್ಯಾದಿ.''



ದಿನ ದಿನಕ್ಕೆ ನೆಲದ ಬಂಜರು ಬಸಿರಾಗತೊಡಗಿತ್ತು. ನಾಯಿಕೊಡೆಗಳಂಥ ಮನೆಗಳು, ರಸ್ತೆಗಳು ನಿರ್ಮಾಣವಾದವು. ಭಾರೀ ವಾಹನಗಳು ಓಡಾಡತೊಡಗಿದವು. ಈ ನೆಲ, ಈ ಜಲ, ಈ ಕಾರ್ಮಿಕರು ಯಾರ ಸ್ವತ್ತೂ ಅಲ್ಲ. ಈ ಬಂಡವಾಳಶಾಹಿಗಳವು ಸಿಮೆಂಟು, ಮರಳು, ಸರಳು, ಪ್ಲಾಸ್ಟಿಕ್ಕು, ಕಬ್ಬಿಣ ಯಂತ್ರ, ಕಾರ್ಖಾನೆ ಮಾತ್ರ. ಮೊದಲು ಅವರು ಫ್ಯಾಕ್ಟರಿಗಾಗಿ ದೊಡ್ಡ ದೊಡ್ಡ ನೀರಿನ ಟ್ಯಾಂಕುಗಳನ್ನು ನಿರ್ಮಿಸಿದರು. ಆ ನೀರಿನ ಗಡಸುತನ ಹೆಚ್ಚಾಯಿತೆಂದು ಮಗ್ಗುಲಿಗೆ ಫಿಲ್ಟರ್‌ಗಳನ್ನು ಜೋಡಿಸಿದರು. ಪಿ ಎಚ್ ಮೆಂಟೇನ್ ಮಾಡುವುದಕ್ಕಾಗಿ ಸ್ಟಾಂಡರ್ಡ್ ಆ್ಯಸಿಡ್ ಕ್ಯಾಟ್ ಅಯಾನ್ ಮತ್ತು ಸ್ಟಾಂಡರ್ಡ್ ಬೇಸ್ ಆ್ಯನ್ ಐಯಾನ್. ಅವೇ ಆ ಫಿಲ್ಟರಗಳು. ಅವಕ್ಕೂ ಮೊದಲು ಕಾರ್ಬನ್ ಡೈ ಆಕ್ಸೈಡ್ ಹೊಡೆದೋಡಿಸಲು ಡಿಕ್ಯಸರ್‌ನ್ನು ನಿರ್ಮಿಸಿದರು. ನೀರನ್ನು ಶುದ್ಧೀಕರಿಸಿದರು. ಕೂಲಿ ಕಾರ್ಮಿಕರು, ಅಷ್ಟು ದುಬಾರಿ ನೀರನ್ನು ಇವರು ಬಳಸುವಂತಿಲ್ಲ. ಈ ಹುಚ್ಚುಕಂಪನಿಗೆ ಗೊತ್ತಿಲ್ಲ. ಭಾರತವಲ್ಲಿ ಯಾವುದೇ ಪಿ ಎಚ್ ನೋಡದೆ ಸಿಂಧೂ ಬಯಲಿನ ನಾಗರೀಕತೆಯಿಂದಲೂ ಅದೇ ನೀರನ್ನು ಕುಡಿಯುತ್ತಾ ಬಂದು, ಇನ್ನೂ ಬದುಕಿದ್ದಾರೆಂಬುದು ಮತ್ತು ಇವರೇ ತಮ್ಮ ಫ್ಯಾಕ್ಟರಿ ಕಟ್ಟುವವರೆಂಬುದು. ಕೋಟಿಗಟ್ಟಲೆ ಖರ್ಚು ಮಾಡಿ ಎಲ್ಲಿಂದಲೋ ಪಾರ್ಕು ಹುಲ್ಲನ್ನು ಕೊಂಡುತಂದು ನೆಟ್ಟರು. ಸ್ಪ್ರಿಂಕ್ಲರ್ ನೀರು ಚುಮುಕಿಸಿತು. ಹುಲ್ಲು ನಕ್ಕಿತು. ದನವೂ

ಕೂಡ ಅದನ್ನು ತಿನ್ನುವುದಿಲ್ಲ. ಆ ರೀ ಸೈಕಲ್ಡ್ ವಾಟರ್‌ನಲ್ಲಿನ ಅಳಿದುಳಿದ ಆ್ಯಸಿಡ್ ಇವರ ಕಣ್ಣೊಳಗೆ ಹೊಕ್ಕು, ಇವರು ಅತ್ತರು. ರಾತ್ರಿ ಕುಡಿದಾಗ ಅದೆಲ್ಲಾ ಸುಳ್ಳು ಎಂದರು. ಅವರ ಮಕ್ಕಳು ದಿನ ದಿನಕ್ಕೆ ದುರ್ಬಲರಾದರು. ಅವರಿಗೆ ಊರು ಯಾವುದೆಂಬುದು ಮರೆತು ಹೋಗಿತ್ತು. ಸಂಜೆತನಕ ಈ ಬಿಸಿಲ ಬದುಕು, ರಾತ್ರಿ ಎಲ್ಲವೂ, ಕತ್ತಲಿನಲ್ಲಿ ಹೊಡ-ಬಡಿ, ನಗು-ಅಳು, ವಿಷಾದ, ಚೀರು, ಕೇಕೆ, ರಾಗ, ಆಲಾಪ. ನಡುರಾತ್ರಿಯ ತನಕ ನರ್ತನಾ ಗೋಷ್ಠಿಯ ನಂತರ ಸ್ತಬ್ಧ. ಮುಂಜಾನೆ, ರಾತ್ರಿ ಬಂದವರಾರರು, ಅತ್ತವರಾರು, ನರಳಿದವರಾರು ಯಾವುದು ಯಾರಿಗೆ ಬೇಕು?

ಇವರ ಮುಕ್ತಿಗೆ ಯಾರೂ ಇಲ್ಲವೆ? ಕೂಗಿದರೆ ಯಾರೂ ಬರಲೊಲ್ಲರು. ಎಂದೇ ಯಾರೂ ಕೂಗಲೊಲ್ಲರು. ಅವರಿಗೆ ಅವರು ಹರಿಶ್ಚಂದ್ರರು, ಪ್ರಾಮಾಣಿಕರು, ಸತ್ಯರು, ನಿಷ್ಠರು, ಚಂದ್ರಮತಿಗಳು, ರಾಹುಲರು, ಎತ್ತಿಗಿಂತಲೂ ಶ್ರಮಜೀವಿಗಳು. ಅದಕ್ಕಾಗಿ ವಿಶ್ವಾಮಿತ್ರ ಮತ್ತಷ್ಟು ಮುನಿದ. ಹೊಟ್ಟೆಕಿಚ್ಚಿನಿಂದ ಸಾಲ ಕೊಟ್ಟು ಶೂಲ ಇಕ್ಕಿದ.

ಹಸಿವ ಹಿಂಗಿಸುವನೆಲ್ಲಿಹನು ಬಾರದೆ?

ಹೆಸರೇ ಇಲ್ಲದವರಿಗೆ ಯಾರು ಆಸರೆ? ಹೋಟೆಲ್ಲಿನಲ್ಲಿ ತುಂಬಿದ ಧೂಳು, ಸರಾಯಿ ಅಂಗಡಿಯೊಳಗಿನ ಕೈಮುಗಿದು ಸ್ವಾಗತ ಕೋರುವ ಸುಹಾಸಿನಿ ಚಿತ್ರ, ಮೂಕ ಪ್ರೇಕ್ಷಕರು.

ತೆಬರನಂತಿರುವವನು ಚಂದನೆಯ ಹೆಂಡತಿ ಕೂಡ ಕ್ರೇನು ಆಪರೇಟರನ ದುರ್ನಡತೆಗಾಗಿ ಕ್ರುದ್ಧನಾದ. ಈ ಗುದ್ದಲಿ, ಸಲಿಕೆ, ಪಿಕಾಸಿ ಮುನಿದರೆ ಈ ಜಗತ್ತನ್ನೇ ನಾಶಮಾಡಬಲ್ಲವು. ಒಲಿದರೆ, ನಿಮ್ಮ ಹೆಣದ ಸಂಸ್ಕಾರಕ್ಕೂ ಅನುವಾಗಬಲ್ಲವು ಎಂದಿದಕ್ಕೆ ಅವನಿಗೆ ಕೆಲಸ ಕೊಡಲಿಲ್ಲ. ಕೈ ಬರಿದಾಯಿತು. ಹೋಟೆಲ್ಲಿನಲ್ಲಿ ಮೋಂಡು ಬೀಡಿ ಆರಿಸಿಕೊಂಡು ಸೇದಿದ. ಅಶ್ವತ್ಥ ಮರ, ಈ ಅದನ್ನು ಯಾರೂ ಕೇಳಲೊಲ್ಲರು. ಅದು ಈ ಜಗತ್ತಿನ ಹಳೆಯದನ್ನು ಮತ್ತು ಹೊಸದನ್ನು ನೋಡುತ್ತಿದೆ. ಅವನ ಮುಖದಲ್ಲಿ ಅದೇ ಕ್ರೋಧ. ಊರಿನಲ್ಲಿ ಅವರ ಹಿಂದೆ ಬಡವ, ದಲಿತ, ನಿಮ್ಮ, ಚಾರ್ವಾಕ ಎಂದು ಹಲುಬಿದ್ದವನನ್ನು ಮುಂದೆ ನಿಂತು ಎಲೆಕ್ಷನ್ನಿನಲ್ಲಿ ಆರಿಸಿತಂದರು. ಜೋಳಿಮಗ ಮಂತ್ರಿಯಾದ ನಂತರ ಈ ದಲಿತರು, ಬಡವರು ಇನ್ನೂ ಬದಲಾಗದೇ ಇರುವ ಸ್ಥಿತಿ ಕಂಡು, ನೋಡಲಾರದೆ, ಸರ್ಕಾರ ಕೊಟ್ಟ ಅಂಬಾಸಿಡಾರ್ ಕಾರಿನ ಕೂಲಿಂಗ್ ಗ್ಲಾಸು ಏರಿಸಿ ನಡೆದುಬಿಟ್ಟ. ಮೋಂಡು ಬೀಡಿ ಕೈ ಸುಟ್ಟಿತು. ಬೀಡಿ ಇನ್ನೂ ಇರುವಾಗಲೇ ಎಸೆಯಬೇಕೆಂಬುದು ಇನ್ನೂ ಅರಿವಾದಂತಿಲ್ಲ.

ಈಗ ಅವರಿಗೆಲ್ಲಾ ಆತಂಕ ಶುರುವಾಯಿತು. ಒಂದು ವಾರದಲ್ಲಿ ಜಾಗವನ್ನು ತೆರವುಗೊಳಿಸಬೇಕು

'ಎಲ್ಲಿಗೆ ಹೋಗುವುದು?'

''ಎಲ್ಲಿಯಾದರೂ; ಕೆಲಸ ಮುಗಿಯಿತು. ಈ ಜಾಗ ಫ್ಯಾಕ್ಟರಿಯದು. ಬಿಡುಗಡೇ! ಬಿಡುಗಡೆ!'' ಹುಡುಗರು ಹಚ್ಚಹೊಸ ನಲಿವಿನಿಂದ ಕೂಗಿದರು. ನಾಳೆ ಕೆಲಸವಿಲ್ಲದಾಗ ಕಾಡಿಗೆಯಿಂದ ಅವರ ಅಪ್ಪ-ಅಮ್ಮರ ಮುಖ ಕಪ್ಪಾಯಿತು. ಅದೇ ಕ್ರೇನುಗಳು, ಅವೇ ಬುಲ್ಡೋಜರುಗಳು, ಅವೇ ಗುಡಿಸಲುಗಳನ್ನು ನೆಲಸಮ ಮಾಡಿದವು. ಯಾವ ಪಿಶಾಚಿಗಳೂ ತಡೆಯಲಿಲ್ಲ. ಯಾ ಕ್ರಿಮಿಗಳೂ ಅಡ್ಡಬರಲಿಲ್ಲ. ಯಾವ ಆತ್ಮಗಳೂ ಪ್ರತಿಕ್ರಿಯಿಸಲಿಲ್ಲ. ಉತ್ಖನನದ ವಸ್ತುಗಳಂತೆ ಮಡಿಕೆಯ ಚೂರುಗಳು, ಒಲೆಗೆ ಹೂಡಿದ ಸುಟ್ಟ ಕರಿಯ ಕಲ್ಲುಗಳು, ಚಿಂದಿ ಬಟ್ಟೆ ಅವರು ಬದುಕಿದ್ದ ರೀತಿಯನ್ನು ಹರಾಜಿಗಿಟ್ಟವು.

ಮೂರು ಕಾಸಿಗೂ ಕೊಳ್ಳಲು ಯಾರೂ ಬರಲೇಯಿಲ್ಲ.

ಕೆಲವರು ಎಲ್ಲಿಗೋ ಹೋದರು. ಕೆಲವರಿಗೆ ಆಗಲೇ ರೋಗ ಬಂದಿತು. ಕೆಲವರಿಗೆ ಇದ್ದ ಹೆಸರೂ

ನಾಪತ್ತೆಯಾದವು. ಮಕ್ಕಳು ಸತ್ತರೆ ಅವರ ಅಪ್ಪ, ಅವ್ವ, ಅವರು ಸತ್ತರೆ ಅವರ ಮಕ್ಕಳು ಹೊರತುಪಡಿಸಿ ಎಂಬುದು ಸುಳ್ಳಾಗಿ, ಇದ್ದವರು ಸ್ಪಂದಿಸಿದರು. ಈಗ ಯಾರೂ ಯಾರಿಗೂ ಗೊತ್ತಿಲ್ಲ. ಕಟ್ಟಿದ ಕಲ್ಲು ಮಣ್ಣುಗಳಿಗೆ ಹೊರತು ಪಡಿಸಿ.

ಅಲ್ಲೀಗ ಹೊಸ ನಗರ, ನಿತ್ಯ ಜಾತ್ರೆ, ಗೊಂದಲಪುರ. ದೊಡ್ಡ ವಾಹನಗಳಿಗೂ ಮೀರಿದ ವಾಹನಗಳು. ಅವುಗಳಿಗಿಂತಲೂ ಮಿಗಿಲಾದ ಅವು ಬಿಡುವ ಹೊಗೆ. ರೀ ಸೈಕಲ್ಡ್ ವಾಟರ್ ಕೆರೆಯೊಳಗೆ ಹೊಸ ರೋಗದ ಮೀನುಗಳು. ಸಾಫ್ಟ್‌ವೇರ್ ಹೊಸ ಉದ್ಯೋಗಿಗಳು, ದಿನವೂ ಜನರೇಟರ್‌ನ ಸೈಲಂಟಾದ ಸದ್ದನೇ ಕೇಳುತ್ತಾ, ಜನರೇಟರ್ ಬಿಡುವ ಶುದ್ಧ ಹೊಗೆಯನ್ನೇ ಸೇವಿಸುತ್ತಾ, ಸಂಜೆ ಪಾಂಡಿನತ್ತ ವಾಕಿಂಗ್ ಹೋಗುತ್ತಾರೆ. ರೋಗದ ಮೀನಿನ ಜೊತೆ ಆಟವಾಡುತ್ತಾರೆ. ಹೆಂಡತಿ ಮಕ್ಕಳು ನಲಿಯುತ್ತಾರೆ. ಅವು ಶುದ್ಧವೆಂದೇ ತಿಳಿದು, ಅವುಗಳಿಗೆ ಏನೋ ಕೊಡಲು ಹೋಗಿ ಅವುಗಳನ್ನು ಹೊರಕ್ಕೆಳೆಯುತ್ತಾರೆ. ಪಾಪ ಅವುಗಳಿಗೆ ಬುದ್ಧಿಯಿಲ್ಲ. ದಿನವೂ ಮೋಸ ಹೋಗುತ್ತವೆ. ಈ ಬೋಳಿಮಕ್ಕಳ ಎಂ.ಕಾಮ್ ತಲೆ ಅವಕ್ಕೆಲ್ಲಿ ಬರಬೇಕು? ಹೋಗಲಿ ಗಾಳ ಸಮಗಾಗಿಯೇ ಹುಟ್ಟಿದೆ ಎಂಬುದು ಹೇಗೆ ಅರ್ಥವಾಗಬೇಕು?

ಅಲ್ಲೇ ಒಬ್ಬನು ಸಿಕ್ಕಾಗ, 'ಅರೇ ನೀನು' ಎಂದ. ಅಂದು ಅಲ್ಲಿ ಚಿಮನಿಯೊಳಗೆ ಇಳಿದ ಸ್ವೀಪರ್ ನೀನಲ್ಲವೆಯ ಎಂದು, 'ಈಗೆಲ್ಲಿ ಕೆಲಸ'? ಎಂದು ಕೇಳಿದ.

ಅವನು ಹೇಳಿದ ''ಅಲ್ಲ, ಅಲ್ಲ ಅವನು ನಮ್ಮಪ್ಪ. ಅಂದೇ ಸತ್ತುಹೋದ. ಈಗ ಪ್ಲಾಸ್ಟಿಕ್ ಆರಿಸುವ ಕೆಲಸ.''

ಕೇಳಿದವನು ಹುಚ್ಚನೇಯಿರಬೇಕು. ಇಲ್ಲದಿದ್ದರೆ, ಮಾತಾಡಿಸಿ, ಎಂದೋ ಕಂಡ ಗುರುತು ಪರಿಚಯ ಕೆದಕಿ, ಹಳೆಯ ವಿಚಾರ ಕೇಳಲು ಅವನಿಗೂ ಟೈಮಿಲ್ಲ. ಬಹುಶಃ ಇವನಿಗೆ ಗೊತ್ತಿಲ್ಲ; ಅವರೂ ಅವರದೇ ಆದ ವಂಶ ಬೆಳೆಸುತ್ತಾರೆ. ಅದಕ್ಕಾಗಿ ಮನೆ ಕಟ್ಟುತ್ತಾರೆ, ಅವರಿಗೂ ಅವರದೇ ಆದ ಸ್ವಂತಿಕೆಯಿರುತ್ತದೆ. ಅದಕ್ಕಾಗಿ ಅವರು ಯಾವ ಕೆಲಸ ಮಾಡಲೂ ಹೇಸುವುದಿಲ್ಲ. ಅವರು ಅವರ ನಿಲುವಿನಂತೆ ಆಗಲು ಅವರಿಗೆ ಹೆಚ್ಚು ಕಷ್ಟವೇನಲ್ಲ. ಆದರೆ ಉನ್ನತ ವರ್ಗದವನು ಅವನ ಅಭೀಷ್ಟೆಯಂತಾಗಲು ಸದಾ ಶ್ರಮ ಪಡಬೇಕು. ಹೇಗಿರಬೇಕು? ಎಷ್ಟೆಂದರೆ ಉನ್ನತವಾದುದು? ಸದಾ ಹೊಸತೊಂದನ್ನು ತಂದು ಅದರ ಜೊತೆಗೆ ಜೋಡಿಸಿದೊಡನೆ, ಅದಕ್ಕಿಂತಲ್ಲಾ ಈಗ ಬಂದ ಹೊಸ ತೋಂದರೆ ಮುಂದೆ ಆಗಲೇ ಆಗಿನ ಹೊಸದು ಈಗ ತುಚ್ಛೀಕರಿಸಲ್ಪಡುತ್ತದೆ. ಇವರು ಎಲ್ಲಿಗೇ ಒಂದೆಡೆ ಭಾಗ. ಕಾಡಾದರೇನು? ನಾಡಾದರೇನು? ಯಾತರದೇ ಝೋಪಡಿ. ಎಂತಹುದೋ ನೆರಳು. ಭವಿಷ್ಯ ಪ್ರಪಂಚದಲ್ಲಿ ಸಿರಿತನವೆಂಬುದು ಇರುವುದಾದರೆ ಬಡತನದಿಂದಲೇ ನಿರ್ಮಿತವಾದುದೇನೋ ಅವು ಎಂದು ದೊಡ್ಡ ಗಿಡ್ಡ ಗೆರೆಗಳಂತೆ.

ಇತಿಹಾಸ ಸಾರುತ್ತಿದ್ದ ಮರವನ್ನು ಯಾಕೋ ಕಡಿದು ಪ್ರಗತಿಯ ಗಾಥಿಕ್ ಮನೆ ಕಟ್ಟಿಕೊಂಡರು. ಹಟಮಾರಿ ತೆಬರ ಮಾಡಿ ಮೂಲೆಯ ತನ್ನ ಹೋಟೆಲ್‌ನಿಂದ ಇನ್ನೂ ಹೋಗಿಲ್ಲ. ಚಂದನೆಯ ಹೆಂಡತಿಯನ್ನು ನೋಡಿ, ಯಾರೂ ರಾತ್ರಿಯವರೆಗೂ ಕಾಯದೇ, ಬಂದು ತಿಂದು ಹೋಗುತ್ತಾರೆ. ಬಹುಶಃ ಅವನೂ ನಾಳೆ ಗುಳೇ ಹೊರಡಬಹುದು. ಅನುಭವದಿಂದ ಆ ನಾಯಿಯೂ ಕೂಡ.



# ಕಾಗದದ ದೋಣಿ



## ಬಂದು ಮುಟ್ಟಿದ ಪಾಕೀಟು

ಅಪರಿಚಿತ ಕಿಸೆಗಳ್ಳನಿಗೆ,

ಕೆಲ ದಿನಗಳ ಹಿಂದೆ, ಖಾಸಗಿ ಕೆಲಸದ ನಿಮಿತ್ತ ಬೆಂಗಳೂರಿಗೆ ನಾನು ಬಂದಿದ್ದೆ. ವಿದ್ಯಾರಣ್ಯಪುರದಲ್ಲಿದ್ದ ನನ್ನ ತಮ್ಮನ ಮನೆಯಲ್ಲಿ ವಾಸ್ತವ್ಯ ಹೂಡಿದ್ದೆ. ಅದಕ್ಕೆ ಕೆಲದಿನ ಪೂರ್ವದಲ್ಲಿ, ಕೊಲ್ಯಾಸ್ಟರಲ್ ಹೆಚ್ಚಾಗಿ, ರಕ್ತದ ಅಧಿಕ ಒತ್ತಡಕ್ಕೆ ಧಾರವಾಡದಲ್ಲಿ ಡಾಕ್ಟರರ ಬಳಿ ಚಿಕಿತ್ಸೆ ಮಾಡಿಸಿಕೊಂಡು, ಅವರಿಂದ ರೋಗ ನಿಯಂತ್ರಣಕ್ಕೆ ಬೇಕಾದ ಗುಳಿಗೆಗಳನ್ನು ಬರೆಸಿಕೊಂಡು ಬಂದಿದ್ದೆ. ಪ್ರವಾಸದಲ್ಲಿ ನನ್ನೊಂದಿಗೆ ಹದಿನಾಲ್ಕು ಮಾತ್ರೆಗಳ strip, ಔಷಧಿ ಚೀಟಿ ನನ್ನ ಪಾಕೀಟಿನಲ್ಲಿತ್ತು.

ಪ್ರಯಾಣ ಹೊರಟಾಗ, ನನ್ನ ತಂದೆಯವರ ವ್ಯಾವಹಾರಿಕ ಸೂಚನೆಯಂತೆ, ನನ್ನ ಹಣವಿಡುವ ಪಾಕೀಟಿನಲ್ಲಿ, ನನ್ನ ಹೆಸರು ಮನೆ ವಿಳಾಸ ಹಾಗೂ ಫೋನ್ ಸಂಖ್ಯೆಯನ್ನು ಬರೆದ ಚೀಟಿಯನ್ನು ಖಾಯಂ ಆಗಿ ತೆಗೆದುಕೊಂಡು ಹೋಗುತ್ತಿದ್ದೆ.

ಬೆಂಗಳೂರಿನಲ್ಲಿ ನನ್ನ ಕೆಲಸ ಮುಗಿಸಿಕೊಂಡು, ಕೆಂಪೇಗೌಡ ಬಸ್ ನಿಲ್ದಾಣದಿಂದ ವಿದ್ಯಾರಣ್ಯಪುರಕ್ಕೆ ಹೋಗುವ ಸಂಜೆ 7.30ರ ಬಸ್ಸಿಗೆ ಕಾಯ್ದುನಿಂತಿದ್ದೆ. ಬಸ್ ಬಂದಾಗ peak hour ಆಗಿದ್ದ ಕಾರಣ, ಬಸ್ ಹತ್ತುವಾಗ ವಿಪರೀತ ಗದ್ದಲವಿತ್ತು. ಅದರಲ್ಲೇ ಅವಕಾಶ ಮಾಡಿಕೊಂಡು ಬಸ್ ಹತ್ತಿದೆ. ನಿರ್ವಾಹಕ ಚೀಟಿ ಕೊಡಲು ಬಂದಾಗ, ಪಾಕೀಟಿಗಾಗಿ ಪ್ಯಾಂಟ್ ಜೇಬಿಗೆ ಕೈಹಾಕಿದರೆ ಪಾಕೀಟ್ ಮಾಯವಾಗಿತ್ತು. ಅದಾವ ಮಾಯದಿಂದಲೋ ಅದು ನಿನ್ನ ಕೈಸೇರಿತ್ತು. ಅದರಲ್ಲಿ ನನ್ನ ಗುಳಿಗೆಗಳೊಂದಿಗೆ ರೂ 2,500 ಗಳಿದ್ದು ನನಗೆ ಆಘಾತವೇ



ಆಯಿತು. ಆದರೂ, ಅಂಗಿಯ ಜೇಬಿನಲ್ಲಿದ್ದ ಹಣ ನೀಡಿ, ನನ್ನ ತಮ್ಮನ ಮನೆ ಸೇರಿ, ಮರುದಿನ ಅವನಿಂದ ಧಾರವಾಡಕ್ಕೆ ಮರಳಿ ಬರಲು ಬಸ್ ಚಾರ್ಜ್ ಕೈಗಡ ಪಡೆದು ಊರು ಮುಟ್ಟಿದೆ.

ಧಾರವಾಡಕ್ಕೆ ಬಂದು ಮೂರ್ನಾಲ್ಕು ದಿನಗಳಾಗಿರಬೇಕು. ಅಂದು 2ನೇ ಶನಿವಾರದ ಕಾರಣ ನ್ಯಾಯಾಲಯಕ್ಕೆ ರಜೆಯಿದ್ದುದರಿಂದ ಮನೆಯಲ್ಲೇ ಇದ್ದೆ. ಬೆಳಗಿನ ಅಂಚೆ ಬಟವಾಡೆಯವ, ಭಾರವಾದ ಪಾಕೀಟನ್ನು ನನಗೆ ಕೊಟ್ಟು, ನೀನು ಕಡಿಮೆ ಸ್ಟಾಂಪ್ ಹಚ್ಚಿದ ಕಾರಣ ನನ್ನಿಂದ 'ಡ್ಯೂ' ಹಣ ಪಡೆದುಕೊಂಡ.

ನಾನು ಪಾರ್ಸೆಲ್ ಒಡೆದಾಗ, ಬೆಂಗಳೂರಿನಲ್ಲಿ ಮಾಯವಾದ ನನ್ನ ಪಾಕೀಟು, ಗುಳಿಗೆ, ಔಷಧದ ಚೀಟಿ ಹಾಗೂ ಹಣದ ಪೈಕಿ ರೂ. 2200ಗಳನ್ನು ಕಂಡು ನನಗೆ ಆಶ್ಚರ್ಯ ಉಂಟಾಯಿತು.

ನಿನಗೆ ಆಗಿರಬಹುದಾದ ಅನಾನುಕೂಲಕ್ಕೆ ಬೇಕಾದ ಹಣ ತೆಗೆದುಕೊಂಡು, ನನ್ನ ಪಾಕೀಟು ನನಗೇ ತಲುಪಲು ಕಡಿಮೆ ಅಂಚೆ ಚೀಟಿ ಹಚ್ಚಿ ಮರಳಿ ಕಳಿಸಿದ ನಿನಗೆ ಈ ಮೂಲಕ ಕೃತಜ್ಞತೆಗಳನ್ನು ಅರ್ಪಿಸುವೆ. ನಿನ್ನ ಮಾನವೀಯತೆ ಹಾಗೂ ಕಳುವಿನಲ್ಲೂ ಪ್ರಾಮಾಣಿಕತೆ ನನಗೆ ತುಂಬಾ ಸಂತಸವನ್ನುಂಟುಮಾಡಿತು. ನಿನ್ನ ವಿಳಾಸ ತಿಳಿಸದ ಕಾರಣ ನಿನಗೆ ಈ ವೇದಿಕೆಯ ಮೂಲಕ ವಂದನೆಗಳು.

ರೋಣ — ಬಸವರಾಜ ಹುದೇದಗಡ್ಡಿ

# ಮಳೆಯಲ್ಲಿ ನೆನೆದ ದೋಣಿ



ಪ್ರಿಯ ಝೂಹ್ರಾ,

ಈ ಶ್ಯಾಮಲಾ ನೆನಪಿನಲ್ಲಿರುವಳೇ? ಕಾಲೇಜ್ ಮುಗಿಸಿ ಮೆಡಿಕಲ್‌ಗೆ ಹೋದ ನೀನು ಎಲ್ಲಿರಬಹುದು, ಏನೆಂಬ ಯೋಚನೆ ಸದಾ ಕಾಡುತ್ತಿತ್ತು. ಕುಂಪ್ಳೆಯ 'ಹಾಜಿ ಹೌಸ್'ನಿಂದ ಹೊರಟು, ರೈಲು, ಬಸ್‌ಗಳಲ್ಲಿ ಬಂದು, ಕಾಲೇಜ್ ಗೇಟ್ ಹೊಗುವಾಗಲೇ ಅದುವರೆಗೆ ತಲೆಗೆ ಹೊದೆದಿರುತ್ತಿದ್ದ ದಾವಣಿಯ ಸೆರಗನ್ನು ಸರಿಸಿ ಕೆಳಬಿಟ್ಟು, ಚಂದ್ರಬಿಂಬದಂತೆ ನಗುತ್ತಾ ಬರುವ ನನ್ನ ಝೂಹ್ರಾಳ ನೆನಪು ಮನದಲ್ಲಿ ಸದಾ ಹಸಿರು.

'ಸೇಂಟ್ ಆಗ್ನೆಸ್ ಕಾಲೇಜ್‌ನಲ್ಲಿ ಕಳೆದ ದಿನಗಳ ಸವಿನೆನಪಿನೊಡನೆ...' ಎಂದು, ಕುರಾನ್‌ನ ಕೆಲವು ನುಡಿಮುತ್ತುಗಳೊಡನೆ ಆಟೋಗ್ರಾಫ್ ಬರೆದ ನಿನ್ನ ಪುಟ ನೆನಪಿನ ಬುಗ್ಗೆಯನ್ನೇ ಉಕ್ಕಿಸುತ್ತದೆ. ಮುಸ್ಲಿಂ ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ಒಂದು ಪತ್ರ ಸಂವಾದದಲ್ಲಿ ನಾನು ನಿನ್ನನ್ನು ಉದಾಹರಿಸಿದ್ದೆ, ನನ್ನ ಗೆಳತಿ ಝೂಹ್ರಾ, ದೊಡ್ಡ ಗೈನೆಕಾಲಜಿಸ್ಟ್ ಎಂದು.

ಒಮ್ಮೆ ಕಾಲೇಜ್ ಭಾಷಣ ಕೂಟದಲ್ಲಿ ನೀನು 'ಇಸ್ಲಾಂ' ಬಗ್ಗೆ, ನಾನು 'ಹಿಂದೂಯಿಸಂ' ಬಗ್ಗೆ ಮಾತನಾಡಿದ್ದು ನೆನಪಿದೆಯೇ? ಕನ್ನಡ ಲೆಕ್ಚರರ್ ಪಾಲೆಪ್ಪಾಡಿ ಗೋಪಾಲಕೃಷ್ಣ ಭಟ್ಟರು ನನಗೆ ಮಾರ್ಗದರ್ಶನವಿತ್ತಿದ್ದರು. ನಿನಗೋ, ಹೆಚ್ಚಿನ ತಯಾರಿ ಬೇಕಿರಲಿಲ್ಲ. ಇಬ್ಬರೂ ಚೆನ್ನಾಗಿ ಚಪ್ಪಾಳೆ

ಗಿಟ್ಟಿಸಿಕೊಂಡಿದ್ದೆವು. ಅದಾದೊಡನೆ, ಪ್ರಿನ್ಸಿಪಾಲ್ ಮದರ್ ನೋಯೆಲ್, ತುರ್ತು ಅಸೆಂಬ್ಲಿ ಕರೆದುದು, ಮುಂಬೈಗೆ ಹೃದಯದ ಶಸ್ತ್ರ ಚಿಕಿತ್ಸೆಗೆಂದು ಹೋಗಿದ್ದ ಗೆಳತಿ ಶಿರ್ಮಿ 'ತೀರಿಕೊಂಡಳೆಂದು' ಅವಳ ಕಸಿನ್ ಸುರೇಂದ್ರ ಬರೆದ ಪತ್ರವನ್ನು ನಮಗೆಲ್ಲ ತೋರಿ ಸಂತಾಪ ಸೂಚಕ ಪ್ರಾರ್ಥನಾ ಸಭೆ ನಡೆಸಿ, ನಾವು ನಾಲ್ವರು ಗೆಳತಿಯರನ್ನು ಶಿರ್ಮಿಯ ಮನೆಗೆ ಕಳಿಸಿದ್ದು (ನಿನ್ನನ್ನು ಕಳಿಸಿರಲಿಲ್ಲ), ಅಲ್ಲಿ ನೋಡಿದರೆ ಶಿರ್ಮಿ ಸಜೀವ, ಸಶರೀರಳಾಗಿದ್ದುದು, ಶಿರ್ಮಿಯ ಮನೋವೃತ್ತಿಯ ಬಗ್ಗೆ, ಸುರೇಂದ್ರನೆಂಬ ಕಾಲ್ಪನಿಕ ಕಸಿನ್ ಬಗ್ಗೆ, ಕೃತಕ ಕೈಬರಹದಲ್ಲಿ ಅವಳೇ ಆ ಪತ್ರ ಬರೆದಿದ್ದ ಬಗ್ಗೆ ನಮಗೆಲ್ಲ ತಿಳಿದು ಬಂದುದು... ಎಲ್ಲ ನೆನಪಿದೆಯೇ ಝೂಹ್ರಾ? ಅದೇ ಶಿರ್ಮಿ, ಇಲ್ಲಿ ಜೆಸ್‌ಲಾಕ್ ಆಸ್ಪತ್ರೆಯಲ್ಲಿ ಪೆಥಾಲಜಿಸ್ಟ್ ಆಗಿದ್ದಾಳೆಂದು ಕೇಳಿದೆ. ಎಂದಾದರೂ ಸಿಗಬೇಕೆಂದಿದೆ.

ಗೆಳತಿಯರ್‍ಯಾರಾದರೂ ನಿನಗೆ ಸಿಕ್ಕಿರುವರೇ ಝೂಹ್ರಾ? ಪ್ರಭಾ ಅಲ್ಲೇ ಮಂಗಳೂರಿನಲ್ಲಿ ಗೈನೆಕಾಲಜಿಸ್ಟ್ ಆಗಿದ್ದಾಳೆ. ಕ್ರಿಸ್ತಿನ್ ಎಮ್.ಎಸ್‌ಸಿ ಮುಗಿಸಿ ನಮ್ಮ ಕಾಲೇಜಲ್ಲೇ ಲೆಕ್ಚರರ್ ಆಗಿದ್ದವಳು, ಈಗ ಕೆಲವರ್ಷಗಳಿಂದ ಅಮೆರಿಕಾದಲ್ಲೇ ಇದ್ದಾಳೆ. ಅವಳ ಇಬ್ಬರು ಅಕ್ಕ-ತಂಗಿಯರ ಹೊರತು, ಉಳಿದ ಒಂಬತ್ತು ಅಣ್ಣ-ತಮ್ಮಂದಿರು, ತಾಯ್ತಂದೆ ಎಲ್ಲ ಅಮೆರಿಕಕ್ಕೆ ವಲಸೆ ಹೋಗಿದ್ದಾರೆ. ತಾಯ್ನಾಡಿಗೊಮ್ಮೆ ಬರುವ ಮನಸ್ಸಾಗುವುದಿಲ್ಲವೇ ಎಂದು ಕೇಳಿದ್ದೆ. ಎಲ್ಲರಿಗೂ ಸರಿಹೊಂದುವ ಬಿಡುವಿನ ಅಭಾವವೆಂದಳು. ಅವಳಲ್ಲಿ ಕ್ಯಾನ್ಸರ್ ರಿಸರ್ಚ್‌ಗೈಡ್.

ನಮ್ಮ Botany ರೀಡರ್ ಮಿಸ್ ಲೀಲಾರಾವ್ ಅನಂತರ ಲೀಲಾ ಉಪಾಧ್ಯಾಯ ಆದರು ಗೊತ್ತೇ? ಇಪ್ಪತ್ತೈದು ವರ್ಷಗಳ ಬಳಿಕ ನಾನವರನ್ನು ಕಾಣಲು ಹೋದಾಗ, ಥಟ್ಟನೆ ಗುರುತಿಸಿದರು. ಅವರೂ ಅಮೆರಿಕಾ, ಫ್ರಾನ್ಸ್‌ಗಳಿಗೆ ಹೋಗಿ ಬರುತ್ತಿರುತ್ತಾರೆ. ತಮ್ಮ ಪ್ರವಾಸದ ಬಗ್ಗೆ, ಕ್ರಿಸ್ತಿನ್ ಮನೆಗೆ ಹೋದ ಬಗ್ಗೆ ಅಲ್ಲಿಂದಲೇ ವಿವರವಾಗಿ ಬರೆದಿದ್ದರು. ನಾನೊಮ್ಮೆ ಮಿಸ್ ಉಷಾ ನಳಿನಿಯ ಕ್ಲಾಸ್‌ನಲ್ಲಿ ಏನೋ ಗಾಳಿ ಹೊಕ್ಕಂತೆ ವಿಪರೀತ ಮಾತು, ನಗೆ ನಡೆಸಿ, ಸೌಮ್ಯ ದನಿಯ ಮಿಸ್ ಪಾಠ ಮಾಡಲಾಗದೆ, 'ಪಾಠ ಬೇಡದವರು ದಯವಿಟ್ಟು ಹೊರಗೆ ಹೋಗಿ' ಎಂದು ದುಃಖಿತ ಸ್ವರದಲ್ಲಿ ನುಡಿದು, ಕೊನೆಗೆ ತಾನೇ ಹೊರಗೆ ಹೋದುದು, ಆಗ ನಿನ್ನ ಮುಖದ ಮಂದಹಾಸ ಮಾಯವಾದುದು ಎಲ್ಲ ಕಣ್ಣಿಗೆ ಕಟ್ಟಿದೆ. ಊರಿಗೆ ಹೋದಾಗ ಅವರನ್ನೂ ಕಂಡು ಬರುತ್ತೇನೆ.

ಹುಡುಗಿಯರು ಚೆಲ್ಲುಚೆಲ್ಲಾಗಿ ಆಡಬಾರದೆಂದು ಬೋಧಿಸುತ್ತಿದ್ದ ಸಿಸ್ಟರ್ ಇವಾಂಜಲಿಸ್ಟಾ ತೀರಿಕೊಂಡರು, ಗೊತ್ತೇ? ಸಿಸ್ಟರ್ ನೋಯೆಲಿನ್ ಕಾನ್ವೆಂಟ್ ಆರ್ಡರ್ ತೊರೆದು ಹೋದುದು ತಿಳಿದಿದೆಯೇ? ಅಷ್ಟು ಚೆಲುವಾದ ಅವರು ಸಿಸ್ಟರ್ ಯಾಕಾದರೋ ಎಂದು ನಾವೆಲ್ಲ ಅನ್ನುತ್ತಿದ್ದೆವಲ್ಲ? ಪೋಪ್ ಮಂಗಳೂರಿಗೆ ಬಂದಿದ್ದಾಗ, 'ನೆಹ್ರೂ ಮೈದಾನ' ವೇದಿಕೆಯಲ್ಲಿ ಅವರ ಅಂಗೈಗೆ ಮುತ್ತಿಟ್ಟು ನಗರದಲ್ಲಿ ಮಾತಾಗಿದ್ದ ಗರ್ಟಿಯ ನೆನಪಿದೆಯೇ ಝೂಹ್ರಾ? ಕಳೆದ ವರ್ಷ ಸಿಕ್ಕಿದ್ದಳು, ಈಗಲೂ ಹಾಗೇ ವೈಬ್ರೆಂಟ್ ಆಗಿದ್ದಾಳೆ.

ನಿನ್ನ ಬಗ್ಗೆ ತಿಳಿಯಲು ಕಾತರಳಾಗಿದ್ದೇನೆ. ನಿನ್ನ ಚಂದ್ರಗಿರಿ ನದೀತೀರಕ್ಕೆ ಈ 'ಕಾಗದದ ದೋಣಿ' ಬಂದರೆ ಎತ್ತಿಕೋ... 'ಮಗರ್ ಮುಝ್‌ಕೊ ಲೌಟಾ ದೊ ಬಚಪನ್ ಕಾ ಸಾವನ್, ವೊ ಕಾಗಜ್ ಕೀ ಕಶ್ತೀ, ವೊ ಬಾರಿಶ್ ಕಾ ಪಾನೀ...' ಎಂದು ಜಗ್‌ಜೀತ್ ಸಿಂಗ್ ಹಾಡುತ್ತಿದ್ದಾನೆ; ಕೇಳಿಸುತ್ತಿದೆಯೇ ಝೂಹ್ರಾ?

**ಶ್ಯಾಮಲಾ ಮಾಧವ**

**ಮುಂಬಯಿ**

# ಈಸಿ ಉಳಿಸಿದವನು

ಪ್ರಿಯ ಬಂಧು,

ನಿನ್ನ ಹೆಸರೇನೋ ನನಗೆ ತಿಳಿಯದು, ಮುಖಚಹರೆ ಕೂಡ ನೆನಪಿಲ್ಲ. ವಯಸ್ಸು ಎಷ್ಟಾಗಿರಬಹುದು ನಿನಗೆ? ಊಹಿಸಲಾರೆ. ಆದರೂ ನೀನು ನನ್ನ ಬಂಧು!

ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ - ನಾನಾಗ ಎಂಟು ವರ್ಷದ ಬಾಲಕ-ಸೋದರತ್ತೆಯ ಮದುವೆಯೆಂದು ನಾನಂದು ಸಂಭ್ರಮದಿಂದಿದ್ದೆ. ಹಿರಿಯರೆಲ್ಲಾ ತಮ್ಮ ತಮ್ಮ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿದ್ದರು. ನನ್ನನ್ನು ಸ್ನೇಹಿತರೊಂದಿಗೆ ತೋಟಕ್ಕೆ ಹೋಗಿ ಬಾಳೆ ಎಲೆ ತರಲು ಕಳಿಸಿದ್ದರು ಅಂತ ಕಾಣುತ್ತದೆ. ಆ ಎಲ್ಲವೂ ಅಸ್ಪಷ್ಟವಾಗಿಯೇ ನೆನಪಿರೋದು. ಬಾಳೆಎಲೆ ತೆಗೆದುಕೊಂಡು ಬರುವಾಗ ಹತ್ತಿರದಲ್ಲಿದ್ದ ಹೊಂಡದಲ್ಲಿ ಮೈ ತೊಳೆದುಕೊಳ್ಳೋಣವೆಂದು ಇಳಿದೆ. ನನ್ನ ಸ್ನೇಹಿತರು ಮುಂದೆ ಹೋಗಿದ್ದರು. ಅಂತೂ ಏನಾಯ್ತೋ, ಹೇಗಾಯ್ತೋ ತಿಳಿಯದು, ನಾನು ನೀರಲ್ಲಿ ಮುಳುಗಿಬಿಟ್ಟಿದ್ದೆ. ಪೂರಾ ಭಯಗೊಂಡು ಬಿಟ್ಟಿದ್ದೆ. ನನ್ನರಿವಿಗೆ ಬಾರದೇನೇ ಬಾಯಲ್ಲಿ 'ರಾಮನಾಮ' ಶುರುವಾಗಿತ್ತು. ಆಗ ಎಲ್ಲಿಂದಲೋ ಬಂದ ನೀನು, ಅಪರಿಚಿತನಾದ ನನ್ನನ್ನು ಉಳಿಸಲು ಬಾವಿಗೆ ಹಾರಿ, ನನ್ನನ್ನು ದಡಕ್ಕೆ ತಂದು ಪ್ರಾಣ ಉಳಿಸಿದೆ. ಚೇತರಿಸಿಕೊಂಡು ಎದ್ದ ಮಾರನೇದಿನ, ನನ್ನ ಅಜ್ಜ ಹೇಳಿದಂತೆ, ನಿನಗೆ ಒಂದು ಜೊತೆ ವಸ್ತ್ರ, ಅಡಿಕೆ ಎಲೆ, ತೆಂಗಿನಕಾಯಿ, ಒಂದಿಷ್ಟು ದುಡ್ಡು ನೀಡಿ ಕೈ ಮುಗಿದಿದ್ದೆ.

ಈಗ ನೀನು ಮುದುಕನಾಗಿರಬಹುದು. ಬಹುಶಃ ನಿನಗೆ ಈ ಪತ್ರ, ಓದಲೂ ಆಗದು. ಯಾಕೆಂದರೆ ನನ್ನ ಊಹೆಯಂತೆ ನೀನು ಅನಕ್ಷರಸ್ಥನಿರಬಹುದು. ಆದರೆ ಇದರಲ್ಲಿನ ಸಂದೇಶ ಅಕಸ್ಮಾತ್ ನಿನ್ನನ್ನು ಹೇಗಾದರೂ ತಲುಪಿದರೆ, ನಾನು ಕೃತಾರ್ಥನಾದಂತೆ.

ರಾಯಲಪಾಡು

ರಾಯಲಪಾಡು ರಾಘವೇಂದ್ರ



# ಗಂಡು ಹೆತ್ತ ಮನೆಯೂ ತಣ್ಣಗಿರಲಿ

ಒಲವಿನ ಅಣ್ಣನಿಗೆ,

ಹಾಯ್ ಅಣ್ಣಾ! ಆ ಬೆಂಗಳೂರಿನಲ್ಲಿ ಹಾಯಾಗಿರುತ್ತಿಯೆಂದೇ ಭಾವಿಸಿರುತ್ತೇನೆ. ಅಂದಹಾಗೆ ನಮ್ಮನ್ನೆಲ್ಲಾ ಮರೆತುಬಿಟ್ಟಿದೀಯಾ ಹೇಗೆ!?

ಆ ದಿನ ನಿನಗೆ ನೆನಪಿದೆಯೋ ಇಲ್ಲವೋ ಗೊತ್ತಿಲ್ಲ. ನಾನಾಗ ಇನ್ನೂ ಊರಲ್ಲಿಯೇ ಎಸ್.ಟಿ.ಡಿ. ಬೂತ್‌ಗೆ ಕೆಲಸಕ್ಕೆ ಹೋಗುತ್ತಲಿದ್ದೆ. ಆ ದಿನ ಏನೋ, ನಿನಗೂ, ದೊಡ್ಡಣ್ಣನವರಿಗೂ ಮಾತಾಗಿದ್ದಕ್ಕೆ, ನೀನು ರಾತ್ರಿಯೇ ಬೆಂಗಳೂರಿಗೆ ಪಯಣಿಸಿದ್ದೆ. ರಾತ್ರಿ 12.30ಕ್ಕೆ ಬೂತ್ ಬಂದ್ ಮಾಡಿ ಬಂದ ನಾನು, ಅಮ್ಮ ಹೇಳಿದ ತಕ್ಷಣ ಸೈಕಲ್ ತೆಗೆದುಕೊಂಡು ಹಿಂದೆಯೇ ರೈಲ್ವೆ ಸ್ಟೇಷನ್‌ಗೆ ಹೋಗಿದ್ದೆ. ಆದರೆ ರೈಲು ಆಗಲೇ ಬೆಂಗಳೂರಿನ ದಾರಿ ಹಿಡಿದಿತ್ತು. ನೀನು ಭೇಟಿಯಾಗಲೇ ಇಲ್ಲ.

ಹೌದು, ನೀನು ತುಂಬಾ ವರುಷಗಳಿಂದಲೂ ಬೆಂಗಳೂರಿನಲ್ಲೇ ಇದ್ದೀಯಾ ನಿಜ! ಬೆಂಗಳೂರಿನಲ್ಲೇ ಇರು. ನಮಗೂ ಒಂದು ಹೆಮ್ಮೆ ಇರುತ್ತೆ. ನಿನಗೆ ಅಲ್ಲಿಯೇ ಸಂತಸ, ಆನಂದ ಸಿಗುವುದಾದರೆ ಮಾತ್ರ! ಆದರೆ ನಮ್ಮನ್ನೆಂದೂ ಮರೆಯದಿರು.

ನಿನಗೆ ದೊಡ್ಡಣ್ಣನ ಮೇಲೆ, ನನ್ನ ಮೇಲೆ, ಬೇಕಾದರೆ ಬೆಟ್ಟದಷ್ಟು ದ್ವೇಷವಿರಲಿ. ಆದರೆ ಅಮ್ಮನ ಮೇಲೆ ಯಾಕೆ? ಅಣ್ಣಾ, ಅಮ್ಮ ನಿನ್ನನ್ನು ಪ್ರತಿ ಸಲ ಕೇಳುತ್ತಾ ಇರುತ್ತಾಳೆ. ಮೊನ್ನೆ ದೀಪಾವಳಿಗೆ ನಾನು ಊರಿಗೆ ಹೋದಾಗ ಅಮ್ಮ ತುಂಬಾ ದುಃಖದಲ್ಲಿದ್ದಳು. ನಾವು ಎಷ್ಟೇ ದೊಡ್ಡವರಾದರೂ, ನಮ್ಮ ಆರೋಗ್ಯದ ಬಗ್ಗೆ ಅಮ್ಮ ಇನ್ನೂ ಚಿಂತಿಸುತ್ತಾಳೆ. ನೀನು ಅಮ್ಮನಿಗೋಸ್ಕರವಾದರೂ 15 ದಿನಕ್ಕೊಮ್ಮೆ ಪತ್ರ ಬರೆ. ಬರೆಯಲು ವೇಳೆ ಇಲ್ಲ ಅನ್ನೋದೇ ಆದರೆ, ತಿಂಗಳಿಗೊಂದು ಸಾರಿ ಫೋನ್ ಆದರೂ ಮಾಡು. ಹಬ್ಬ ಹರಿದಿನಗಳಿಗೆ 6 ತಿಂಗಳಿಗೊಮ್ಮೆಯಾದರೂ ಊರಿಗೆ ಬಂದು ಹೋಗು. ಹೆತ್ತೊಡಲು ಹರುಷಪಡಲಿ.

ಮೊನ್ನೆ ಊರಿಗೆ ಹೋದಾಗ ತಂಗಿ ಗಾಯತ್ರಿ ಹೇಳಿದಳು, ಅಮ್ಮ ಸರಿಯಾಗಿ ಊಟಾನೇ ಮಾಡೋದಿಲ್ವಂತೆ, ನಿದ್ರೆಯಂತೂ ಇಲ್ಲವೇ ಇಲ್ಲ. ಮಲಗಿದರೆ ಕೋಳಿ ನಿದ್ರೆ ಅಷ್ಟೆ. ನಾನು ಅವತ್ತು ರಾತ್ರಿ ಪುಸ್ತಕ ಓದುತ್ತಲೇ ಕೂತಾಗ, ಅಮ್ಮ ಮಲಗಿರಲೇ ಇಲ್ಲ. ಫ್ಯಾನ್ ತಿರುಗುವುದನ್ನೇ ನೋಡುತ್ತಿದ್ದಳು. ಯಾಕಮ್ಮ ನಿದ್ರೆ ಬರೋಲ್ವ ಎಂದದ್ದಕ್ಕೆ ಮಗ್ಗಲು ಬದಲಿಸಿ ಗೋಡೆಯನ್ನೇ ನೋಡುತ್ತಿದ್ದಳು. ಕಣ್ಣು ನೀರಿನಲ್ಲಿ ಅದ್ದಿ ತೆಗೆದ ಅರಳೆಯಂತಾಗಿತ್ತು. ಅದು ನಿನ್ನ ನೆನಪಿನಿಂದಲೇ ಅಣ್ಣಾ!

ನೀನು ಹಣ ಕಳುಹಿಸು ಎಂದು ಕೇಳುತ್ತಿಲ್ಲಾ, ಅಮ್ಮನ ಮುದಿ ಹೃದಯವನ್ನು ಕುದಿಸದಿರು ಎಂದು ಅಂಗಲಾಚಿಸುತ್ತಿದ್ದೇನೆ. 15 ದಿನಕ್ಕೊಂದು ಪತ್ರ, ಫೋನ್ ತಿಂಗಳಿಗೊಂದ್ಸಲ, ನಿನ್ನ ಭೇಟಿ, ಅಮ್ಮನ ಮನಸ್ಸಿಗೆ ಹರುಷವನ್ನು ನೀಡಲಿ.

ನಿನ್ನದೇ ಆದ ಸಂಸಾರತಾಪತ್ರಯ ಇರುತ್ತೆ, ನನಗೆ ಗೊತ್ತು. ಇದೂ ಕೂಡಾ ಸಂಸಾರವೇ ತಾನೆ? ಸಿನಿಮಾದಲ್ಲಿ ನೋಡಿದ ಕಥೆ ನಮ್ಮ ಬಾಳಿನಲ್ಲಿ ಆಗದಿರಲಿ. 'ಹೆಣ್ಣು ಹೆತ್ತ ಮನೆ ತಣ್ಣಗಿರುತ್ತ ಅಂತಾರೆ, ಗಂಡು ಹೆತ್ತ ಮನೆಯೂ ತಣ್ಣಗಿದೆ ಎನ್ನೋದನ್ನು ತೋರಿಸೋಣ ನಾವು! ಅತ್ತಿಗೆ ಹಾಗೂ ಬೇಬಿಗೆ ನನ್ನ ಸವಿನೆನಪುಗಳು.

**ದಾವಣಗೆರೆ ರಾಘವೇಂದ್ರ**

ಮುಂಬಯಿ





ತಿಲಕನಾಥ ಮಂಜೇಶ್ವರ

# ಎದೆಯಲ್ಲೊಂದು ಚಿತೆ

ಅನುಪಮಳ ಅಮ್ಮ ನನಗೆ ದೂರದ ಸಂಬಂಧದಲ್ಲಿ ಅಕ್ಕ ಆಗಬೇಕು. ಅವಳ ಅಪ್ಪ ಸರಕಾರಿ ವೈದ್ಯಕೀಯ ಹುದ್ದೆಯಲ್ಲಿದ್ದರು. ಅನುಪಮಳೊಬ್ಬಳೇ ಮಗಳು. ಹಳ್ಳಿಗಾಡಿನಲ್ಲಿ ಹುಟ್ಟಿ ಬೆಳೆದ ನಾನು, ಉದ್ಯೋಗ ಅರಸಿ ಬೆಂಗಳೂರಿಗೆ ಹೋದೆ. ಅವರ ಮನೆಯಲ್ಲಿ ಎರಡು ವರ್ಷಗಳ ಕಾಲ ಇದ್ದೆ. ಮತ್ತೆ ಬೇರೆ ಮನೆ ಮಾಡಿದೆ. ಅವರ ಮನೆಯಲ್ಲಿದ್ದಷ್ಟು ಕಾಲ ನಾನು-ಅನುಪಮಾ ಒಳ್ಳೆಯ ಗೆಳೆಯರಾಗಿದ್ದರೂ ಹಿರಿಯನೆಂಬ ಕಾರಣಕ್ಕೆ ಅವಳಿಂದ ನನಗೆ ಗೌರವ ಸಿಗುತ್ತಿತ್ತು.

ನಾನು ಅವರ ಮನೆಯಲ್ಲಿ ಇರಲು ಹೋದಾಗ, ಅವಳು ಪಿ.ಯು.ಸಿ. ಮೊದಲ ವರ್ಷದಲ್ಲಿದ್ದಳು. ಪಿ.ಯು.ಸಿ. ಮುಗಿಸಿ ಮೆಡಿಕಲ್‌ಗೆ ಹೋಗುವ ಇರಾದೆ ಇತ್ತು. ಅವಳು ರ್‍ಯಾಂಕ್ ಸ್ಟೂಡೆಂಟ್. ಅವಳ ತಂದೆಯ ಸ್ಟೇಟಸ್ ನೋಡಿದರೆ, ಮಗಳಿಗೆ ಒಂದು ಉತ್ತಮ ಸಂಬಂಧದ ನಿರೀಕ್ಷೆಯಲ್ಲಿರುವುದು ಶತಸ್ಸಿದ್ಧ.



ಅನುಪಮಾ ಇಂಗ್ಲಿಷ್ ಮೀಡಿಯಮ್‌ನಲ್ಲಿ ಓದಿದವಳು. ಅದುವೇ ಶ್ರೇಷ್ಠ ಎಂದು ಭಾವಿಸಿದ್ದಳು. ಹಳ್ಳಿಗಾಡಿನಿಂದ ಬಂದ ನನಗೆ ಕನ್ನಡ ಮಾಧ್ಯಮವೇ ಸಾಧ್ಯ ಇದ್ದುದು. ಸಾಹಿತ್ಯದ ಗೀಳನ್ನು ಹಚ್ಚಿಸಿಕೊಂಡದ್ದರಿಂದ ಕನ್ನಡ ಸಾಹಿತ್ಯ, ಭಾಷೆಯ ಬಗ್ಗೆ ಸ್ವಲ್ಪ ಜಾಸ್ತಿಯೇ ತಿಳಿದುಕೊಂಡಿದ್ದ [illegible]ನ್ನ ಕನ್ನಡ ಜ್ಞಾನದ ಬಗ್ಗೆ ಅವಳಿಗೆ ಅಚ್ಚರಿ. ಅಭಿಮಾನ. ದ್ವಿತೀಯ ಪಿ.ಯ[illegible]ಯಲ್ಲಿ ನಾನು ಅವಳಿಗೆ ಕನ್ನಡ ಹೇಳಿಕೊಟ್ಟಿದ್ದೆ. ಕವನ ಗೀಚಿದಾಗ, ಕಥೆ [illegible]ರೆದಾಗ ಅವಳಿಗೆ ಓದಿ

ಹೇಳುತ್ತಿದ್ದೆ. ಆಗ ಅವಳ ಕಣ್ಣುಗಳಲ್ಲಿ ಸಂತೋಷ ಬಿರಿಯುತ್ತಿದ್ದುದು ನಿಚ್ಚಳವಾಗಿ ಗೋಚರಿಸುತ್ತಿತ್ತು. ಅವಳ ಸ್ನೇಹಿತೆಯರು ಸಿಕ್ಕಿದಾಗ, ನನ್ನನ್ನು ಕವಿ, ಕಥೆಗಾರ ಎಂದು ಪರಿಚಯಿಸಲು ಅವಳೆಂದೂ ಹಿಂತೆಗೆದದ್ದಿಲ್ಲ.

ನಾವು ಚರ್ಚಿಸದ ವಿಷಯಗಳಿಲ್ಲ. ಆಡದ ಮಾತುಗಳಿಲ್ಲ. ಇಂಥದೇ ವಿಷಯಗಳಿರಬೇಕು ಎಂಬ ನಿರ್ಬಂಧವೂ ಇರಲಿಲ್ಲ. ಚರ್ಚೆಗೆ ಕಾವು ಏರಿದಾಗ, ಯಾರೂ ಸೋಲಲು ತಯಾರಿಲ್ಲದಾಗ, ಅಕ್ಕ ಬಂದು ಮಂಗಳ ಹಾಡುತ್ತಿದ್ದರು. ಅಕ್ಕ ಬಹು ಉದಾರಿ, ನಿರ್ಮಲ ಹೃದಯದವರು, ಸುಸಂಸ್ಕೃತರು ಹಾಗೆಯೇ ಸೋಶಿಯಲ್ ಕೂಡ.

ನನ್ನ ಮನದಲ್ಲಿ, ದೂರದ ನೆಂಟತನ, ಅವರು ಕೊಟ್ಟ ಆಶ್ರಯ ಮತ್ತು ವಯಸ್ಸಿನ ಅಂತರ, ಅವರ ಶ್ರೀಮಂತಿಕೆ ಸದಾ ಕೆಲಸ ಮಾಡುತ್ತಿತ್ತೋ ಏನೋ, ಅನುಪಮಳನ್ನು ನಾನು ಬಯಸುವುದು ಸಾಧ್ಯವೇ ಇಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದೆನೆಂದು ಕಾಣುತ್ತದೆ. ನಾನು ಸುಂದರನೇನಲ್ಲ. ಖಾಸಗಿ ಫ್ಯಾಕ್ಟರಿಯಲ್ಲಿ ಮಾಮೂಲಿ ನೌಕರ. ಎಲ್ಲ ವಿಧದಲ್ಲೂ ಅನುಪಮಾಳ ಕೈ ಹಿಡಿಯಲು ನಾಲಾಯಕ್ಕಾದವನು.

ಕಾಲೇಜಿನಲ್ಲಿ ಪ್ರಾಕ್ಟಿಕಲ್ಸ್ ಇದ್ದಾಗ, 'ಕ್ಲಾಸ್ ಗೆಟ್ ಟುಗೆದರ್' ಅಥವಾ 'ಕಾಲೇಜ್ ಡೇ' ಅಂತ ಅನುಪಮಾ ಕಾಲೇಜಿನಿಂದ ಬರುವುದು ತಡವಾದರೆ, ಅವಳ ಅಮ್ಮನೇ ನನ್ನನ್ನು, 'ಕಾಲೇಜಿನವರೆಗೆ ಹೋಗಿ ನೋಡಿಕೊಂಡು ಬಾ' ಎಂದು ಕಳುಹಿಸುತ್ತಿದ್ದರು. ಕಾಲೇಜು ಗೇಟಲ್ಲಿ ಕಾದಿದ್ದವನನ್ನು, ಗೆಳತಿಯರ ನಡುವೆ ಮಾತನಾಡುತ್ತಾ ಬರುತ್ತಿದ್ದ ಅನುಪಮಾ ಕಂಡು, ಲಗುಬಗೆಯಿಂದ ನನ್ನನ್ನು ಸಮೀಪಿಸಿ ನನ್ನೊಂದಿಗೆ ಹೆಜ್ಜೆ ಹಾಕುತ್ತಿದ್ದಳು. ಹೂಬಿಟ್ಟ ಗುಲ್‌ಮೊಹರ್ ಮರಗಳ ಅಡಿಯಲ್ಲಿ ಚಿಲಿಪಿಲಿಗುಟ್ಟುವ ಹಕ್ಕಿಗಳ ಕಲರವ, ಸಂಜೆಯ ತಂಪಾದ ಹವೆಯಲ್ಲಿ, ಇದ್ದೂ ಇಲ್ಲದಂತೆ ಮಿಣುಕುವ ದಾರಿ ಬದಿಯ ದೀಪದ ಬೆಳಕಿನಲ್ಲಿ, ನಾವೇ ನಾವಾದ ನಾವು, ನಿಧಾನವಾಗಿ ನಡೆಯುತ್ತಾ, ಗಹನವಾದ ಚರ್ಚೆಯಲ್ಲೋ, ತಿಳಿದಿರದ ವಿಷಯವನ್ನು ಕೇಳಿ ತಿಳಿದುಕೊಳ್ಳುತ್ತಲೋ ಮುಳುಗಿರಲು, ಯಾವತ್ತೂ ಅನುಚಿತವಾಗಿ ನಡೆದುಕೊಂಡಿರಲಿಲ್ಲ. ಅವಳ ತಂದೆ-ತಾಯಿ ನನ್ನಲ್ಲಿ ಇರಿಸಿದ ವಿಶ್ವಾಸವನ್ನು ಉಳಿಸಿಕೊಂಡೆ ಎನ್ನುವ ತೃಪ್ತಿಯಿಂದ ಬೀಗುತ್ತಿದ್ದೆ! ಇದರಿಂದ ಅನುಪಮಳ ಮತ್ತು ಅವರ ಮನೆಯವರ ಮೆಚ್ಚುಗೆಗೆ ಪಾತ್ರನಾಗಿದ್ದೇನೆಂದು ನಾನು ತಿಳಿದುಕೊಂಡಿದ್ದೆ.

ಪಿ.ಯು.ಸಿ. ಮುಗಿಯುತ್ತಲೇ ಅನುಪಮಾ ಅನಾಯಾಸವಾಗಿ ಎಂ.ಬಿ.ಬಿ.ಎಸ್. ಸೇರಿದಳು. ಈ ನಡುವೆ ನಾನು, ಅವರ ಮನೆಯಿಂದ ಹೊರಬಿದ್ದು, ಒಂದು ಚಿಕ್ಕ ಮನೆ ಬಾಡಿಗೆಗೆ ಹಿಡಿದಿದ್ದೆ. ಎರಡು ದಿನಕ್ಕೊಮ್ಮೆಯಾದರೂ ಅನುಪಮಳನ್ನು ನಾನು ಕಾಣದೆ ಇರುತ್ತಿರಲಿಲ್ಲ. ವರ್ಷ ಕಳೆದಂತೆ ಅವಳ ಜವಾಬ್ದಾರಿಯೂ ಹೆಚ್ಚಿದ್ದರಿಂದ, ನಮ್ಮ ಹರಟೆ ಕಡಿಮೆಯಾಗಿತ್ತು. ಒಳ್ಳೆಯ ನಾಟಕ, ಸಿನಿಮಾ ಎಂದು ಹಿಂದೆ ಕರೆದೊಯ್ಯುತ್ತಿದ್ದುದು ಈಗ ಸಾಧ್ಯವಾಗುತ್ತಿರಲಿಲ್ಲ. ಆದರೂ ಅವಳದು ಅದೇ ವಿಶ್ವಾಸ. ಅದೇ ಪ್ರೀತಿ. ಅವಳ ಮನೆಗೆ ಹೋದಾಗ, ಅವಳು ಓದಿನಲ್ಲಿ ಮಗ್ನಳಾಗಿದ್ದರೆ, ನೆಂಟರಿಷ್ಟರ ಗೌಜಿಯಲ್ಲಿದ್ದರೆ ನನ್ನೊಡನೆ ಮಾತನಾಡುವುದು ಕಡಿಮೆ. ಆಗ ನನ್ನ ಮನದಾಳದಲ್ಲಿ ಒಂದು ಬಗೆಯ ನೋವು. ನನ್ನನ್ನಿಲ್ಲಿ ಅವಗಣಿಸುತ್ತಿದ್ದಾಳೋ ಎಂಬ ಅಸಮಾಧಾನ. ಅದನ್ನು ಸೂಕ್ಷ್ಮವಾಗಿ ಹೇಳಿದರಂತೂ ಮತ್ತೆಂದೂ ಅಂಥ ತಪ್ಪು ಆಗದಂತೆ ನೋಡಿ ಕೊಳ್ಳುವ ಔದಾರ್ಯ ಅನುಪಮಳಲ್ಲಿತ್ತು.

ಎರಡನೆಯ ವರ್ಷ ಅವಳ ಮಾತಲ್ಲಿ ಪ್ರಕಾಶನೆಂಬ ಹುಡುಗನ ಪ್ರಸ್ತಾಪ ಆಗಾಗ ಕೇಳಿಬರತೊಡಗಿತು. ಒಂದು ದಿನ ಅವಳು, ತಾನು ಪ್ರಕಾಶನನ್ನು ಪ್ರೀತಿಸುವುದಾಗಿ ಗುಟ್ಟಾಗಿ ನನ್ನಲ್ಲಿ ಹೇಳಿದಳು. ಆ ಕ್ಷಣ, ನನ್ನಲ್ಲಿ ಅವ್ಯಕ್ತವಾದ ನೋವು ಕಾಣಿಸಿಕೊಂಡದ್ದು ನಿಜ. ನಮ್ಮದಾದ ಒಂದು ವಸ್ತುವಿಗೆ ಇನ್ನೊಬ್ಬರಾರೋ ಕೈಹಾಕಿದಂತೆ.

ನನ್ನ ರಿಯಾಕ್ಷನ್ ಬಯಸಿದ್ದಳು ಅನುಪಮಾ. ''ಅಂಕಲ್, ನೀವು ಏನು ಹೇಳುತ್ತೀರಿ? ಅಪ್ಪ-ಅಮ್ಮ ಯಾರಿಗೂ ಈ ವಿಷಯ ಹೇಳಿಲ್ಲ. ನಿಮಗೆ ಮಾತ್ರ ಹೇಳುತ್ತಿದ್ದೇನೆ.''

ನಾನು, ''ಹುಡುಗನನ್ನು ನೋಡದೆ, ಅವನನ್ನು ತಿಳಿಯದೆ ಏನೆಂದು ಹೇಳಲಿ?'' ಎಂದಾಗ, ಪ್ರಕಾಶನ ಗುಣಗಾನ ಮಾಡತೊಡಗಿದಳು.

''ನನ್ನನ್ನು ಒಂದು ದಿನ ಕಾಣದಿದ್ದರೆ ಹುಚ್ಚ ನಂತಾಗುತ್ತಾನೆ'' ಎಂದು ಹೇಳುತ್ತಾ ಹೋದವಳನ್ನು ಅರ್ಧದಲ್ಲಿ ತಡೆದು, ''ಅವನದೇ ಡೈಲಾಗೋ ಇದು?'' ಎಂದಾಗ ಪೆಚ್ಚಾದಳು.

''ಇರಬಹುದು, ಅವನು ನಿನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿರಬಹುದು. ಆದರೆ ಅವನು ಹೇಳುವ ರೀತಿ ನೋಡುವಾಗ ನಿನ್ನನ್ನು ಸಕತ್ ಆಗಿ ಇಂಪ್ರೆಸ್ ಮಾಡಲು ಪ್ರಯತ್ನಿಸಿದ ಹಾಗಿದೆ'' ಎಂದೆ.

''ಇಲ್ಲ ಅಂಕಲ್, ನಾನೇನಾದರೂ ಅವನನ್ನು ಮದುವೆಯಾಗಲು ಒಪ್ಪದಿದ್ದರೆ ಸನ್ಯಾಸಿಯಾಗಿ ಹಿಮಾಲಯದ ಕಡೆ ಹೋಗಲು ತೀರ್ಮಾನಿಸಿದ್ದಾನಂತೆ'' ಎಂದಳು ಅನುಪಮಾ.

ಎಷ್ಟು ಮುಗ್ಧ ಈ ಹುಡುಗಿ ಎಂದುಕೊಂಡೆ ನನ್ನಷ್ಟಕ್ಕೆ. 'ಬೆಸ್ಟ್ ವಿಶಸ್' ಎಂದೆ ಪ್ರಕಟವಾಗಿ. ಅನುಪಮಾ ಖಿನ್ನಳಾದುದನ್ನು ಗಮನಿಸಿದೆ.

ಮತ್ತೂ ಎರಡು ವರ್ಷ ಕಳೆಯಿತು. ಅವಳ ಪ್ರೇಮ ಪ್ರಕರಣ ಅಪ್ಪ, ಅಮ್ಮನಿಗೂ ತಿಳಿಯಿತು. ಸ್ವಲ್ಪ ತಕರಾರುಗಳು, ಕಣ್ಣೀರ ಹರಿದಾಟ ಆಗಿ, ಕೊನೆಗೂ ಸಹಮತ ಏರ್ಪಟ್ಟಿತು. ಎಂ.ಬಿ.ಬಿ.ಎಸ್. ಆದಮೇಲೆಯೇ ಮದುವೆ ಎಂದು ತೀರ್ಮಾನಿಸಿದ್ದರು. ಪ್ರಕಾಶನನ್ನು ಒಂದು ಬಾರಿ ನನಗೆ ತೋರಿಸುವುದಕ್ಕೆಂದೇ ಕರೆತಂದಿದ್ದಳು. ಹುಡುಗ ಏನೇನೂ ಚೆನ್ನಾಗಿರಲಿಲ್ಲ. ಅನುಪಮಳಿಗೆ ತಕ್ಕ ಹುಡುಗನೇ ಅಲ್ಲ.

ನಾನು ಕಾರಣಾಂತರಗಳಿಂದ ನೌಕರಿ, ಬೆಂಗಳೂರು-ಎರಡನ್ನೂ ಬಿಟ್ಟು ಊರು ಸೇರಬೇಕಾಯಿತು. ಈ ನಡುವೆ ನನ್ನ ಮದುವೆ ತರಾತುರಿಯಲ್ಲಿ ನಡೆದುಹೋಯಿತು. ಅನುಪಮಳಿಗೆ ಪರೀಕ್ಷೆ ಹೊತ್ತು, ಬಂದಿರಲಿಲ್ಲ. ಮದುವೆಗೆ ಬರಲಾಗದಿದ್ದುದಕ್ಕೆ ಅತೀವ ಬೇಸರಪಟ್ಟುಕೊಂಡು ಬರೆದ ಪತ್ರ ಮತ್ತು ಶುಭಾಶಯ ಪತ್ರಗಳು ಬಂದಿದ್ದವು.

ಇದಾದ ಕೆಲವೇ ತಿಂಗಳುಗಳ ಅನಂತರ, ಇದ್ದಕ್ಕಿದ್ದಂತೆ ಅನುಪಮಾ ಅಸ್ವಸ್ಥಳಾಗಿ ಆಸ್ಪತ್ರೆ ಸೇರಿದ್ದು, ಅವಳಿಗೆ ಲಿವರ್ ಕ್ಯಾನ್ಸರ್ ಎಂದು ಪತ್ತೆಯಾದುದು ತಿಳಿದು ನಾನು ಬೆಂಗಳೂರಿಗೆ ಧಾವಿಸಿದೆ.

ಕ್ಯಾನ್ಸರ್ ವಾರ್ಡಿನ ಸ್ಪೆಷಲ್ ರೂಮಿನಲ್ಲಿದ್ದ ಪೇಶಂಟನ್ನು ಅನುಪಮಾ ಎಂದು ಗುರುತಿಸುವುದೇ ಸಾಧ್ಯವಿರಲಿಲ್ಲ. ತಲೆಕೂದಲು ಉದುರಿ ಬಡಕಲಾಗಿದ್ದ ಮೈ. ಡಿಂಪಲ್ ಮೂಡಿಸುತ್ತಿದ್ದ ಎರಡೂ ಕೆನ್ನೆಗಳು ಬತ್ತಿದ್ದವು. ಕಣ್ಣುಗಳು ನಿಸ್ತೇಜವಾಗಿದ್ದವು. ಅವಳನ್ನು ಕಂಡು ನನ್ನ ಹೃದಯ ಹಿಂಡಿದಂತಾಯಿತು. ನನ್ನನ್ನು ನೋಡುತ್ತಲೇ ಅನುಪಮಾ ಹತಾಶೆಯ ಕ್ಷೀಣ ನಗುವಿನೊಂದಿಗೆ ಸ್ವಾಗತಿಸಿದಳು. ''ಏನಿದೆಲ್ಲಾ ಅನುಪಮಾ? ಯಾಕೆ ಹೀಗಾಯಿತು?'' ಎಂದೆ, ಅವಳ ಎರಡೂ ಕೈಗಳನ್ನು ನನ್ನ ಕೈಗಳಲ್ಲಿ ತೆಗೆದುಕೊಂಡು. ಕಣ್ಣಂಚುಗಳಲ್ಲಿ ನೀರು ತನ್ನಿಂದ ತಾನೇ ತುಂಬಿಕೊಳ್ಳತೊಡಗಿತು. ಅವಳಲ್ಲಿ ಮಾತುಗಳಿರಲಿಲ್ಲ. ವೇದನೆಯೊಂದೇ ಇದ್ದಂತಿತ್ತು.

ಅಲ್ಲಿಗೆ ಹೋದಮೇಲೆಯೇ ನನಗೆ ಗೊತ್ತಾದುದು-ಅನುಪಮಳಿಗೆ ಈ ಮೊದಲು ಒಮ್ಮೆ ಅಪರೇಷನ್ ಆಗಿ ಮನೆಗೆ ಹೋದವಳಿಗೆ ಮತ್ತೆ ಕಾಯಿಲೆ ಉಲ್ಬಣಿಸಿ, ಅಪಾಯಕಾರಿ ಮಟ್ಟಕ್ಕೆ ತಲಪಿದಮೇಲೆಯೇ ಅದರ ಪತ್ತೆಯಾಗಿ, ಆಸ್ಪತ್ರೆಗೆ ಮತ್ತೆ ದಾಖಲಾದುದು ಎಂದು.

''ಪ್ರಕಾಶ್ ಎಲ್ಲಿ?'', ಅಕ್ಕಪಕ್ಕದಲ್ಲಿ ಇಲ್ಲದುದನ್ನು ಕಂಡು ಕೇಳಿದೆ.

ಅವಳ ಮುಖ ಕಳೆಗುಂದಿತು. ಹೇಳಲೋ ಬೇಡವೋ ಎಂದು ಸಂದೇಹಿಸುವಂತಿತ್ತು.

''ಈ ದಿನ ಇರ್ತೀರಲ್ಲ ಅಂಕಲ್?'' ಎಂದು ಅವಳು ವಿಷಯ ತಿರುಗಿಸಿದಳು.

ಹೌದು ಎಂದೆ. ನನ್ನ ಪತ್ನಿ ಬಗ್ಗೆ ವಿಚಾರಿಸಿದಳು. ಚುಡಾಯಿಸಿದಳು ಕೂಡ. ''ಕರೆದುಕೊಂಡು ಬಂದಿದ್ದರೆ ನಾನೂ ನೋಡುತ್ತಿದ್ದೆ'' ಎಂದಳು.

''ನಿನಗೆ ಗುಣವಾಗಲಿ. ನಾನೇ ಬಂದು ನಿನ್ನನ್ನು ನಮ್ಮೂರಿಗೆ ವಿಶ್ರಾಂತಿಗೆಂದು ಕರೆದುಕೊಂಡು ಹೋಗುತ್ತೇನೆ. ಆಗ ನೋಡುವಿಯಂತೆ'' ಎಂದೆ.

ಅನುಪಮಾ ಶುಷ್ಕ ನಗೆ ನಕ್ಕಳು.

ಜೀವನೋತ್ಸಾಹದಿಂದ ತುಂಬಿ ತುಳುಕುತ್ತಿದ್ದ ಹುಡುಗಿಯ ಅವಸ್ಥೆ ಏನಾಗಿಹೋಯಿತು? ಕ್ಯಾನ್ಸರ್ ಇಷ್ಟು ಭಯಾನಕವೇ? ಅದು ಮನೆ ಬಾಗಿಲನ್ನು ತಟ್ಟದೆ ಅದರ ವಿಕಾರ, ಅದರ ಅಟ್ಟಹಾಸದ ಅರಿವೇ ಆಗುವುದಿಲ್ಲ ಎನ್ನುವುದು ಎಷ್ಟು ಸತ್ಯ! ಅವಳ ತಂದೆ-ತಾಯಿಯರಿಗೆ ಆಗಿರಬಹುದಾದ ಆಘಾತ ಎಷ್ಟಿರಬಹುದು! ಅದರಲ್ಲೂ ಪ್ರಕಾಶ್‌ಗೆ! ನನ್ನ ಯೋಚನಾ ಸರಣಿ ಅಲ್ಲೇ ನಿಂತಿತು. ಹೌದು ಪ್ರಕಾಶ್ ಇಲ್ಲಿ ಯಾಕಿಲ್ಲ? ಅವನ ವಿಷಯ ಎತ್ತಿದಾಗ ಅವಳು ಮಾತನ್ನು ಮರೆಮಾಚಲು ಯತ್ನಿಸಿದಳೇಕೆ?

''ಅಂಕಲ್, ತುಂಬ ಆಯಾಸ ನನಗೆ. ಸ್ವಲ್ಪ ಮಲಗುತ್ತೇನೆ. ನೀವು ಮನೆಗೆ ಹೋಗಿ ಸ್ನಾನ ಮಾಡಿ, ತಿಂಡಿ ತಿಂದು, ಸ್ವಲ್ಪ ಮಲಗಿ, ಮತ್ತೆ ಬನ್ನಿ. ನಿಮ್ಮ ಹತ್ತಿರ ತುಂಬ ಮಾತನಾಡಬೇಕು'' ಎಂದಳು.

ನಾನು ಅವರ ಮನೆಗೆ ಹೋಗಲಿಲ್ಲ. ಅಲ್ಲಿ ಅವಳ ತಂದೆ-ತಾಯಿಯನ್ನು ಎದುರಿಸುವ ಸ್ಥಿತಿಯಲ್ಲಿ ಇರಲಿಲ್ಲ. ಹಾಗೆಂದು ಅವರನ್ನು ಕಂಡು ಮಾತನಾಡದೆ ಹೋಗುವಂತೆಯೂ ಇಲ್ಲ. ಈ ದಿನ ಬೇಡ ಎಂದು ನಿರ್ಧರಿಸಿ, ಹತ್ತಿರವೇ ಇದ್ದ ಹೊಟೇಲಿನಲ್ಲಿ ರೂಮ್ ಮಾಡಿ, ಸ್ನಾನ-ತಿಂಡಿ ಮುಗಿಸಿದೆ. ಸ್ವಲ್ಪ ಅಡ್ಡಾದೆ. ರಾತ್ರಿ ಇಡೀ ನಿದ್ದೆ ಇರಲಿಲ್ಲ ಬಸ್ಸಿನಲ್ಲಿ.

ಸಂಜೆ ಆಸ್ಪತ್ರೆಗೆ ಹೋದಾಗ ಅನುಪಮಾ ಎಚ್ಚತ್ತಿದ್ದಳು. ಅಲ್ಲಿ ಅವಳ ತಂದೆ-ತಾಯಿಯರ ಭೇಟಿ ಆಯಿತು. ಅವಳ ಅಮ್ಮ ನನ್ನನ್ನು ನೋಡುತ್ತಲೇ 'ಗೋಳೋ' ಎಂದು ಅಳತೊಡಗಿದರು. ಅಪ್ಪ ಮೌನವಾಗಿ ಮರುಗುತ್ತಿದ್ದರು.

''ನನಗೋಸ್ಕರ ಒಂದು ದಿನ ಇರ್ತೀರಾ ಅಂಕಲ್'', ಧುತ್ತೆಂದು ಬಂದ ಕೇಳಿಕೆಗೆ 'ಇಲ್ಲ' ವೆನ್ನಲಾಗಲಿಲ್ಲ. ಅನು ಸಂತಸಗೊಂಡಂತೆ ಕಂಡಿತು.

''ಈವತ್ತು ಎಷ್ಟೋ ವಾಸಿ. ನೋವು ಕಡಿಮೆ. ನೀವು ಬಂದಿದ್ದೀರಿ ಅಂತಲೋ ಏನೋ'', ನಾನೊಬ್ಬನೇ ಅವಳ ಹತ್ತಿರ ಇದ್ದಾಗ ಹೇಳಿದಳು. ಈ ದಿನ ಮತ್ತು ನಾಳೆ ಇಡೀ ಅವಳ ಬಳಿಯೇ ಕಳೆಯಬೇಕೆಂದು ನಿರ್ಧರಿಸಿದೆ.

ಸಮಯ ನೋಡಿ ಪ್ರಕಾಶನ ಸುದ್ದಿ ಮತ್ತೆ ಎತ್ತಿದೆ.

''ನಿಮ್ಮ ಹತ್ತಿರ ಮುಚ್ಚುಮರೆ ಎಂಥದು ಅಂಕಲ್? ನಮ್ಮ ಎಂಗೇಜ್‌ಮೆಂಟ್‌ಗೆ ಎರಡು ದಿನ ಇರುವಾಗಲೇ ನನಗೆ ನೋವು ಜೋರಾಗಿ ಆಸ್ಪತ್ರೆ ಸೇರಿದೆ. ಎಲ್ಲ ಟೆಸ್ಟ್‌ಗಳು ಮುಗಿದಾದ ಮೇಲೆ ಲಿವರ್ ಕ್ಯಾನ್ಸರ್ ಎಂದು ಸ್ಪಷ್ಟವಾಯಿತು. ಅದು ಗೊತ್ತಾಗುತ್ತಲೇ ಪ್ರಕಾಶ ದೂರವಾದ. ನೆನಪಿದೆಯ ಅಂಕಲ್? ಪ್ರಕಾಶ್ ಪರಿಚಯವಾದಾಗ ಅವನ ಪ್ರೀತಿಯ ಬಗ್ಗೆ ಕೊಚ್ಚಿಕೊಂಡಿದ್ದೆ ನೀವು ಎಚ್ಚರಿಸುತ್ತಾ ಇದ್ದಿರಿ. ನಾನು ಕೇಳಲಿಲ್ಲ. ಕೊನೆಗೂ ನಿಮ್ಮ ಮಾತೇ ನಿಜವಾಯಿತು.''

''ಪ್ರಾಮಿಸ್ ಅನುಪಮಾ, ಹೀಗೇ ಮಾತಿಗೆ ಅಂದಿದ್ದೆ. ಐ ಆ್ಯಮ್ ಸೊ ಸ್ಸಾರಿ''

''ಇಟ್ ಈಸ್ ಓ.ಕೆ. ಅಂಕಲ್. ಇದು ಉರುಳುವ ಮರ. ಅದನ್ನು ಅವನ್ಯಾಕೆ ಸುತ್ತು ಬಳಸಿ ಉರುಳು ಹಾಕಿಸಿಕೊಳ್ಳಬೇಕು ಅಲ್ಲವೇ?'' ಎಂದಳು ವೇದಾಂತಿಯಂತೆ.

''ಕೇಸ್ ಅಷ್ಟು ಸೀರಿಯಸ್ಸೇ ಅನು?'' ನಾನು ಕೇಳಿದೆ.

''ಹೌದು ಅಂಕಲ್. ನಾನು ವೈದ್ಯಕೀಯ ವಿದ್ಯಾರ್ಥಿ. ಡ್ಯಾಡಿ ಜಿಲ್ಲಾ ಸರ್ಜನ್. ಈ ರೋಗದ ಬಗ್ಗೆ ನಮಗೆ ಪೂರ್ಣ ಗೊತ್ತಿಲ್ಲದೆ ಹೋಗುವುದು ಸಾಧ್ಯವೇ? ಇನ್ನು ಹೆಚ್ಚೆಂದರೆ

ಎರಡು ತಿಂಗಳು. ಆಮೇಲೆ... ಆಮೇಲೆ... ನಿಮ್ಮ ನೆಚ್ಚಿನ ಅನು ಈ ಲೋಕದಲ್ಲಿ ಇರುವುದಿಲ್ಲ ಅಂಕಲ್'', ಒಮ್ಮಿಂದೊಮ್ಮೆಲೇ ಅವಳ ದುಃಖ ಕಟ್ಟೆ ಒಡೆಯಿತು. ನಾನೂ ಅವಳೊಂದಿಗೆ ಕಣ್ಣೀರು ಹಾಕುವುದನ್ನು ಬಿಟ್ಟು ಬೇರೇನೂ ಮಾಡಲಾಗಲಿಲ್ಲ.

''ಅಂಕಲ್ ನನ್ನದೊಂದು ಮಾತು ನಡೆಸಿಕೊಡ್ತೀರಾ?''

''ಅನು ನನ್ನಲ್ಲೂ ಈ ರಿಕ್ವೆಸ್ಟೇ? ಅದೂ ಈ ಸ್ಥಿತಿಯಲ್ಲಿ! ಏನು ಆಗಬೇಕು ಹೇಳು. ಅದು ನನ್ನ ಕರ್ತವ್ಯ ಎಂದು ನಡೆಸಿಕೊಡುತ್ತೇನೆ.''

''ಅದು ಎಷ್ಟೇ ಕಷ್ಟದ್ದು ಆಗಿದ್ದರೂ ನಡೆಸಿ ಕೊಡ್ತೀರಾ?''

''ಖಂಡಿತ''

''ಜೀವಕ್ಕಿಂತ ಮಿಗಿಲಾದುದಾಗಿದ್ದರೂ ನಡೆಸಿಕೊಡ್ತೀರಲ್ಲಾ?''

ಅಷ್ಟರಲ್ಲಿ ಡಾಕ್ಟರರ ತಂಡ ನುಗ್ಗಿತು. ನಾನು ಎದ್ದು ಹೊರಗೆ ನಡೆದೆ.

ಅನುಪಮಳ ರಿಕ್ವೆಸ್ಟ್ ಏನಿರಬಹುದು? ಎಷ್ಟು ಯೋಚನೆ ಮಾಡಿದರೂ ಹೊಳೆಯಲಿಲ್ಲ. ತಲೆ ಕೆಟ್ಟಂತಾಯಿತು.

ಡಾಕ್ಟರರು ಹೋದ ಮೇಲೆ ನಾನು ಮತ್ತೆ ಅನುಪಮಳ ಬಳಿಗೆ ಹೋದೆ. ಹತ್ತಿರವೇ ಕೂರಲು ಹೇಳಿದಳು. ಮಲಗಿದ್ದಲ್ಲಿಂದಲೇ ನನ್ನ ಕೈಯನ್ನು ತನ್ನ ಕೈಗಳಲ್ಲಿ ತೆಗೆದುಕೊಂಡು, ''ಹೇಳಿ ಅಂಕಲ್, ನನ್ನದೊಂದು ಮಾತು ನಡೆಸಿಕೊಡ್ತೀರಾ?'' ಎಂದಳು.

''ಹೇಳು ಅನು, ಏನಾಗಬೇಕು ಹೇಳು.'' ಹೃದಯವನ್ನೇ ಕಿತ್ತು ಕೊಡಬೇಕೆಂದರೂ, ನನ್ನ ಪ್ರಾಣವನ್ನೇ ಬೇಡಿದರೂ ಕೊಡುವ ಮನಃಸ್ಥಿತಿಯಲ್ಲಿದ್ದೆ. ನನ್ನ ಕಣ್ಣುಗಳು ತುಂಬಿ ಬರಲಾರಂಭಿಸಿದವು.

''ಈ ರಾತ್ರಿ ನೀವು ಇಲ್ಲೇ, ನನ್ನ ಪಕ್ಕದಲ್ಲೇ ಇರಬೇಕು. ಇಡೀ ರಾತ್ರಿ ನಾವು ಮಾತನಾಡಬೇಕು. ಹಿಂದಿನ ದಿನಗಳನ್ನು ಮೆಲುಕುಹಾಕಬೇಕು ಎಂದು ತುಂಬ ಆಸೆಯಾಗುತ್ತಿದೆ. ಹಿಂದಿನದೇನಾದರೂ ಲೆಕ್ಕ ಬಾಕಿ ಇದ್ದರೆ ಚುಕ್ತಾ ಮಾಡಬೇಕು'' ಎಂದಳು ಅನು.

ಒಂದು ಕ್ಷಣ ಬೆಪ್ಪಾದೆ. ಎಂಥ ಆಸೆ ಇದು? ಹಿಂದೆ ನಾವು ಹೀಗೆ ಕುಳಿತು ಮಾತನಾಡಿದ್ದಿದ್ದರೆ ರಾತ್ರಿ ಇಡೀ ಕುಳಿತದ್ದಿದೆ. ಈಗ, ಇಂಥ ಸ್ಥಿತಿಯಲ್ಲಿ?

ಆದರೆ ತನ್ನ ಕೊನೆಯನ್ನು ಬಲ್ಲ, ಬದುಕಿ ಉಳಿಯುವ ಆಸೆಯನ್ನೇ ಕೈಬಿಟ್ಟ ರೋಗಿಯೊಬ್ಬಳ ಕೊನೆಯಾಸೆ ಇದು.

ಅವಳು ರೋಗಿಯಾದರೂ ಹೆಣ್ಣು, ನಾನು ಗಂಡು ಎಂಬ ಭಾವನೆ ಒಂದು ಗಳಿಗೆ ಸುಳಿದು ಹೋಯಿತು. ಹಿಂದಿಲ್ಲದ ಭಾವನೆ ಈಗ ಹೇಗೆ ಬಂತು? ಅದೇ ಆಶ್ಚರ್ಯ. ಆಕೆ ಎಲುಬಿನ ಗೂಡು... ಈ ಪರಿಸ್ಥಿತಿಯಲ್ಲಿ...ಛೆ ನಾನು ಹೀಗೂ ಯೋಚಿಸಬಹುದ? ನನ್ನನ್ನು ನಾನೇ ಹೀಗಳೆದುಕೊಂಡೆ.

''ಏನು ಯೋಚಿಸುತ್ತಿದ್ದೀರಿ ಅಂಕಲ್?''

''ಖಂಡಿತ ಅನು, ಖಂಡಿತ ಇರುತ್ತೇನೆ.''

''ಥ್ಯಾಂಕ್ಯೂ ಅಂಕಲ್.''

ಅದು ಸ್ಪೆಷಲ್ ರೂಮ್. ಎಲ್ಲ ಸೌಕರ್ಯಗಳೂ ಇದ್ದವು. ಬಾತ್‌ರೂಮ್, ಟಾಯ್ಲೆಟ್, ನೋಡಿಕೊಳ್ಳುವವರಿಗೆ ಪ್ರತ್ಯೇಕ ಮಂಚ, ಹಾಸಿಗೆ.

ಡಾಕ್ಟರ್ ಮತ್ತು ನರ್ಸ್ ಬಂದು ಅವರ ಕೆಲಸ ಮುಗಿಸಿ ಹೋದರು. ಇಂಜೆಕ್ಷನ್ ಚುಚ್ಚಿ ಹೋದರು.

''ಅಪರೂಪಕ್ಕೊಬ್ಬರು ಬಂದಿದ್ದಾರೆ. ತುಂಬ ಮಾತನಾಡುವುದಿದೆ. ನನ್ನ ದೇಹ ಅದಕ್ಕೆ ಅನುವು ಮಾಡಿಕೊಡಬೇಕು ಎಂದು ಡಾಕ್ಟರರಿಗೆ ತಾಕೀತು ಮಾಡಿದ್ದೇನೆ'' ಎಂದಳು ಅನುಪಮಾ ನಗುತ್ತಾ.

ರಾತ್ರಿ ನಾನು ಹೊರಗೆ ಹೋಗಿ ಊಟ ಮಾಡಿಕೊಂಡು ಬಂದೆ. ಬರುವಾಗ ಅನುಪಮಳ ಇಷ್ಟದ ಸಿಹಿತಿಂಡಿ, ಸ್ವಲ್ಪ ಹಣ್ಣು-ಹಂಪಲು ಕಟ್ಟಿಸಿಕೊಂಡು ಬಂದೆ. ತಲೆದಿಂಬು ಒಂದು ಮೇಲೆ ಇಟ್ಟು, ಅದಕ್ಕೆ ಆನಿಸಿ ಕುಳ್ಳಿರಿಸಿ, ಕಿತ್ತಳೆ ಸಿಪ್ಪೆ ಸುಲಿದು, ಬೀಜ ತೆಗೆದು, ಬಾಯಿಗಿರಿಸಿದೆ. ಅವಳ ಕಣ್ಣುಗಳು ಮಿನುಗಿದವು. ಪ್ರೀತಿ ಸೂಸಿದವು. ಸಿಹಿಯ ತುಂಡನ್ನೂ ಬಾಯಿಗಿರಿಸಿದೆ.

ನಮ್ಮ ಮಾತು ಹಿಂದಕ್ಕೋಡಿತು. ನಾನು ಅವಳ ಮನೆಗೆ ಬಂದ ಅನಂತರದ ನಾಲ್ಕೈದು ವರ್ಷಗಳ ಘಟನಾವಳಿಗಳು ನಮ್ಮ ಮಾತಿನಲ್ಲಿ ಬಂದುಹೋದವು. ಅವುಗಳ ಸ್ವಾರಸ್ಯವನ್ನು ಸವಿಯುವುದು, ನಗುವುದು, ಮತ್ತೊಂದಕ್ಕೆ ಹಾರುವುದು-ಹೀಗೇ ನಡೆದಿತ್ತು.

ಒಂದು ಕ್ಷಣ ಗಂಭೀರಳಾದ ಅನುಪಮಾ,

''ಅಂಕಲ್, ನನ್ನಲ್ಲಿ ನೀವು ಮೆಚ್ಚಿಕೊಂಡದ್ದು ಏನನ್ನು?'' ಎಂಬ ಪ್ರಶ್ನೆ ಎಸೆದಳು.

''ನಿನ್ನ ನಡೆ-ನುಡಿ, ನಿರ್ಮಲ ಅಂತಃಕರಣ.''

''ಅಷ್ಟೇನೆ?''

ನಾನು ನಿರುತ್ತರನಾದೆ.

''ನನ್ನನ್ನು ನೀವು ಎಂದೂ ಪ್ರೀತಿಸಿರಲಿಲ್ಲವೇ? ಐ ಮೀನ್ ಲವ್...''

ನೇರವಾಗಿ ನನ್ನ ಹೃದಯಕ್ಕೆ ಬಾಣ ಬಿಟ್ಟಂತಿತ್ತು.

''ನಿಜ ಹೇಳಿ ಅಂಕಲ್, ನೀವು ನನ್ನನ್ನು ಬಯಸಿರಲಿಲ್ಲವೇ?''

ನನಗೆ ಉತ್ತರಿಸುವುದು ಕಷ್ಟವಾಯಿತು. ಹೃದಯಭೇದಕ ಪ್ರಶ್ನೆ. ಮಾತು ಮುಗ್ಗರಿಸತೊಡಗಿತು.

''ಆತ್ಮವಂಚನೆ ಬೇಡ. ನಿಜ ಹೇಳಿ... ಯಾಕೆ ನಿಮ್ಮನ್ನೂ ವಂಚಿಸಿ, ನನ್ನನ್ನೂ ದಂಡಿಸಿದಿರಿ? ನಿಮ್ಮಿಂದ ಸೂಚನೆಗಳೇನೂ ಬಾರದೆ ನಾನೆಷ್ಟು



ಪರಿತಪಿಸಿದೆ ಗೊತ್ತೇ? ಪ್ರಕಾಶ್‌ನನ್ನು ನಿಮ್ಮೆದುರು ಹೊಗಳುವಾಗಲಾದರೂ ನಿಮ್ಮಲ್ಲಿ ಈರ್ಷ್ಯೆ ಹುಟ್ಟುತ್ತದೆ; ಬಾಯಿಬಿಟ್ಟು ಕೇಳುತ್ತೀರಿ ಎಂದು ಕೊಂಡಿದ್ದೆ. ನನ್ನ-ನಿಮ್ಮೊಳಗಿರುವ ವಯಸ್ಸಿನ ಅಂತರ, ಅಂತಸ್ತಿನ ಅಂತರ ನಿಮ್ಮನ್ನು ಕೈಕಟ್ಟಿತು ಎಂದೂ ಗೊತ್ತು. ಪ್ರಕಾಶನ ಪ್ರವೇಶವಾದಾಗ ಲಾದರೂ ನೀವು ಎಚ್ಚೆತ್ತುಕೊಳ್ಳುತ್ತೀರಿ ಎಂದು ಕೊಂಡಿದ್ದೆ. ನೀವು ಚಿಪ್ಪಿನಿಂದ ಹೊರ ಬರಲಿಲ್ಲ. ನೀವು ಹೊರಟು ಹೋದಿರಿ. ಹತಾಶಳಾದವಳು ನಾನು. ಪ್ರಕಾಶನಿಗೇ ಅಂಟಕೊಳ್ಳಲೇ ಬೇಕಾಯಿತು. ಆದರೆ ಅದು ಬರೀ ಗಿಲೀಟು ಅಂತ ಬಹುಬೇಗ ಗೊತ್ತಾಯಿತು. ಅಂಕಲ್, ಯಾಕೆ ಹೀಗೆ ಮಾಡಿದಿರಿ? ನಿಮ್ಮ ನಡೆ-ನುಡಿಗಳಲ್ಲಿ ನನ್ನ ಮೇಲಿದ್ದ ಪ್ರೀತಿಯ ಆಳ-ಅಗಲ ಬಲ್ಲೆ. ಅದು ಬರೀ ಅಭಿಮಾನ ಎಂದು ಬಿಂಬಿಸುವ ಪ್ರಯತ್ನ ವನ್ನೇಕೆ ಮಾಡಿದಿರಿ?''

''ಆ ಮಾತು ಹೋಗಲಿ... ನಾನಿನ್ನು ಹೆಚ್ಚು ದಿನ ಬದುಕುವುದಿಲ್ಲ. ನಾನು ಜೀವನವನ್ನು ಎಷ್ಟು ಪ್ರೀತಿಸುತ್ತಿದ್ದೆ ಎಂಬುದನ್ನು ನೀವು ಬಲ್ಲಿರಿ. ಆದರೆ ನಾನು ಹೋಗಲೇಬೇಕು. ನನ್ನದೊಂದು ಕೋರಿಕೆ ಇದೆ. ಅಂಕಲ್, ನೀವಲ್ಲದೆ ಈ ಪ್ರಪಂಚದಲ್ಲಿ ಬೇರಾರೂ ಅದನ್ನು ನೆರವೇರಿಸಲಾರರು. ನಿರ್ಲಜ್ಜಳಾಗಿ, ಅದೂ ಇಂಥ ಪರಿಸ್ಥಿತಿಯಲ್ಲಿ ಆ ಬೇಡಿಕೆ ಮುಂದಿಡುತ್ತಿರುವುದಕ್ಕೆ ಕ್ಷಮಿಸಿ, ನಿಮ್ಮ ಅನುಗೆ ನೀವು ಈ ಕ್ಷಣದಲ್ಲಿ ಅಷ್ಟಾದರೂ ಮಾಡಲೇಬೇಕು ಅಂಕಲ್. ಈ ರಾತ್ರಿ.... ಈ ರಾತ್ರಿ ನಾನು ಹೆಣ್ಣು... ನಿಮ್ಮನ್ನು ಆರಾಧಿಸಿದ ಹೆಣ್ಣು ಎಂಬುದನ್ನು ನನಗೆ ನೆನಪಿಸಿ ಕೊಡುತ್ತೀರಾ? ಪ್ಲೀಸ್ ಅಂಕಲ್.''

ನಾನು ಸ್ತಂಭೀಭೂತನಾದೆ. ತಲೆ ಗಿರ್ರೆನ್ನತೊಡಗಿತು. ನಾನು ಈಗ ಕೇಳಿದ್ದು ನಿಜವೇ ಎಂಬ ಸಂಶಯ ಕಾಡಿತು. ತಲೆಯೆಂಬ ಹೆಬ್ಬಂಡೆ ನುಚ್ಚುನೂರಾದಂತೆ, ಜ್ವಾಲಾಮುಖಿಯ ಮುಖದಲ್ಲೇ ನಿಂತಂತೆ ಅನುಭವ ಆಗತೊಡಗಿತು.

ನನ್ನ ತಲೆಯನ್ನು ತನ್ನ ಎದೆಗಾನಿಸಿಕೊಳ್ಳಬೇಕೆಂಬ ಇಚ್ಛೆ ಪ್ರಕಟಿಸಿದಳು. ಅವಳ ಎದೆಗೆ ಒರಗಿದೆ. ಕ್ರಾಪ್‌ನಲ್ಲಿ ನವುರಾಗಿ ಬೆರಳಾಡಿಸಿ,

''ಅದಕ್ಕೆ ಇಷ್ಟು ಯೋಚಿಸಬೇಕೆ ಅಂಕಲ್? ನಿಮ್ಮ ಪ್ರೀತಿಯ ಅನುವಿನ ಕೊನೆಯಾಸೆ ಇದು. ಈಡೇರಿಸಲಾರಿರಾ? ಪ್ರೀತಿಸಬೇಕು... ಪ್ರೀತಿ... ಅದೇನು? ಅದೆಷ್ಟು ಮಧುರ? ಅದರ ಅನುಭೂತಿ ಏನು ಎಂಬುದನ್ನು ತಿಳಿಯದೆ ನಾನು ಈ ಲೋಕ ಬಿಟ್ಟು ಹೋಗಬೇಕೇ...?'' ಮುಂದಕ್ಕೆ ನಾನು ಅವಳನ್ನು ಮಾತನಾಡಲು ಬಿಡಲಿಲ್ಲ. ಅವಳ ತುಟಿಗಳಿಗೆ ಹೂ ಮುತ್ತನಿತ್ತೆ. ಆಮೇಲೆ ಮುಖದ ತುಂಬ ಹರಡಿದೆ. ನಡುವೆ ಜಾರುತ್ತಿದ್ದ ನನ್ನ ಕಣ್ಣೀರ ಹನಿಗಳನ್ನು ಅನುಪಮಳೇ ತೊಡೆದಳು.



ಮರುದಿನ ಹಗಲಿಡೀ ಅವಳೊಂದಿಗೆ ಇದ್ದೆ. ರಾತ್ರಿಯ ಘಟನೆಯ ಬಗ್ಗೆ ಇಬ್ಬರೂ 'ಚ'ಕಾರ ಎತ್ತಲಿಲ್ಲ.

''ಹೇಗಿದ್ದೀಯಾ ಅನು?'' ಎಂದೆ ನಾನು.

''ಮೈ ಖುಶ್ ಹೂಂ'' ಎಂದು ತುಂಟತನದಿಂದ ನಕ್ಕಳು. ಆದರೂ ಮುಖದಲ್ಲಿ ಆಯಾಸದ ಲಕ್ಷಣಗಳಿದ್ದವು.

ಊರಿಗೆ ಹೊರಡಲೇಬೇಕಾಗಿತ್ತು. ಆದರೆ ಹೇಗೆ ಹೋಗಲಿ? ನನ್ನ ಸಂದಿಗ್ಧವನ್ನು ಅರಿತ ಅನುವೇ ನನ್ನನ್ನು ಹೊರಡಿಸಿದಳು. ರಾತ್ರಿ ಬಸ್ಸಿನಲ್ಲಿ ಊರಿಗೆ ಮರಳಿದೆ; ಮನಸ್ಸಿಲ್ಲದ ಮನಸ್ಸಿನಿಂದ.



ಅನುಪಮಾ ಗುಣಮುಖಳಾಗಿರುವಳೆಂದೂ, ಡಿಸ್‌ಚಾರ್ಜ್ ಮಾಡಿಸಿ ಮನೆಗೆ ಕರೆದುಕೊಂಡು ಬಂದಿರುವುದಾಗಿಯೂ, ನನ್ನನ್ನು ಬಹಳವಾಗಿ ನೆನಪಿಸಿಕೊಳ್ಳುತ್ತಿದ್ದಾಳೆಂದೂ ಅವಳ ಅಮ್ಮ ಫೋನ್‌ನಲ್ಲಿ ತಿಳಿಸಿದಾಗ ಎದೆ ಧಸಕ್ಕೆಂದಿತು. ನಾನು ಏನು ಆಗಬಾರದೆಂದು ಎಣಿಸಿದ್ದೆನೋ ಅದೇ ಆಗಿಹೋಗಿರಬೇಕು. ನಿರ್ವಾಹವಿಲ್ಲದೆ

ಕೂಡಲೇ ಬೆಂಗಳೂರಿಗೆ ಓಡಿದೆ. ನನ್ನನ್ನು ಕಂಡಾಗ ಅನುಪಮಳ ಕಣ್ಣಲ್ಲಿ ಕಂಡ ಮಿಂಚನ್ನು ಜೀವನ ಪರ್ಯಂತ ಮರೆಯಲಾರೆ. ಮನೆಯ ವಾತಾವರಣವೇ ಬದಲಾಗಿತ್ತು.

ಅನುಪಮಾ ತನ್ನ ಹತ್ತಿರವೇ ಕುಳಿತುಕೊಳ್ಳಲು ಹೇಳಿದಳು. ಕುಳಿತುಕೊಂಡೆ. ನನ್ನ ಮನಸ್ಸಿನಲ್ಲಿದ್ದುದನ್ನು ಅರ್ಥಮಾಡಿಕೊಂಡವಳಂತೆ, ಹೌದೆಂದು ಕಣ್ಣುಚ್ಚಿ, ಕೈಗಳನ್ನು ಹೊಟ್ಟೆ ಸುತ್ತ ಸವರಿಕೊಂಡಳು. ನಾನು ಬೆಚ್ಚಿದೆ. ಬೆವರಿದೆ. ಅನುಪಮಾ ತಾಯಿ ಆಗಲಿದ್ದಳು. ಅದರ ಪ್ರಭಾವವೇ ಅವಳ ದೇಹ ತೋರಿದ ಪ್ರತಿಕ್ರಿಯೆ. ಸ್ವಲ್ಪ ಮಟ್ಟಿಗೆ ಮೈ ಕೈ ತುಂಬಿಕೊಂಡಿದ್ದಳು.

''ಡಾಕ್ಟರರೂ ಕಕ್ಕಾಬಿಕ್ಕಿ. ಪಾಪ ಬಡಪಾಯಿ, ಕೇಳಲೋ ಬೇಡವೋ ಎಂದು ಹೊಯ್ದಾಡುತ್ತಿದ್ದರು. ನಾನೇ ನಿಜಸ್ಥಿತಿ ಹೇಳಿದೆ. ಪ್ರಕೃತಿಯ ವೈಚಿತ್ರ್ಯ ನೋಡಿ, ಅದರ ಜೀವನೋತ್ಸಾಹ ನೋಡಿ, ಬಿದ್ದುಹೋಗುವ ಮರದಲ್ಲೂ ಮೊಳಕೆ ಒಡೆಯುವುದೆಂದರೇನು?'', ಕಣ್ಣು ಮಿಟುಕಿಸಿದಳು.

ನಾನು ಮಾತು ಮರೆತು ಕೂತಿದ್ದೆ. ಅನು ಮುಂದೆ ಆಗುವುದನ್ನು ಯೋಚಿಸುತ್ತಲೇ ಇಲ್ಲವೇ?

''ಯೋಚಿಸಬೇಡಿ ಅಂಕಲ್, ಎಲ್ಲ ಸರಿಯಾಗುತ್ತೆ. ನೀವೇನೂ ಗಾಬರಿ ಆಗಬೇಡಿ'' ಎಂದಳು. ನನ್ನ ಮನಸ್ಸು ಓದಿದವಳಂತೆ.

ಮರುದಿನ ಊರಿಗೆ ಹಿಂತಿರುಗಿದೆ. ಈ ಸಲ ಅವಳನ್ನು ಬೀಳ್ಕೊಡುವಾಗ ಅಪಾರವಾದ ಸಂಕಟ ಅನುಭವಿಸಿದೆ. ಅನುವಿಗೂ ಅದರ ಅನುಭವ ಆಯಿತು. ಶುಷ್ಕ ನಗೆಯೊಂದೇ ಅವಳ ಪ್ರತಿಕ್ರಿಯೆ.

ಎಲ್ಲರಿಗೂ ಮೋಸ ಮಾಡಿದೆ. ಕೈಹಿಡಿದ ಪತ್ನಿಗೂ. ಅನುಪಮಳ ಬೇಡಿಕೆಗೆ 'ಹ್ಞೂಂ' ಗುಡುವಾಗ ಇದ್ಯಾವುದರ ಪರಿವೆಯಿರಲಿಲ್ಲ. ಈ ಬೆಳವಣಿಗೆಗೆ ಕಾರಣ ಆದೀತೆಂದು ಹೊಳೆದಿರಲಿಲ್ಲ. ಮುಂದೇನು? ಪ್ರಶ್ನೆ ಬೃಹದಾಕಾರವಾಗಿ ಬೆಳೆಯುತ್ತಲೇ ಇತ್ತು.



ತಿಂಗಳೊಳಗೆ ಟೆಲಿಗ್ರಾಮ್! ಬರಸಿಡಿಲು ಹೊತ್ತಿಗಿಂತಲೂ ಬೇಗ ಬಂದೆರಗಿತ್ತು. ಅನುಪಮಾ ಎಲ್ಲ ಪ್ರಯತ್ನಗಳ ನಡುವೆಯೂ, ನಮ್ಮನ್ನೆಲ್ಲ ಅಗಲಿ ಹೋಗಿಯೇಬಿಟ್ಟಳು.

ಶವಸಂಸ್ಕಾರಕ್ಕೆ ಹೋಗುವುದನ್ನು ಉದ್ದೇಶಪೂರ್ವಕವಾಗಿಯೇ ತಪ್ಪಿಸಿಕೊಂಡೆ. ಚಿತೆ ನನ್ನ ಎದೆಯಲ್ಲೂ ಉರಿಯುತ್ತಿತ್ತಲ್ಲ!



ಲೇಖಕರ ಇತ್ತೀಚೆಗೆ ಪ್ರಕಟಗೊಂಡಿರುವ 'ಹೆಜ್ಜೆ ಗುರುತು' (2000) ಕಥಾಸಂಕಲನದಿಂದ, ಸೌಮ್ಯಸಂಕೇತ ಪ್ರಕಾಶನ ಪರ್ಕಳ-576 123, ಉಡುಪಿ ಜಿಲ್ಲೆ. ಬೆಲೆ 50 ರೂ. ಪುಟ 108.



# ತಪ್ಪು ಬುತ್ತಿ ತಿಂದು ತಣಿದ (ಜ್ಞಾನದ) ಹಸಿವು





ಮುದ್ದು | ತಪ್ಪು

ಇದು 1955ರಲ್ಲಿ ನಡೆದ ಘಟನೆ. ಮಂಗಳೂರಿನ ಕುಲಶೇಖರದಲ್ಲಿ ಹೆಣ್ಮಕ್ಕಳ ಒಂದು ಕಾನ್ವೆಂಟ್ ಶಾಲೆ. ನಾನಾಗ ಏಳನೆಯ ತರಗತಿಯಲ್ಲಿದ್ದೆ. ಬಸ್ಸುಗಳು ತೀರಾ ಕಡಿಮೆಯಿದ್ದ ಆ ಕಾಲದಲ್ಲೂ, ಸುತ್ತಲ ಪರಿಸರದ 9-10 ಕಿ.ಮೀ ದೂರದ ಹಳ್ಳಿಗಳಿಂದಲೂ ಮಕ್ಕಳು ಬರುತ್ತಿದ್ದರು. ಬಹಳ ದೂರದ ಊರಿನ ಮಕ್ಕಳಿಗಾಗಿ ಹಾಸ್ಟೆಲ್ ಕೂಡಾ ಇತ್ತು.

ಶಾಲೆಗೆ ಬರುವ ಮಕ್ಕಳು ನಿತ್ಯ ತಮ್ಮ ಬುತ್ತಿಯನ್ನು ಹಾಸ್ಟೆಲ್ಲಿನ ದೊಡ್ಡ ವೆರಾಂಡದಲ್ಲಿ ಇಟ್ಟು, ಅಲ್ಲೇ ಊಟ ಮಾಡುವ ವ್ಯವಸ್ಥೆಯಿತ್ತು. ಒಂದು ದಿನ ನಾನು ಮಧ್ಯಾಹ್ನದ ಬುತ್ತಿಯೂಟ ಮುಗಿಸಿ ಕ್ಲಾಸಿಗೆ ಬಂದು, ಬೆಳಿಗ್ಗೆ ಅರ್ಧ ಮುಗಿಸಿದ್ದ ಚಿತ್ರವನ್ನು ಪೂರ್ಣಗೊಳಿಸುತ್ತಿದ್ದಾಗ, ನಮ್ಮ ಕ್ಲಾಸ್ ಲೀಡರ್ ಲೀಟಾ ಕೂಡಲೇ ಬರಬೇಕೆಂದು ಹೇಳಿಕಳುಹಿಸಿದಳು. ನಾನು ಬಹಳ ಸಿಡುಕಿನಿಂದಲೇ ಹಾಸ್ಟೆಲಿಗೆ ಹೋದಾಗ, ಎಂಟನೆಯ ತರಗತಿಯ ಜಯಂತಿ ಅಳುತ್ತಿದ್ದಳು. ಹಲವರು ಆಕೆಯನ್ನು ಸುತ್ತುಗಟ್ಟಿ ಸಮಾಧಾನ ಮಾಡುತ್ತಿದ್ದರು. ಅವಳು ಅಳುವುದಕ್ಕೂ, ನನ್ನನ್ನು ಬರ ಹೇಳಿದ್ದಕ್ಕೂ ಕಾರಣವೇನೆಂದು ತಿಳಿಯದೆ ಮಿಕಿ ಮಿಕಿ ನೋಡುತ್ತಿದ್ದೆ. ''ನನ್ನ ಬುತ್ತಿಯನ್ನು ಅವಳೇ ಉಂಡಿರಬೇಕು'' ಎಂದು ನನ್ನತ್ತ ಬೆರಳು ತೋರಿಸಿ ಜಯಂತಿ ಹೇಳಿದಾಗ, ನನಗೆ ನಿಂತ ನೆಲವೇ ಕುಸಿದಂತಾಯಿತು. ಒಂದೇ ಗಾತ್ರದ, ಒಂದೇ ಆಕಾರದ ಬುತ್ತಿಗಳೆರಡೂ ಪಕ್ಕದಲ್ಲಿದ್ದವು. ದುರದೃಷ್ಟಕ್ಕೆ ಅಂದು ಇಬ್ಬರ ಬುತ್ತಿಯಲ್ಲೂ ಬೆಂಡೆಕಾಯಿ ಪಲ್ಯ.

ಜಯಂತಿ ಅಳುವ ದೃಶ್ಯ ಕಂಡರೆ, ನಾನು ಎರಡು ಬುತ್ತಿಗಳ ಊಟವನ್ನು ಗುಳುಂ ಮಾಡಿದ ಅಪರಾಧ ಕೈಗೊಂಡಂತಿತ್ತು. ನಾನು, ''ತಪ್ಪಾಯಿತು, ತಿಳಿಯದೆ ಹಾಗೆ ಮಾಡಿದೆ'' ಎಂದು ಬೇಡಿಕೊಂಡೆ. ಆದರೆ ಆಕೆ ಮಾತ್ರ ನನ್ನ ಬುತ್ತಿಯನ್ನು ಮುಟ್ಟಲೂ ಹೇಸಿದಂತೆ ಕಂಡಿತು. ಉಳಿದ ಮಕ್ಕಳು ಎಷ್ಟು ಒತ್ತಾಯ ಮಾಡಿದರೂ ಜಯಂತಿ ನನ್ನ ಬುತ್ತಿಯ ಊಟ ಮಾಡಲೇ ಇಲ್ಲ. ಬದಲಾಗಿ, ನಮ್ಮ ಮನೆಯಲ್ಲಿ ನೀರೂ ಮುಟ್ಟದ ನಿಮ್ಮ ಮನೆಯೂಟವನ್ನು ನಾನೇಕೆ ತಿನ್ನಬೇಕು ಎಂದು ಆ ಅನ್ನವನೆಲ್ಲಾ ತೆಂಗಿನ ಮರದ ಬುಡಕ್ಕೆ ಬಿಸಾಡಿಬಿಟ್ಟಳು.

ನನ್ನ ಹೊಟ್ಟೆಯೊಳಗೆ ಹೋದ ಅನ್ನ ನನ್ನ ತಪ್ಪನ್ನು ಚೀರಿ ಚೀರಿ ಹೇಳಿದಂತಾಯಿತು. ಅಂದೇ ಕೊನೆ. ಆ ಶಾಲೆಯಲ್ಲಿ ನನ್ನ ಶಿಕ್ಷಣವನ್ನು ಪೂರೈಸುವವರೆಗೂ ನಾನು ಮತ್ತೆ ಬುತ್ತಿ ಒಯ್ಯಲಿಲ್ಲ. ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ ವಾಚನಾಲಯ ಮತ್ತು ಪುಸ್ತಕ ಭಂಡಾರಗಳು ನನ್ನ ಹಸಿವನ್ನು ತಣಿಸುವ ತಾಣಗಳಾದವು. ಹೀಗೆ ಜಯಂತಿ ನನ್ನ ಪುಸ್ತಕದ ಹುಚ್ಚಿಗೆ ಪ್ರೇರಕಳಾದಳು.



ಪುಸ್ತಕದ ಮಾತು ಹಾಗಿರಲಿ, ನನ್ನ ತಪ್ಪಿನ ಈ ಪುಟ್ಟ ಕಿಂಡಿಯಿಂದ ಜಾತಿ ಭೇದದ ನರಕ ದರ್ಶನ ನನಗಾಯಿತು. ಅದು ನನ್ನ ಜೀವನ ದೃಷ್ಟಿಯನ್ನೇ ಬದಲಿಸಿಬಿಟ್ಟಿತು.

ಕುಡುಪು — ಬಿ. ಎಂ. ರೋಹಿಣಿ

ಲಘು ಕತೆ



ಹಾ.ಮ. ಕನಕ

# ರಿಹರ್ಸಲ್

ಅವತ್ತು ರಿಹರ್ಸಲ್ ಮುಗಿಬೇಕಾದ್ದೇ ಎಂಟೂವರೆ ಆಗಿತ್ತು. ಲತಾ ಮೊದಲೇ ಶಮಾಜಿಯವರಲ್ಲಿ ಹೇಳಿದ್ದಳು, "ನನಗಿವತ್ತು ಸ್ವಲ್ಪ ಬೇಗ ಹೋಗಬೇಕು. ಬಿಡಲಿಕ್ಕೆ ಆದೀತಾ? ನಾನಾವತಿಯಲ್ಲಿ ಆಕ್ಸಿಡೆಂಟ್ ಆಗಿ ಅಡ್ಮಿಟ್ ಆಗಿರುವ ತನ್ನ ಗುರ್ತದವರೊಬ್ಬರ ಮಗಳನ್ನು ನೋಡಲು ಹೋಗಬೇಕು. ವಿಸಿಟಿಂಗ್ ಸಮಯ ಸಂಜೆ 5.30 ಯಿಂದ 7.30 ವರೆಗೆ ಮಾತ್ರ.." ಶಮಾಜಿ, 'ಠೀಕ್ ಹೈ, ಠಿಕ್ ಹೈ' ಅಂತ ತಮ್ಮ ದಪ್ಪ ದಪ್ಪ ಕೈಗಳನ್ನು ಬೀಸುತ್ತಾ ಹೇಳಿದ್ದರು. ನಂತರ ಅವರಿಗೆ ಅದರ ನೆನಪೇ ಆಗಿರಲಿಲ್ಲ. ಎರಡು, ಮೂರು ಬಾರಿ ಲತಾ, ರಿಹರ್ಸಲ್ ನಡುನಡುವೆ ಅವರತ್ತ ನೋಡಿದ್ದರೂ, ಅವರು ತಕ್ಷಣ ದೃಷ್ಟಿ ಬೇರೆಡೆಗೆ ತಿರುಗಿಸಿಬಿಡುತ್ತಿದ್ದರು. ಅವಳಿಗೆ ಆಗ ಖಂಡಿತವಾಗಿತ್ತು, ಇವರು ಇವತ್ತು ಬೇಗ ಹೋಗಲು ಬಿಡುವುದಿಲ್ಲ ಎಂದು.

ಎಂದಿನಂತೆ ರಿಹರ್ಸಲ್ ಎಂಟೂವರೆಗೆ ಮುಗಿಯಿತು. ಲತಾಳಿಗೆ ತುಂಬಾ ಬೇಜಾರಾಗಿತ್ತು. ಅವರಿಗೆ ಕೇಳಲಿ ಅಂತಲೇ, ಜೋರಾಗಿ, ಪಕ್ಕದಲ್ಲಿ ಕೂತವಳ ಹತ್ತಿರ ಕೇಳಿದಳು, "ಎಂಟೂವರೆ ಆಯಿತು. ಈಗ ನಾನಾವತಿ ವಿಸಿಟಿಂಗ್ ಅವರ್ ಮುಗಿದಿರಬೇಕು ಅಲ್ವಾ? ಇನ್ನು ನಾಳೇನೇ ಆಯ್ತು."



ಆಗಷ್ಟೇ ಎಚ್ಚೆತ್ತವಳಂತೆ ಶಮಾಜಿ, "ಅರೆ, ಕ್ಷಮಿಸಿ, ನಿಮಗೆ ಆಸ್ಪತ್ರೆಗೆ ಹೋಗ್ಲಿಕಿತ್ತಲ್ವಾ? ನಂಗೆ ರಿಹರ್ಸಲ್ ನಡುವೆ ನೆನಪೇ ಆಗಿಲ್ಲ. ಈಗೇನು ಮಾಡುತ್ತೀರಿ?" ಎನ್ನುತ್ತಾ ತನ್ನ ಹತ್ತು ತೊಲ ತೂಕದ ಮಂಗಲಸೂತ್ರವನ್ನು



ಕೈಗಳಿಂದ ಸವರತೊಡಗಿದಳು. ''ಈಗ ಕೂಡಾ ಹೋಗ ಬಹುದು. ಐದು ರೂಪಾಯಿಯ ಪಾಸ್ ಮಾಡಬೇಕಾ ಗುತ್ತೆ.'' ಮತ್ತೆ ಯಾರತ್ತಲೂ ನೋಡದೇ, 'ಅಚ್ಛಾ' ಎನ್ನುತ್ತಾ ಎಲ್ಲರಿಗೂ ಗುಡ್‌ನೈಟ್ ಹೇಳಿ ಅಲ್ಲಿಂದ ಬೇಗ ಬೇಗ ಹೊರಬಿದ್ದಳು.

ಸುರೇಖಾ ಭಾಭಿಯ ಮಗಳು ರೇಶ್ಮ, ತನ್ನ ಬಾಯ್‌ಫ್ರೆಂಡ್ ಜೊತೆ ತಿರುಗಾಡ್ಲಿಕ್ಕೆ ಅವನ ಬೈಕ್‌ನಲ್ಲಿ ಹೋಗಿದ್ಲಂತೆ. ಜುಹೂ ಹತ್ರ, 'ನ್ಯಾಚುರಲ್ ಐಸ್‌ಕ್ರೀಂ ಪಾರ್ಲರ್' ಎದುರು ರಿಕ್ಷಕ್ಕೆ ಬೈಕ್ ಢಿಕ್ಕಿ ಹೊಡೆದು, ಹಿಂದೆ ಕೂತಿದ್ದ ಇವಳು, ಎರಡು ಪಲ್ಟಿ ಹೊಡೆದು ರಸ್ತೆಯ ಎಡಬದಿಗೆ ಬಿದ್ದಿದ್ಲಂತೆ. ಬಿದ್ದ ತಕ್ಷಣ ರೇಶ್ಮಾಗೆ ಪ್ರಜ್ಞೆ ತಪ್ಪಿತ್ತು. ಈಗ ಅವ್ಳಿಗೆ ಆ್ಯಕ್ಸಿಡೆಂಟ್ ವಿಷಯ ಏನೂ ನೆನಪಿಲ್ಲವಂತೆ... ಹೀಗೆಲ್ಲಾ ರಿಹರ್ಸಲ್‌ನಲ್ಲಿ ಎಲ್ಲಾ ಹುಡುಗಿಯರು ಗುಸುಗುಸು ಮಾಡ್ತಾ ಇದ್ದರು. ಅನಿತಾ ಹೇಳ್ತಿದ್ದಳು, ''ನೋಡು ರೇಶ್ಮ ಇನ್ನೂ ಒಂಭತ್ತನೇ ಕ್ಲಾಸಿನಲ್ಲಿ ಕಲಿತಾ ಇದ್ದಾಳೆ. ಆಗ್ಲೇ ಅವಳಿಗೆ ಬಾಯ್‌ಫ್ರೆಂಡ್.'' ಉದ್ದುದ್ದ ಉಗುರುಗಳನ್ನು ಬೆಳಸಿಕೊಂಡು, ಟೈಟ್‌ಪ್ಯಾಂಟ್, ಟೈಟ್ ಟಾಪ್ ಹಾಕಿ ತನ್ನ ಅಗಾಧ ದೇಹ ಪ್ರದರ್ಶನ ಮಾಡುವ ಕುಲದೀಪ ಹೇಳಿದಳು, ''ಅದರಲ್ಲಿ ಏನಿದೆ. ಈಗ ಅದೆಲ್ಲಾ ತುಂಬಾ ಕಾಮನ್.''

''ಯಾರು ಹೇಳಿದ್ರು ನಿಮ್ಗೆ? ರೇಶ್ಮ ತನ್ನ ಬಾಯ್ ಫ್ರೆಂಡ್ ಜೊತೆ ಹೋಗಿದ್ಲು ಅಂತ?'', ಆರೋಪ ದಂತಿರುವ ಮಾತಿನಿಂದ ಲತಾ, ಕಸಿವಿಸಿಗೊಂಡಳಾದರೂ,



ತನ್ನ ನಿಂತ ಭಂಗಿಯ ಆಕರ್ಷಕತೆ ಎಲ್ಲಿಯೂ ಕಮ್ಮಿಯಾಗದಂತೆ ಕಾಪಾಡಿಗೊಳುತ್ತಾ, ಕಣ್ಣು ಪಿಳುಕಿಸುತ್ತಾ ಕೇಳಿದಳು.

''ಇನ್ಯಾರು, ಸುರೇಖಾಜಿ ಸ್ವತಃ ಹೇಳಿದ್ರು. ಮೊನ್ನೆ ನಾನು, ಕುಲದೀಪ್ ನೋಡ್ಲಿಕ್ಕೆ ಹೋಗಿದ್ವಲ್ವ, ನಾನಾವತಿಗೆ. ಅವ್ರು ಅದೊಂದು ವಿಶೇಷ ಸಂಗ್ತಿನೇ ಅಲ್ಲ ಅನ್ನೋ ಹಾಗೆ ಹೇಳಿದ್ರು. ಚಲೋ, ಚಲೋ. ನಮಗೇನಾಗ್ಬೇಕು. ನಾವು ಪ್ರ್ಯಾಕ್ಟೀಸ್ ಮಾಡೋಣ'' ಎನ್ನುತ್ತ ಬಗ್ಗಿ ಕಾಲಿಗೆ ಗೆಜ್ಜೆ ಕಟ್ಟತೊಡಗಿದಳು.

ಸದಾ ಪ್ರ್ಯಾಕ್ಟೀಸ್‌ಗೆ ಹಿಂದೆಬೀಳುವ ಕುಲದೀಪ್, ''ಇದೆಲ್ಲಾ ನಮ್ಗೆ, ಮಿಡಲ್ ಕ್ಲಾಸಿನವ್ರಿಗೆ ವಿಶೇಷ ಅಷ್ಟೆ. ಇವ್ರಿಗೆಲ್ಲಾ ಅಲ್ಲ'' ಎನ್ನುತ್ತಾ ಪರಪರ ತನ್ನ ಕಾಲು ತುರಿಸಿಕೊಳ್ಳ ತೊಡಗಿದಳು.

ನೋಡಲು ಇಷ್ಟು ಸುಸಂಸ್ಕೃತಳಂತೆ ಕಾಣುವ, ತನ್ನ ಬಾಹ್ಯಾಲಂಕಾರಕ್ಕೆ ಇಷ್ಟು ಸಮಯ ಹಾಕುವ ಕುಲದೀಪ್, ಎಷ್ಟೊತ್ತಿಗೂ ಕೆಟ್ಟದಾಗಿ ಮೈ ಕೈ ತುರಿಸಿಕೊಳ್ಳುವುದನ್ನು ನೋಡುವಾಗ ಲತಾಳಿಗೆ ಯಾವಾಗಲೂ ಅಸಹ್ಯವಾಗುತ್ತಿತ್ತು. ಅತ್ತ ನೋಡಲಿಕ್ಕಾಗದೇ ಮುಖ ತಿರುಗಿಸಿದಳು. ಕುಲದೀಪಳಿಗೆ ಉತ್ತರವಾಗಿ ಅನಿತಾ ಹೇಳ್ತಾ ಇದ್ಲು, ''ಇದು ಮಿಡಲ್ ಕ್ಲಾಸ್, ಅಪ್ಪರ್ ಕ್ಲಾಸ್ ಅಂತ ಏನೂ ಅಲ್ಲ. ದಿಸ್ ಈಸ್ ಬಾಂಬೆ ಡಿಯರ್. ನಮ್ದೆಲ್ಲಾ ಸ್ಮಾಲ್ ಟೌನ್ ಮೆಂಟಾಲಿಟಿ. ಇಲ್ಲಿ ಹುಡುಗೀರಿಗೆ ಬದುಕು ಬರೀ ಎಂಜಾಯ್ ಮಾಡೋದಕ್ಕೆ. ಕಾಲೇಜಿಗೆ ಬರೋದೇ ಅವ್ರು ಫ್ಲರ್ಟ್ ಮಾಡೋಕೆ. ಅವ್ರಿಗೆ ಬೇರೆ ಏನೂ ಆಕಾಂಕ್ಷೆ, ಆ್ಯಂಬಿಷನ್ ಇಲ್ಲ. ಕ್ಲಾಸುಗಳನ್ನು ಅಟೆಂಡ್ ಮಾಡಲ್ಲ. ಟ್ಯೂಷನ್‌ಗೆ ಹೋಗ್ತಾರೆ ಹೇಗೋ ಪರೀಕ್ಷೆನಲ್ಲಿ ಪಾಸ್ ಆಗ್ತಾರೆ. ಅವರ ಬದುಕಲ್ಲಿ ಕೊನೆ ಆಸೆ ಅಂದ್ರೆ, ಎಲ್ಲಾ ಮುಗಿದ ನಂತರ ಒಂದು ಮದುವೆ. ಅವನು ಹೇಗೇ ಇರಬಹುದು, ಹಣ ಇದ್ರೆ ಸಾಕು. ಅವರಿಗೆ ಭದ್ರತೆ ಬೇಕು ಬದುಕಿನಲ್ಲಿ ಅಷ್ಟೇ. ಅದ್ಕೇ...'' ಅನಿತಾ, ಭಾಷಣದ ಶೈಲಿಯಲ್ಲಿ, ಹಾವಭಾವಗಳ ಸಹಿತ, ಎದ್ದುನಿಂತು ಮಾತನಾಡತೊಡಗಿದ್ದಳು. ಒಂದು ಗೆಜ್ಜೆ ಮಾತ್ರ ಕಾಲಿಗೆ ಕಟ್ಟಿಕೊಂಡು, ಇನ್ನೊಂದನ್ನು ಇನ್ನೂ ಕೈಯಲ್ಲಿ ಹಿಡಿದುಕೊಂಡಿದ್ದರಿಂದ, ಅವಳ ಮಾತಿನ ಮಧ್ಯ ಮಧ್ಯ ಗಜ್ಜೆ ತನ್ನ ಶ್ರುತಿ ಸೇರಿಸುತ್ತಿತ್ತು.

'ಬಾಂಬೆ ಹುಡುಗಿಯರೇ ಹೀಗೆ...' ಅಂತ ಹೇಳಿದ್ದು, ಯಾಕೋ, ಅಲ್ಲಿಯೇ ಹುಟ್ಟಿ ಬೆಳೆದು, ಮದುವೆ ಆಗಿ, ಈಗ ಎರಡು ಮಕ್ಕಳಿರುವ ತೃಪ್ತಿಗೆ ಸರಿ ಅನಿಸಲಿಲ್ಲ. ಅವಳು ಅನಿತಾಳ ಮಾತನ್ನು ಅರ್ಧಕ್ಕೆ ತುಂಡರಿಸಿ, ''ಇಲ್ಲ, ನಾನು ಒಪ್ಪೋಲ್ಲ ಎನ್ನುತ್ತಾ, ಕೂತಲ್ಲೇ ತನ್ನ ಕೈಗಳನ್ನು ಚಾಚಿ, ಶಮಾಜಿಯವರ ರೀತಿಯಲ್ಲಿ ಎಲ್ಲರಿಗೂ ಸುಮ್ಮನಿರುವಂತೆ ಸೂಚಿಸಿ, ಮತ್ತೊಮ್ಮೆ ಎದ್ದು, ತನ್ನ ಮೊಣಕಾಲುಗಳ ಮೇಲೆ ಕೂತು, ''ಈಗ ನನ್ನನ್ನೇ ತಗೆದುಕೊಳ್ಳಿ. ನಾನು ಬಾಂಬೆಯವಳು. ಇಲ್ಲೇ ಹುಟ್ಟಿ ಬೆಳೆದವಳು. ನಾನು ಮದುವೆ ಆಗುವಲ್ಲಿವರೆಗೆ ಒಬ್ಬ ಹುಡುಗನ

ಹತ್ತಿರ ಮಾತನಾಡಿ ತಿಳಿದಿರಲಿಲ್ಲ. ಇವತ್ತು ನನ್ನಲ್ಲಿ ಒಂದಷ್ಟು ಧೈರ್ಯ ಇದೆ ಎಂದಾದರೆ ಅದಕ್ಕೆ ನನ್ನ ಗಂಡನೇ ಕಾರಣ. ನನಗನ್ನಿಸುತ್ತೆ ಈ ಜನರೇಶನ್ನೇ ಹಾಗೇ ಅಂತ. ಜವಾಬ್ದಾರಿನೇ ಇಲ್ಲ ಅದಕ್ಕೆ. ಉದಾಹರಣೆಗೆ ನಮಗೆ ಎರಡು ಫ್ಯಾಕ್ಟರಿ ಇದೆ. ನಾನು ಮನೆನಲ್ಲಿ ಕೆಲಸ ಮಾಡ್ಕೊಂಡು, ಫ್ಯಾಕ್ಟರಿನಲ್ಲಿ ಓಡಾಡ್ಕೊಂಡು ಬರ್ತೀನಿ. ಅದೇ ನನ್ನ ನಾದಿನಿ, ಏನೂ ಮಾಡಲ್ಲ. ಸಹನೆ ಅನ್ನೋದಂತೂ ಇಲ್ವೇ ಇಲ್ಲ. ಮೊನ್ನೆ ಸಿನ್ಹಾ ಭಾಯಿ ನಮ್ಮ ಮನೆಗೆ ಊಟಕ್ಕೆ ಬಂದಿದ್ರು. ಅದಕ್ಕೆ ಮೈದುನನ್ನ ಊಟಕ್ಕೆ ನಮ್ಮ ಜೊತೆ ನಿಲ್ಲಿಸಿದ್ದೆ. ಹಾಗಾಗಿ ಅವನು ತನ್ನ ಮನೆ ತಲುಪೋದು ಅರ್ಧಗಂಟೆ ತಡ ಆಯ್ತು. ಆ ಅರ್ಧಗಂಟೆನಲ್ಲಿ ಅವ್ಳು ಇಪ್ಪತ್ತು ಸರ್ತಿ ಫೋನ್ ಮಾಡಿದ್ಲು ಗೊತ್ತಾ? ಅವಳು ಈಗಿನ ಜನರೇಷನ್...'' ಎನ್ನುತ್ತಾ ತನ್ನ ದೊಡ್ಡದಾದ ಮೂಗನ್ನು ಉಜ್ಜಿಕೊಳ್ಳತೊಡಗಿದಳು.

ಒಟ್ಟಿಗೆ ಎಲ್ಲರೂ, ''ಇಪ್ಪತ್ತು ಸರ್ತಿ!'', ''ಹ್ಯಾಗೆ ಗೊತ್ತು?'', ''ನೀನೇನು ಲೆಕ್ಕ ಇಟ್ಟಿದ್ಯಾ?'', ''ಹೌ ಮೀನ್ ಆಫ್ ಯೂ'', ''ಅದರಲ್ಲೇನು ತಪ್ಪು?'' ಅಂತ ಅವಳನ್ನು ದಬಾಯಿಸಲು ತೊಡಗಿದರು. ಎರಡು ಕಾಲಿಗೂ ಗೆಜ್ಜೆ ಕಟ್ಟಿಕೊಂಡು ಇನ್ನೂ ಅದೇ ಭಂಗಿಯಲ್ಲಿ ನಿಂತಿದ್ದ, ಸ್ವಲ್ಪ ಭಂಗಿತಳೂ ಆಗಿದ್ದ, ಚೂಟಿ ಅನಿತಾ ಕೇಳಿದಳು, ''ಅವಳು ನಿನಗಿಂತ ಎಷ್ಟು ಚಿಕ್ಕವಳು?''

ತೃಪ್ತಿ ಹೇಳಿದಳು, ''ಎರಡು ವರ್ಷ.''

ಎಲ್ಲರೂ ಉಕ್ಕಿಬರುವ ನಗುವನ್ನು ತಡೆದುಕೊಳ್ಳುತ್ತಿದ್ದರು.

ಅನಿತಾ ಮತ್ತೆ ಉತ್ಸಾಹ ತುಂಬಿ, ಒಂದು ಬಾರಿ ಕಾಲುಕುಟ್ಟಿ, ಕೋಣೆಯ ತುಂಬಾ ಗೆಜ್ಜೆಯ ನಾದ ತುಂಬಿಸಿ, ಕೈಯೆರಡನ್ನು ಎದೆಯ ನೇರಕ್ಕೆ



ತಂದುಕೊಂಡು, ಕಥಕ್‌ನ ಪ್ರಾರಂಭದ ಭಂಗಿಯಲ್ಲಿ ನಿಂತಳು. ಮತ್ತೆ ತೃಪ್ತಿಯತ್ತ ಬೆರಳು ಮಾಡುತ್ತಾ, ''ಹಾಗಾದರೆ ನಿನ್ಗಿಂತ ಎರಡು ವರ್ಷ ಚಿಕ್ಕವಳಾದ ನಿನ್ನ ದೇವ್ರಾನಿ ನೆಕ್ಸ್ಟ್ ಜನರೇಷನ್‌ನವಳಾ? ಅಂಥಾ ದಾದಾಗಿರಿ ಯಾಕೆ ನಿಂಗೆ?'' ಎಲ್ಲರೂ ಜೋರಾಗಿ ನಗತೊಡಗಿದ್ದರು. ತೃಪ್ತಿ ಅವಮಾನದಲ್ಲಿ ಹೂತು ಹೋಗಿದ್ದಳು.

ಲತಾ ಸುಮ್ಮನೆ ಕುಳಿತಿದ್ದಳು, ತನ್ನದೇ ಯಾವುದೋ ಆಲೋಚನೆಯಲ್ಲಿ. ದಿನಾ ಅನಿತಾ, ತೃಪ್ತಿಯರ ನಡುವಿನ ಒಂದಲ್ಲ ಒಂದು ಜಗಳ, ಕಚಪಚ ಕೇಳಿ ಕೇಳಿ ಸಾಕಾಗಿಹೋಗಿತ್ತು ಅವಳಿಗೆ. ಅನಿತಾ ಎಲ್ಲರಿಗೂ ಮೂರನೆಯ ಟುಕುಡಾ ಮಾಡಲು ಆರ್ಡರ್ ಮಾಡುತ್ತಿದ್ದಳು.





ಕನಕ ಹಾ.ಮ.

ಹೌದು, ನಾನೂ ನನ್ನ ಗಂಡನಿಗೆ ವಿಷ ಹಾಕಿದ್ದೆ. 15-20 ವರ್ಷಗಳಿಂದ ಪ್ರತಿದಿನ ನನ್ನ ಗಂಡನಿಗೆ ವಿಷ ಹಾಕುತ್ತಲೇ ಇದ್ದೆ. ನನಗೆ ಅದು ರೂಢಿಯಾಗಿಬಿಟ್ಟಿತ್ತು. ಇದನ್ನು ನೆನೆಸಿಕೊಂಡಾಗಲೆಲ್ಲ, ಬಟ್ಟಬಯಲಲ್ಲಿ ಒಬ್ಬಳೇ ಕುಳಿತು, ಅರ್ಧ ಗಂಟೆಯ ತನಕ ಹಾಗೆಯೇ ಕುಳಿತು ಉಚ್ಚೆ ಹೊಯ್ದಂತೆ; ಉಗುರುಬೆಚ್ಚಗಿನ ನೀರಲ್ಲಿ ತಾಸುಗಟ್ಟಲೆ ಜಳಕ ಮಾಡಿದಂತೆ, ನನ್ನ ಮಗಳನ್ನು ಹಡೆಯುವಾಗ ಅನುಭವಿಸಿದ ಸುಖದಂತೆ ಮನಸ್ಸು ತೊಡೆಯ ಕೆಳಗಿನ ಸ್ಪಂಜಾಗಿ ಪುಟಿಯುತ್ತದೆ.

ಈಗ, ಇಷ್ಟು ವರ್ಷಗಳ ನಂತರ, ಸುಮಾರು 15-20 ವರ್ಷಗಳ ನಂತರ, ನನ್ನನ್ನು, ನನ್ನ ಮನಸ್ಸನ್ನು, ನಾನು ಮಾಡಿದ್ದನ್ನು, ನನ್ನ ಮೈ-ಮನಸ್ಸು ಆನಂದದ ಬುಗ್ಗೆಯಾಗಿ ಅನುವಾದಗೊಂಡದ್ದನ್ನು ಈಗ ಪ್ರಾಮಾಣಿಕವಾಗಿ, ನಿರ್ಲಿಪ್ತವಾಗಿ, ಯಾವ ವ್ಯಾಮೋಹವೂ ಇಲ್ಲದೆ ವಿಶ್ಲೇಷಿಸಿ, ವಿಂಗಡಿಸಿ, ಅರ್ಥವಿಸಿಕೊಳ್ಳುವ ವಯಸ್ಸು, ಮನಃಸ್ಥಿತಿ, ಬುದ್ಧಿಯ ಸ್ತಿಮಿತ ನನಗಿರುವುದರಿಂದ ಈಗ ಯಾವುದೂ ನನಗೆ ತಪ್ಪೆನಿಸುವುದಿಲ್ಲ, ಅದಕ್ಕಾಗಿಯೇ ನಾನು ಸ್ಪಷ್ಟವಾಗಿ ಒಪ್ಪಿಕೊಳ್ಳುತ್ತಿರುವೆ, ನನ್ನ ಗಂಡನಿಗೆ ವಿಷ ಹಾಕಿದ್ದೆ ಎಂದು. ಆದರೆ ಈ ಒಪ್ಪಿಗೆಯೂ ಒಂದು ರೀತಿಯ ಆತ್ಮವಂಚನೆಯೇ ಆಗಿರಬಾರದೇಕೆ? ಹಾಗೆ ನೋಡಿದರೆ, ನಮ್ಮ ಪ್ರತಿ ಉಸಿರಿಗೂ ಇರುವ ನಿಜವಾದ ಅರ್ಥ ನಮಗೇ ತಿಳಿದಿಲ್ಲ. ಆದರೂ ನಾವು ಏನೇನೋ ಅರ್ಥಗಳನ್ನು ಮೂಡಿಸಿಕೊಳ್ಳುವುದಿಲ್ಲವೆ? ಮಾಡಿಕೊಳ್ಳುವುದಿಲ್ಲವೆ? ಈ ಜೀವನವೇ ಒಂದು ಮೋಸ.

ಆದರೆ ನನ್ನ ಗಂಡನಿಗೆ ನಾನು ವಿಷ ಹಾಕಿದ್ದು ಮೋಸವಲ್ಲ. ನನ್ನ ತೃಪ್ತಿಗೆ, ಸುಖಕ್ಕೆ, ಸಂತೋಷಕ್ಕೆ, ಸ್ವಾರ್ಥಕ್ಕೆ ನಾನು ವಿಷ ಹಾಕಿದ್ದೆ. ನಾವು ನಮಗಾಗಿ ಬದುಕಬೇಕಲ್ಲದೆ ಇನ್ನೊಬ್ಬರಿಗಾಗಿ ಅಲ್ಲ. ಇನ್ನೊಬ್ಬರಿಗಾಗಿ ಬದುಕಲೇಬಾರದು ಎಂದು ನಾನು ಹೇಳುವುದಿಲ್ಲ. ಆದರೆ ನಮಗಾಗಿ ಬದುಕಿದ ನಂತರ, ಇನ್ನೊಬ್ಬರಿಗಾಗಿ ಹೇಗೆ ಬದುಕಬೇಕೆಂಬುದು ನಮಗೆ ಅರ್ಥವಾಗುತ್ತದೆ. ಅದಕ್ಕೆಂದೇ ನನ್ನ ಗಂಡನಿಗೆ ವಿಷ ಹಾಕಿದ್ದೆ.

ಇಂದು ಸರೋಜಳ ಪತ್ರ ಬಂದಿದೆ. ಅವಳ ನಾದಿನಿ ತನ್ನ ಇನ್ನೊಬ್ಬ ಮೈದುನನಿಗೆ ವಿಷ ಹಾಕಿದ್ದಳಂತೆ. ಅವನನ್ನು ಆಸ್ಪತ್ರೆಗೆ ಒಯ್ದು ಉಪಚಾರ ಮಾಡಿಸಿದರಂತೆ. ಈಗ ಗುಣವಾಗುತ್ತಿದ್ದಾನಂತೆ. ಅವಳನ್ನು ಪೊಲೀಸರು ಬಂಧಿಸಿದ್ದಾರಂತೆ. ಅವಳ ಬಗ್ಗೆ ತನಗಿರುವ ಸಿಟ್ಟನ್ನೆಲ್ಲ ಸರೋಜ ತೋಡಿಕೊಂಡಿದ್ದಾಳೆ. ಹುಚ್ಚಿ, ಇವಳೇಕೆ ಸಿಟ್ಟಾಗಬೇಕು? ತನ್ನ ನಾದಿನಿಯ ದೃಷ್ಟಿಯಿಂದ, ತನಗೆ ಸಂಬಂಧಿಸಿರದ ಪ್ರಸಂಗವನ್ನು ನೋಡುವ ಹಕ್ಕಾದರೂ ಇವಳಿಗೆಲ್ಲಿದೆ? ಇದು ಅಧಿಕಪ್ರಸಂಗವಲ್ಲವೆ? ನಾವು ಪಾಲುಗೊಂಡು, ಆ ಪ್ರಸಂಗ ನಮ್ಮದಾದಾಗ ಮಾತ್ರ ಅದು, ನಮ್ಮ ಮನಸ್ಸಿಗೆ, ಹೃದಯಕ್ಕೆ ಹತ್ತಿದ ಚರ್ಮದಂತೆ ಅಂಟಿ, ಕಿತ್ತು, ನೋವಾಗಿ, ಚುಚ್ಚಿದಾಗ ಮಾತ್ರ ಅದರ ಸತ್ಯ ನಮಗೆ ರಕ್ತವಾಗಿ, ಉಸಿರಾಗಿ, ಬದುಕಿನ ಅರ್ಥವಂತಿಕೆಯಾಗಿ ಮಿಡಿಯುತ್ತದೆ. ಇನ್ನೂ ಹುಡುಗಿ, ಇವಳಿಗೆ ವಿಷ ಕಾರುವುದೂ ಗೊತ್ತಿಲ್ಲ, ವಿಷ ಹಾಕುವುದೂ ಗೊತ್ತಿಲ್ಲ. ನಾನು ನನ್ನ ಗಂಡನಿಗೆ ವಿಷ ಹಾಕಿದ್ದೆ.

ನನ್ನ ಗಂಡ ಮನೋಹರನಿಗಿಂತ ಒಂದೆರಡು ವರ್ಷ ಚಿಕ್ಕವ. ಮನೆಯ ವ್ಯವಹಾರವನ್ನೆಲ್ಲ ಮನೋಹರ ನೋಡುತ್ತಿದ್ದ. ವ್ಯಾಪಾರದ ಜವಾಬ್ದಾರಿಯೆಲ್ಲ ನನ್ನ ಗಂಡನದು. ದಲಾಲಿ ಅಂಗಡಿಯೆಂದರೆ ನೂರಾ ಎಂಟು ಕೆಲಸಗಳು. ಹಗಲು-ರಾತ್ರಿ

ಕೆಲಸದ ಮೇಲೆ, ಆಳುಕಾಳುಗಳ ಮೇಲೆ, ಮಾಲಿನ ಮೇಲೆ ನಿಗಾ ಇಟ್ಟಿರಬೇಕು. ರಾತ್ರಿ ವಿಪರೀತ ದಣಿದು ಬಂದು, ಅಂಕಿಗಳನ್ನು, ಗೋಣಿಚೀಲಗಳ ನಿಟ್ಟುಗಳನ್ನು, ಕಾಳು ಹಸ ಮಾಡುವ ದೊಡ್ಡ ಜಾಳಿಗೆಗಳನ್ನು, ತಕ್ಕಡಿ-ಕಾಟಾಗಳನ್ನು, ಬೆಲ್ಲದ ಪೆಂಟಿಗಳನ್ನು ತಲೆತುಂಬ ತುಂಬಿಕೊಂಡು ಧುಸ್ಸೆಂದು ಬೀಳುವ ಗಂಡನನ್ನು, ನಾನಾಗಿಯೇ ನನ್ನ ಮೈಮೇಲೆ ಎಳೆದುಕೊಳ್ಳಬೇಕು. ಆದರೂ ನನ್ನ ಗಂಡನ ಮೈಕಟ್ಟು, ಅವನ ಶಕ್ತಿ, ಸಂಭೋಗದ ಉತ್ಸಾಹ ನೆನೆಸಿಕೊಂಡರ ಮೈ ಝುಂ ಅನ್ನುತ್ತದೆ. ತಾನಾಗಿಯೇ ನನ್ನನ್ನು ಅವನೆಂದೂ ಬರಸೆಳೆಯುತ್ತಿರಲಿಲ್ಲ. ನಾನು ಹೋದಾಗ ಮಾತ್ರ ಅವನು ನನ್ನನ್ನು ಎಂದೂ ಅತೃಪ್ತಗೊಳಿಸಲಿಲ್ಲ. ನಾನು ಬೇಡಿದ್ದನ್ನೆಲ್ಲ ತಂದ, ಕೊಟ್ಟ, ಮಾಡಿದ. ಬಹುಶಃ ಅದಕ್ಕಾಗಿಯೇ ಅವನಿಗೆ ವಿಷ ಹಾಕಿದೆ.

ಶ್ರವರು ಮನೆಯಲ್ಲಿ ಒಳ್ಳೆಯ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದು, ಸಾಕಷ್ಟು ಪುಸ್ತಕಗಳನ್ನು ಓದಿ, ತಲೆತುಂಬ ವಿಚಾರಗಳ ಸ್ವಾತಂತ್ರ್ಯವನ್ನು ತುಂಬಿಕೊಂಡು ಬಂದಿದ್ದ ನನಗೆ, ಈ ಗಂಡ ಬರೇ ಗುಂಡುಕಲ್ಲಿನಂತೆ ಕಂಡು ಮೊದಮೊದಲು ಸಿಟ್ಟು ಬಂದಿತ್ತು, ವ್ಯಥೆಯಾಗಿತ್ತು, ಆಶ್ಚರ್ಯವಾಗಿತ್ತು. ನಂತರ ಸಹಾನುಭೂತಿಯುಂಟಾಗಿತ್ತು. ಅವನ ಮತ್ತು ನನ್ನ ಮಾತಿನ ನಡುವೆ ಒಂದು ದೊಡ್ಡ ಕಂದರವೇ ಏರ್ಪಟ್ಟು ಸಂವಹನೆಯೇ ಕಷ್ಟಕರವಾಗುತ್ತಿತ್ತು. ನಾನಂತೂ ಅವನ ಕೂಡ ಮಾತಾಡುವುದನ್ನೇ ಕಡಿಮೆ ಮಾಡಿದ್ದೆ.

ಗಂಡ ಅಂದರೆ ಹಟ ಬೇಡವೆ? ಹೆಂಡತಿಯನ್ನು ಕಾಡಬೇಡವೆ? ಪ್ರತಿಯೊಂದಕ್ಕೂ ಹ್ಞೂಂಗುಟ್ಟಿದರೆ, ಬೇಡಿದನ್ನೆಲ್ಲ ಕೊಡಿಸಿದರೆ, ತೊಡಿಸಿದರೆ, ಜೀವನ ಎಷ್ಟು ಸರಳ, ಸಾದಾ, ಅರ್ಥಹೀನ, ಬೆಲೆಯಿಲ್ಲದ್ದು,



''ಅನಿಸಿದ್ದನ್ನು ಅನಿಸಬಾರದಾಗಿತ್ತು ಎಂದು ಹೇಳುವುದು ಅಥವಾ ಅನಿಸಿದರೆ ಅದಕ್ಕೆ ಪಶ್ಚಾತ್ತಾಪ ಪಡಬೇಕು ಎಂದು ಹೇಳುವುದು ಎಂಥ ಮೂರ್ಖತನ, ಹುಚ್ಚುತನ ಅಲ್ಲವೆ?'' ಹೆಣ್ಣೊಬ್ಬಳು ಹೀಗೆ ಯೋಚಿಸುತ್ತಿದ್ದಾಳೆಂದರೆ ಅದು ಖಂಡಿತ ಇತ್ತೀಚಿನ 'ಸ್ತ್ರೀ ವಾದಿ' ಕಾದಂಬರಿಯ ಸಾಲುಗಳು; ಬಹುಶಃ ಬರೆದಿರುವುದು ಲೇಖಕಿಯೇ ಎಂದು ಊಹಿಸುತ್ತೇವೆ. ಆದರೆ ಇದನ್ನು ಬರೆದವರು ಸಿದ್ದಲಿಂಗ ಪಟ್ಟಣಶೆಟ್ಟಿ, ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ. ಸಮಾನಸ್ಕಂಧನಲ್ಲದ ಪತಿಯ ಸಂಗ ಬೇಸರ ಹುಟ್ಟಿಸಿದಾಗ, ತನಗೆ ಎಲ್ಲ ವಿಧದಲ್ಲೂ ಯೋಗ್ಯನೆಂದುಕೊಳ್ಳುವ ಗಂಡನ ಅಣ್ಣನನ್ನು ಈಕೆ ಮೋಹಿಸುತ್ತಾಳೆ. ಪ್ರೀತಿಸುತ್ತಾಳೆ. ಆತನಿಂದ ಒಂದು ಮಗುವನ್ನೂ ಪಡೆಯುತ್ತಾಳೆ. ಹೆಣ್ಣಿನ ಜಾಗೃತ ಲೈಂಗಿಕತೆ ಮತ್ತು ಪಾತಿವ್ರತ್ಯ, ವೈಯಕ್ತಿಕ ಕಾಮನೆ ಮತ್ತು ಸಾಮಾಜಿಕ ನೀತಿ-ಇಂಥ ಧ್ರುವಗಳ ನಡುವೆ ಚುಂಬಕ ಗಾಳಿಯಂತೆ ಅಲೆ ಅಲೆಯಾಗಿ ಬೀಸುವ ಈ ಕಥೆ ದಟ್ಟವಾದ ದುರಂತ ಛಾಯೆಯನ್ನೂ ಹೊಂದಿದೆ. ಇಂಥ ಉತ್ಕೃಷ್ಟ ಕತೆಗಳನ್ನು ಬರೆದ ಪಟ್ಟಣಶೆಟ್ಟಿ ಮತ್ತೆ ಮೌನವಾಗಿಬಿಟ್ಟರೇಕೆ ಎನ್ನುವುದು ಒಂದು ಸೋಜಿಗ. ಮತ್ತೆ ಬರೆಯಲಿ ಎಂದು ಆಶಯ.

ಸಂಘರ್ಷರಹಿತವಾಗುತ್ತದೆಂದರೆ ಇಂಥವರಿಗೆ ವಿಷ ಹಾಕಬೇಕು. ನಾನು ಹಾಕಿದೆ. ಯಾರ ಬದುಕೂ ಇಷ್ಟು ಸರಳ ಫಾರ್ಮುಲಾ ಆಗಬಾರದಲ್ಲವೆ?

ಮನೋಹರನೂ ದುಡಿದು ಬರುತ್ತಿದ್ದ. ಖರೇ ಅಂದರೆ, ಅಂಗಡಿಯ ಮುಖ್ಯ ಜವಾಬ್ದಾರಿ ಅವನದೇ. ಆದರೂ ಅವನು ಅಂಗಡಿಯಿಂದ ಹೊರಗೆ ಬಂದರೆ ಮುಗಿಯಿತು, ಅವನ ಹೆಂಡತಿ, ಮನೆ, ನಾವೆಲ್ಲ ಅವನ ಕಾಳಜಿಯ ಪಾತ್ರಗಳಾಗುತ್ತಿದ್ದೆವು. ನನ್ನ ಹಿರಿಯ ಮಗನೆಂದರೆ ಅವನಿಗೆ ಬಹಳ ಪ್ರೀತಿ. ಪಾಪ, ಮನೋಹರನಿಗೆ ಕಡೆಗೂ ಮಕ್ಕಳಾಗಲೇ ಇಲ್ಲ.

ಇಡೀ ದಿನ ಮನೆಯಲ್ಲಿ ನಾನು, ಲಲಿತ. ಲಲಿತಳ ವಯಸ್ಸೂ ನನ್ನಷ್ಟೇ ಆಗಿದ್ದರೂ ತಾನೇ ಮನೆಯ ಯಜಮಾನಿಯಂತೆ ವರ್ತಿಸುತ್ತಿದ್ದಳು. ಎಷ್ಟಾದರೂ ದೊಡ್ಡವನ ಹೆಂಡತಿಯಲ್ಲವೇ? ತನಗೆ ಮಕ್ಕಳಾಗಲಿಲ್ಲವೆಂದು, ನನಗೆ ಮಗ ಹುಟ್ಟಿದಾಗ ಅವಳಿಗೆ ಅನಿಸತೊಡಗಿತು. ನನ್ನ ಎರಡನೆಯ ಮಗ ಹುಟ್ಟಿದಾಗಲಂತೂ, ಅವಳ ಈ ನೋವು ಬಹಳ ತೀವ್ರವಾಗಿತ್ತೆಂಬುದುದನ್ನು ನಾನು ಲಕ್ಷಿಸಿದ್ದೇನೆ. ಸ್ಪಷ್ಟವಾಗಿ ತನ್ನ ನೋವನ್ನು ನನ್ನೆದುರು ಹೇಳುತ್ತಿರಲಿಲ್ಲ. ತನ್ನ ತವರು ಮನೆಯವರು ಯಾರಾದರೂ ಬಂದಾಗ ಅವರಿಗೆ ಹೇಳುತ್ತಿದ್ದಳು. ಅವಳನ್ನು ಕೆಲವು ಡಾಕ್ಟರುಗಳ ಕಡೆಗೆ, ಗುಡಿಗಳಿಗೆ, ಸ್ವಾಮಿಗಳ ಹತ್ತಿರ ಕರೆದುಕೊಂಡು ಹೋಗಿ ಬರಲು ಮನೋಹರನು ರೊಕ್ಕ ಕೊಟ್ಟು ಕಳಿಸಿದ್ದ. ತನ್ನ ಹೆಂಡತಿಗೆ ಮಕ್ಕಳಾಗದ್ದಕ್ಕೆ ವ್ಯಥೆಯಾಗುತ್ತಿದೆಯೆಂದು ಸಹಜವಾಗಿಯೇ ನನ್ನ ಹತ್ತಿರ ಹೇಳುತ್ತಿದ್ದ. ಅವನ ನೇರ ವ್ಯವಹಾರ, ಸರಳತೆ, ಆತ್ಮೀಯತೆಗಳು ನನ್ನನ್ನು, ನನ್ನ ಸಿಟ್ಟನ್ನು, ಮತ್ಸರವನ್ನು ತೊಳೆದು ಬಿಡುತ್ತಿದ್ದವು. "ಈ ಮಕ್ಕಳೂ ನಿಮ್ಮ ಮಕ್ಕಳೇ ಅಲ್ಲವೇ?" ಎಂದು ನಾನು ಅನ್ನುತ್ತಿದ್ದೆ. ಅವನು "ಹೌದಲ್ಲ!" ಅಂದಾಗ, ಅವು ನಿಜವಾಗಿಯೂ ಅವನ ಮಕ್ಕಳಾಗಿದ್ದರೆ ಎಷ್ಟು ಚೊಲೋ ಆಗುತ್ತಿತ್ತು



ಅನಿಸಿ, ಒಂದು ಕ್ಷಣ ನನ್ನ ಮೈಯೆಲ್ಲ ರೆಫ್ರಿಜರೇಟರ್ ಆಗುತ್ತಿತ್ತು. ಅವನನ್ನು ಅಪ್ಪಿ, ಅವನ ಎರಡೂ, ದೊಡ್ಡ, ದಪ್ಪ ತುಟಿಗಳನ್ನು ಕಡಿದು ಕೊಂಡುಬಿಡಲೇ ಅನಿಸುತ್ತಿತ್ತು. ಹೀಗೆಲ್ಲ ಅನ್ನಿಸಬಾರದು, ನನ್ನ ಗಂಡನಿಗೆ ಇದು ದ್ರೋಹ ಮಾಡಿದಂತೆ, ಪತಿವ್ರತೆಯಾಗಿ ಇಂಥ ವಿಚಾರ ಮನಸ್ಸಿನಲ್ಲಿ ಸುಳಿಯಬಾರದು ಎಂಬ ಭಾವವೂ ಸುಳಿಯದಿರಲಿಲ್ಲ. ಹೈಸ್ಕೂಲಿನಲ್ಲಿ ಓದಿದ ಕಾದಂಬರಿಗಳು, ಅವ್ವ, ಅಮ್ಮ, ಹೇಳಿದ ಪುರಾಣ ಕಥೆಗಳು ನೆನಪಾಗುತ್ತಿದ್ದವು. ಸಾವಿತ್ರಿಯ ಆದರ್ಶದ ಯಮನ ಕೋಣ ಕಣ್ಣೆದುರು ಸುಳಿಯುತ್ತಿತ್ತು. ನಂತರ ಬಹಳ ಬೇಗನೆ ನಾನು ಚೇತರಿಸಿಕೊಂಡೆ. ನನ್ನ ಯೋಚನೆಗಳು ಈಗ ಇನ್ನೂ ಸ್ಪಷ್ಟವಾಗಿವೆ. ನನಗನ್ನಿಸಿದ್ದು ಪ್ರಾಮಾಣಿಕವಾಗಿತ್ತು. ಅನಿಸಿದ್ದನ್ನು ಅನಿಸಬಾರದಾಗಿತ್ತು ಎಂದು ಹೇಳುವುದು, ಅಥವಾ ಅನಿಸಿದರೆ ಅದಕ್ಕೆ ಪಶ್ಚಾತ್ತಾಪ ಪಡಬೇಕು ಎಂದು ಹೇಳುವುದು

ಎಂಥ ಮೂರ್ಖತನ, ಹುಚ್ಚತನ, ಅಲ್ಲವೆ? ನಮ್ಮ ಪುರಾಣಗಳು, ಹಳೆ ಕಥೆಗಳು ಆತ್ಮವಂಚನೆಯ, ಪರವಂಚನೆಯ ಪಿರಾಮಿಡ್ಡುಗಳು ಎಂದು ನನಗೆ ಈಗ ಖಾತ್ರಿಯಾಗಿದೆ. ಇದರಿಂದಾಗಿಯೇ ಇಂದು ಸ್ವತಂತ್ರವಾಗಿ ಯೋಚಿಸುವ, ನಂಬಿಕೆಯಿಂದ ಮಾತಾಡುವ, ಸ್ಪಷ್ಟವಾಗಿ ಅನಿಸಿದ್ದು ಒಪ್ಪಿ ಹೇಳುವ ಪ್ರವೃತ್ತಿ ಈ ಸಮಾಜದಲ್ಲಿ, ಈ ದೇಶದಲ್ಲಿ ಕಂಡುಬರುತ್ತಿಲ್ಲ ಎಂದು ನಾನು ಆಗಾಗ ಯೋಚಿಸುತ್ತಿರುತ್ತೇನೆ. ಈ ಹಿನ್ನೆಲೆಯಲ್ಲಿ ನಾನು ಹೇಳಿದ್ದು, ಸರೋಜ ಹುಚ್ಚು ಹುಡುಗಿ ಎಂದು. ಅವಳು ನನ್ನ ಮಗಳಾದರೇನು? ಅವಳು ಯೋಚಿಸಿದ್ದು ತಪ್ಪಾಗಿದ್ದರೆ, ಅದು ತಪ್ಪೆಂದು ನಾನು ಹೇಳಬಾರದೆ?

ನನ್ನ ಹಿರಿಯ ಮಗ ಈಗ 30 ವರ್ಷದವನಾಗಿರಬೇಕು. ತನ್ನ ತಂದೆ ಬದುಕಿದ್ದಾಗಲೇ ಏನೇನೋ ಗದ್ದಲ ಮಾಡಿ, ಆಸ್ತಿಯ ಪಾಲನ್ನೂ ಮಾಡಿಸಿಕೊಂಡು, ಈಗ ತನ್ನ ಹೆಂಡತಿಯ ಊರಲ್ಲೇ ಹೋಗಿ ನೆಲಸಿದ್ದಾನೆ. ಹೋಗಲಿ, ಎಲ್ಲಾದರೂ ಇರಲಿ, ಸುಖವಾಗಿದ್ದರೆ ಸಾಕು. ದಡ್ಡ, ಕೆಲಸಕ್ಕೆ ಬಾರದವ, ಅದಕ್ಕೇ ಅವನ ಬಗ್ಗೆ ಕರುಣೆ. ನನ್ನ ಬಗ್ಗೆ ಅವನಿಗೆ ಕೋಪವಿರದಿದ್ದರೂ ಎಂಥದೋ ದೂರತ್ವ ಅವನ ಮನಸ್ಸಿನಲ್ಲಿದೆ. ನಾನು ಮನೋಹರನನ್ನು ಒಳಗೊಳಗೇ ಮೆಚ್ಚುತ್ತಿದ್ದೇನೆಂದು ಅವನಿಗೆ ಅನಿಸಿತ್ತೋ ಏನೋ. ನನ್ನ ಈ ಮಗನನ್ನು ಎತ್ತಿ, ತೂರಿ, ಅಪ್ಪಿ, ಮುದ್ದಿಟ್ಟು ಚೆನ್ನಾಟವಾಡುತ್ತಿದ್ದ ಮನೋಹರನನ್ನು ನೋಡಿ ನಾನು ಅನುಭವಿಸಿದ್ದ ರೋಮಾಂಚನ, ಪುಳಕ ಈ ಹುಡುಗನಿಗೆ ಅರ್ಥವಾಗಿತ್ತೋ ಏನೋ. ನನ್ನ ಮಗ ಒಳ್ಳೆಯವ. ಸದ್ದಾ ಮುದ್ದಾ ಮಾತಾಡುವವನಲ್ಲ. ಆದರೂ ಬೆರಕಿ, ಹೆಂಡತಿಯ ತೋಳಿನಲ್ಲಿ ಹೋದ. ಹೋಗಲಿ ಅಲ್ಲಾದರೂ ಸುಖವಾಗಿರಲಿ ಎಂದಿಷ್ಟೇ ಅವನ ಬಗ್ಗೆ ಕಾಳಜಿ.

ಲಲಿತ ಮುಂದೆ ಪ್ರಯತ್ನ ಮಾಡುವುದನ್ನೇ ಬಿಟ್ಟುಬಿಟ್ಟಳು ಜಾಣೆ; ನನ್ನ ಕೂಡ ಮೊದಮೊದಲು ಬಿಗಿಯಾಗಿ ವರ್ತಿಸುತ್ತಿದ್ದವಳು, ಮುಂದೆ ಬದಲಾಗಿಬಿಟ್ಟಳು. ತನ್ನ ಗಂಡನ ಹಾಗೇ, ನನ್ನ ಕೂಡ ಅತ್ಯಂತ ಆತ್ಮೀಯವಾಗಿ ನಡೆದುಕೊಳ್ಳುತ್ತಿದ್ದಳು. ನಮ್ಮ ಮತ್ತು ಅವರ ಮಲಗುವ ಕೋಣೆಗಳು ಅಕ್ಕಪಕ್ಕದಲ್ಲೇ ಇದ್ದರೂ ಯಾವ ರೀತಿಯ ಮುಚ್ಚುಮರೆ, ರಹಸ್ಯ ಮಾಡುವ, ಮಾತಾಡುವ ಸ್ಥಿತಿಯನ್ನು ನಾವು ಬಹಳ ದಿನಗಳ ತನಕ ಉಳಿಸಲಿಲ್ಲ. ಒಂದು ರೀತಿಯ ತಿಳುವಳಿಕೆ, ನಿರ್ದ್ವೇಷ ಸ್ಥಿತಿ ಉಂಟಾದರೆ ಸೊಗಸಾದ ಸಂಬಂಧ ತಾನೇ ನಿರ್ಮಾಣವಾಗಿಬಿಡುತ್ತದೆ.

ಮೊದಲು ಮನೋಹರ ಮನೆಗೆ ಬರುತ್ತಿದ್ದ. ನಂತರ ತಾಸರ್ಧ ತಾಸು ತಡವಾಗಿ, ರಾತ್ರಿ ನನ್ನ ಗಂಡ ಬರುತ್ತಿದ್ದ. ಆದರೆ ಕಡೆಗೆ, ನನ್ನ ಗಂಡನಿಗೆ ಟಿ.ಬಿ. ಆದದ್ದು ಗೊತ್ತಾದ ನಂತರ, ಮನೋಹರ ಅವನ ಮೇಲೆ ಹೆಚ್ಚಿನ ಕೆಲಸದ ಜವಾಬ್ದಾರಿ ಹಾಕುತ್ತಿರಲಿಲ್ಲ. ನನ್ನ ಗಂಡ ಅಂಗಡಿಯಲ್ಲೂ ಜಾಸ್ತಿ ಕೆಲಸ ಮಾಡದೆ ಸುಮ್ಮನೆ ಕುಳಿತಿದ್ದು, 9-30ಕ್ಕೇನೇ ಮನೋಹರನ ಕೂಡ ಮನೆಗೆ ಬರುತ್ತಿದ್ದ. ನನ್ನ ಗಂಡನ ಕೂಡ ಘಟಪ್ರಭಾದಲ್ಲಿ ನಾನಿದ್ದ ಮೂರೂವರೆ ತಿಂಗಳ ಕಾಲವೂ ಮನೋಹರನೇ ಎಲ್ಲ ನೋಡಿಕೊಂಡು ಹೋಗುತ್ತಿದ್ದ. ಸೋಮವಾರ ಅಂಗಡಿಗೆ ಸೂಟಿ ಇದ್ದುದರಿಂದ, ರವಿವಾರ ರಾತ್ರಿಯ ಗಾಡಿಗೇ ಬಂದಿದ್ದು, ಸೋಮವಾರ ರಾತ್ರಿ ಮತ್ತೆ ಹೋಗುತ್ತಿದ್ದ. ಅವನು ಹಾಗೆ ಬಂದಾಗಲೇ, ನನ್ನನ್ನು ಅಲ್ಲಲ್ಲಿ, ಸುತ್ತುಮುತ್ತಲಿನ ಸ್ಥಳಗಳಿಗೆ ಕರೆದೊಯ್ಯುತ್ತಿದ್ದ. ಲಲಿತ ನನ್ನ ಎರಡೂ ಮಕ್ಕಳನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ನನ್ನ ಗಂಡನಿಗೆ ಹೀಗಾದದ್ದು, ತನಗೆ ಮಕ್ಕಳಾಗದೇ ಇದ್ದದ್ದು-ಎರಡೂ ಒಂದೇ ರೀತಿಯ ಪರಿಸ್ಥಿತಿಗಳೆಂದು ಅವಳು ಭಾವಿಸಿದ್ದಳೇನೊ. ಈಗ ಸ್ವತಂತ್ರಳಾಗಿ, ಸಮಾನಳಾಗಿ, ಜಾಡ್ಯ ಕಳೆದೊಗೆದು, ನನ್ನ ಕೂಡ ನಡೆದುಕೊಳ್ಳುತ್ತಿದ್ದಳು. ಹುಡುಗರನ್ನು ಕರೆದುಕೊಂಡು ಒಂದು ಸಲ ಮನೋಹರನ ಕೂಡ ಅವಳೂ ಬಂದಿದ್ದಳು.

ನನ್ನ ಗಂಡ ಪೂರ್ಣ ಗುಣಮುಖನಾದ. ಟಿ.ಬಿ.ಯೇನೂ ಈಗ ಮಹಾರೋಗವಲ್ಲ. ಒಂದು ಕಾಲಕ್ಕೆ ಆಗಿದ್ದಿರಬಹುದು. ಹಣವಂತರಿಗಂತೂ ಇದು ರೋಗವೇ ಅಲ್ಲ. ಒಂದು ಚಟ ಅಷ್ಟೆ. ಬೇಗನೆ ಚೇತರಿಸಿಕೊಂಡುಬಿಟ್ಟ. ನಾವು ಊರಿಗೆ ಮರಳಿದೆವು. ಆದರೂ ಡಾಕ್ಟರರು ಹೇಳಿದಂತೆ ಕಾಳಜಿ ವಹಿಸಲೇಬೇಕಿತ್ತು. ಇಂಜೆಕ್ಷನ್, ಗುಳಿಗೆಗಳು, ಔಷಧಿ, ವಾಯುಸೇವನೆ, ವಿಶಿಷ್ಟ ಆಹಾರ, ಬೇರೆಯದೇ ಕೋಣೆಯಲ್ಲಿ ಅವನಿಗಾಗಿ ವಿಶೇಷ ವ್ಯವಸ್ಥೆ... ಎಲ್ಲ ಮಾಡಿದ್ದೆವು.

ನನ್ನ ಗಂಡ ಬಹಳ ಒಳ್ಳೆಯವ. ತಾನೇ ಜಾಸ್ತಿ ದುಡಿಯುತ್ತಿದ್ದರೂ, ತನಗಾಗಿ ಬೇರೆ ಹಣ ಸಂಗ್ರಹಿಸಬೇಕು, ಆಸ್ತಿ ಮಾಡಿಕೊಳ್ಳಬೇಕು ಎಂದು ಯಾವಾಗಲೂ ಯೋಚಿಸಿದವನಲ್ಲ. ಮನೋಹರನೂ ಅಷ್ಟೆ. ನನಗಿದ್ದ ಭಯ ಅಂದರೆ ಲಲಿತ. ಆದರೆ ಅವಳೂ ಈಚೆಗೆ ದೇವರು-ದಿಂಡರು ಎಂದು ಒಳಗೇ ಇದ್ದುಬಿಟ್ಟಳು. ಇಷ್ಟು ಬೇಗನೇ ಅವಳು ದಾರಿಬಿಡುತ್ತಾಳೆಂದು ನನಗನಿಸಿದ್ದಿಲ್ಲ.

ಈಗಂತೂ ನನ್ನ ಗಂಡ ನನ್ನ ಕೂಡ ಮಲಗುತ್ತಿರಲಿಲ್ಲ. ಮೊದಲಾದರೂ ನಾನೇ ಅವನ ಕೂಡ ಮಲಗುತ್ತಿದ್ದೆ. ಈಗ ನಾನು ಅದನ್ನು ಮಾಡಬಾರದಾಗಿತ್ತು. ಸಹಜವಾಗಿಯೇ ನನ್ನ ಮನಸ್ಸು ಮನೋಹರನನ್ನು ಬಯಸಿತು. ನನ್ನ ಗಂಡನಿಂದ ದೇಹಸುಖ ಪಡೆದಾಗಲೂ, ನಾನು ಮನೋಹರನನ್ನು ಬಯಸಿದ್ದೆ. ಈಗ ಬಯಸಿದ್ದು ಇನ್ನೂ ಅರ್ಥಪೂರ್ಣವಾಗಿತ್ತು. ನನ್ನ ಕಣ್ಣು, ನನ್ನ ನರಗಳ ಮಿಡಿತ ಇದನ್ನು ಬಾಹ್ಯದಲ್ಲಿ ವ್ಯಕ್ತಪಡಿಸಿದ್ದರೂ, ಯಾರೂ ಕಂಡಿರಲಿಲ್ಲ.

ಮನೋಹರನೇ ನನ್ನ ಎರಡೂ ಮಕ್ಕಳನ್ನು ಅಂಗಡಿಗೇ ಕರೆದುಕೊಂಡು ಹೋಗುತ್ತಿದ್ದ. ಮೊದಲನೆಯವನಂತೂ ಶಾಲೆಯನ್ನು ಬಿಟ್ಟುಬಿಟ್ಟ. ನನ್ನ ಗಂಡ ಯಾರಿಗೂ ಏನೂ ಅನ್ನುವವನಲ್ಲ. ಸುಮ್ಮನಿದ್ದುಬಿಡುವವ. ಎರಡನೇ ಮಗ ಶಾಲೆಗೆ ಹೋಗುತ್ತಿದ್ದ. ಅಂಗಡಿಯಿಂದಲೇ ಶಾಲೆ, ಶಾಲೆಯಿಂದ ಅಂಗಡಿ. ರಾತ್ರಿ ದೊಡ್ಡಪ್ಪನ ಕೂಡ ಮನೆ. ನನಗೆ ಕಂಪನಿ ಕೊಡುವವರು ಲಲಿತ ಮತ್ತು ನನ್ನ ಗಂಡನ ರೋಗ ಇಬ್ಬರೇ.

ಈ ದಿನಗಳಲ್ಲಿಯೇ ನನಗನಿಸಿದ್ದು, ನನ್ನ ಮನಸ್ಸಿನಲ್ಲಿ ಮೊದಲಿನಿಂದಲೂ ಸುಳಿಯುತ್ತಿದ್ದ ಮನೋಹರನೇ ನನ್ನ ಗಂಡ ಎಂದು. ನಮಗೆ ದೇಹ ಮುಖ್ಯವಾಗಿರಬಹುದು. ಆದರೆ ದೇಹದ ಮೂಲಕ ಮನಸ್ಸು, ನಮ್ಮ ಗುರಿ. ಮನಸ್ಸು ಪ್ರಧಾನವಾದರೆ, ಮನಸ್ಸಿನಲ್ಲಿ ಮಂಡಿಸಿದ ಗಂಡನೇ ನನ್ನ ಗಂಡ. ಮನೋಹರನ ಬಗ್ಗೆ ನನ್ನ ಅಭಿಮಾನ ಹೆಚ್ಚಿತು. ಅವನು ಮಾತ್ರ ಎಂದೂ ನನ್ನನ್ನು ಮುಟ್ಟಿದವನಲ್ಲ, ಹತ್ತಿರ ಕರೆದವನಲ್ಲ, ಅವನ ಮನಸ್ಸಿನಲ್ಲಿ ಏನಿತ್ತೊ! ಆದರೆ ಅವನ ಪ್ರತಿಯೊಂದು ಆಚರಣೆ, ನಡೆ-ನುಡಿ ನನಗೆ ಬೇಕಾದವಾಗಿದ್ದವು, ಬೇಕಾಗಿದ್ದವು.

ಯಾವಾಗಲೂ ದುಡಿದ ನನ್ನ ಗಂಡ, ಈಗ ಸುಮ್ಮನೇ ರಿಕಾಮಿ ಬಿದ್ದುಕೊಂಡಿರಲಾಗದೆ ಸ್ವಲ್ಪ ದಿನಗಳಲ್ಲೇ ಮತ್ತೆ ಅಂಗಡಿಗೆ ಹೋಗತೊಡಗಿದ. ದುಡಿಮೆ, ಆರೋಗ್ಯದ ಬಗ್ಗೆ ಅನಾಸ್ಥೆ, ಹಣಗಳಿಸುವ ಲೋಭ ಅವನನ್ನು ಮತ್ತೆ ರೋಗಕ್ಕೆ ಬಲಿ ಮಾಡಿತು. ಈಗಂತೂ ಡಾಕ್ಟರರು ಗಟ್ಟಿಮುಟ್ಟಾಗಿ ಹಾಸಿಗೆಯಲ್ಲೇ ವಿಶ್ರಮಿಸಲು ಹೇಳಿದರು.

ರಾತ್ರಿ ಮಕ್ಕಳೊಂದಿಗೆ ಬಂದ ಮನೋಹರ, ಅವರ ಕೂಡ ಊಟ ಮಾಡಿ, ಕೋಣೆಗೆ ಬಂದು ತನ್ನ ತಮ್ಮನನ್ನು ಮಾತಾಡಿಸಿ, ನಡುಕೋಣೆಗೆ ಬರುತ್ತಿದ್ದ. ನಾನು, ಲಲಿತ ಊಟ ಮುಗಿಸಿ ಬರುವಷ್ಟರಲ್ಲಿ ಮಕ್ಕಳಿಬ್ಬರನ್ನೂ ಮಲಗಿಸಿ, ನಾನು ಅರ್ಧಮರ್ಧ ಓದಿ ಅಲ್ಲೇ ಬಿಸಾಕಿದ್ದ ಪುಸ್ತಕ-ಪತ್ರಿಕೆಗಳನ್ನು ನೋಡುತ್ತ, ನಮಗಾಗಿ ಕಾಯುತ್ತಿದ್ದ. ನಾವು ಮೂವರೂ ಸ್ವಲ್ಪ ಹೊತ್ತು ಚಕ್ಕಾ ಆಡುವುದು ರೂಢಿಯಾಗಿತ್ತು. ಲಲಿತ ಬೇಗನೆ ಎದ್ದು ಹೋಗಿ ಮಲಗುತ್ತಿದ್ದಳು. ಈಚೆಗೆ ಎಲ್ಲವೂ ಕರ್ತವ್ಯ ಎಂಬಂತೆ ಮಾಡುತ್ತಿದ್ದಳು. ಈ ಲೋಕದ ವ್ಯಕ್ತಿಯೇ ಅಲ್ಲ ಎಂಬಂತೆ ವ್ಯವಹರಿಸು

ತ್ತಿದ್ದಳು. ಗಂಡನ ಬಗ್ಗೆ, ಜಗತ್ತಿನ ಬಗ್ಗೆ ಯಾವುದೇ ರೀತಿಯ ಕಂಪ್ಲೇಂಟ್ ಇಲ್ಲ. ನಿರ್ಲಿಪ್ತತೆಯ, ನಿರ್ವ್ಯಾಜತೆಯ ಪರಾಕಾಷ್ಠೆ.

ನಾನು ಮನೋಹರನಿಗೆ ಈ ಜೀವಮಾನವೆಲ್ಲ ಋಣಿಯಾಗಿದ್ದೇನೆ. ನನ್ನ ಗಂಡ ನನಗೆ ಬೇಡವಾಗಿರದಿದ್ದರೂ, ನನಗೆ ಬೇಕಾಗಿರಲಿಲ್ಲ. ಹೆಸರಿಗೆ, ಸಾಮಾಜಿಕ ಭದ್ರತೆಯ ದೃಷ್ಟಿಯಿಂದ ಇರಬೇಕಾಗುತ್ತದೆ. ಮನೋಹರನಿಗೆ ನನ್ನ ಕಣ್ಣಿನ ಕಾಡಿಗೆಯಾಗುವ ತಾಕತ್ತಿತ್ತು. ಅವನ ಮುಂಗೈಯ ಉಬ್ಬಿದ ನರಗಳಾಗುವ ಮನಸ್ಸು ನನಗಿತ್ತು. ಅವನ ನಡದ ಸುತ್ತ ಸುತ್ತಿದ್ದ ಉಡದಾರದ ಬಳ್ಳಿಯಾಗುವ ಹಂಬಲ ನನಗಿದ್ದರೆ, ನನ್ನ ಎದೆಯ ಏರಿಳಿತಗಳಲ್ಲಿ ಹತ್ತಿ ಇಳಿದು ಚೆಸ್ಸಾಟವಾಡುವ ಹರಿತ ಗತ್ತುಗಾರಿಕೆ ಅವನ ಆಟದಲ್ಲಿತ್ತು, ಮಾತಿನಲ್ಲಿತ್ತು, ಕುಡಿ ನಗೆಯಲ್ಲಿತ್ತು. ನಾನು ನಿರ್ಲಿಪ್ತಳೆಂದರೆ, ತಾನು ನನಗಿಂತ ನಿರ್ಲಿಪ್ತನೆನ್ನುವುದನ್ನು ಸಿದ್ಧಪಡಿಸಿದ. ಸರೋಜ ನನ್ನ-ಮನೋಹರ ಪುತ್ರಿ. ಮನೋಹರನ ಋಣ ನನ್ನ ಪ್ರತಿಯೊಂದು ಉಸಿರಿನ ಮೇಲೂ ಮಣಮಣಗಟ್ಟಲೆ ಹೇರಲ್ಪಟ್ಟಿದೆ. ಈಗ ನನ್ನಲ್ಲಿ ಮಿಡಿಯುವುದು ಅವನ ರಕ್ತ.

ನನ್ನ ಬಯಕೆಗೆ, ನನ್ನ ಬೆಂಕಿಗೆ, ನನ್ನ ನೋವಿಗೆ, ನನ್ನ ಪ್ರಾಮಾಣಿಕತೆಗೆ, ನನ್ನ ನಗೆಗೆ ಜೀವಂತಿಕೆಯ ಅರ್ಥವನ್ನು ತಂದವನೇ ಅವನು. ಅದನ್ನು ನಾನೇ ಕಸಿದುಕೊಂಡಿರಬಹುದು. ಆದರೆ ಅದು ನನಗೆ ಲಭಿಸಿದೆ. ಅವನಿಂದ ಲಭಿಸಿದೆ. ನಾನು ಅವನನ್ನು ದೂಷಿಸುವುದಿಲ್ಲ. ಗಂಡನಿಗೆ ಟಿ.ಬಿ.ಯಾಗುವುದು, ಹೆಂಡತಿ ಬೇರೆ ಯಾರನ್ನಾದರೂ ಬಯಸುವುದು ನಮ್ಮ ಹಿಂದೀ ಸಿನೇಮಾಗಳಲ್ಲಿ ಬರುವ ಕತೆಯಷ್ಟು ಸಹಜವಾಗಿರಬಹುದು. ಆದರೆ ಮದುವೆಯ ದಿನದಿಂದಲೇ ನಾನು, ಮದುವೆಯ ಮಂಟಪದಿಂದಲೇ, ಮನೋಹರನನ್ನು ಎದೆತುಂಬ ಎಬ್ಬಿಸಿ ನಿಲ್ಲಿಸಿದ್ದೇನೆಂಬುದು ನನಗೇ ಗೊತ್ತು. ನಮಗೆ ಹೃದಯದಿಂದ ಅನಿಸಿದ್ದು ನಮಗೆ ದೊರೆಯಲೇಬೇಕು. ದೊರೆಯುತ್ತದೆಂದು ನನಗನ್ನಿಸಿದೆ. ಅದಕ್ಕಾಗಿ ನಾವು ವಿಶ್ವಾಸದಿಂದ ಹಾತೊರೆಯುವ, ತುಡಿಯುವ ರೀತಿಯೇ ನಮ್ಮ ಶಕ್ತಿ. ಅದಕ್ಕಾಗಿಯೇ ನಾನು ಹೇಳುವುದು, ಹೀಗೆ ಅನ್ನಿಸಿದ್ದನ್ನು ಮಾಡಿದ್ದು ನೆನೆಸಿ ನಾವು ದುಃಖಪಟ್ಟರೇ, ಅದು ಮೋಸ ಅಂತ.

ನಾನು ನನ್ನ ಗಂಡನಿಗೆ ವಿಷ ಹಾಕಿದ್ದು ಈ ಸಂದರ್ಭದಲ್ಲಿಯೇ. ಇಂಥ ಗಂಡ ಈಗ ಇದ್ದರೂ ಸರಿ, ಇರದಿದ್ದರೂ ಸರಿ. ನನಗೆ ಮನೋಹರನಿಂದ ಬೇಕಾದದ್ದು ಸಿಕ್ಕಿದೆ. ಗಂಡನಿಗೂ, ಅವನ ರೋಗದಿಂದ, ನಿಸ್ಸತ್ವದ, ನಿರುಪಯುಕ್ತ, ನಿರರ್ಥಕ ನರಳುವಿಕೆಯಿಂದ



ಮುಕ್ತಿ ದೊರಕಿಸಿಕೊಡಬೇಕೆಂದೇ ನಾನು ಅವನಿಗೆ ವಿಷ ಹಾಕಿದ್ದೆ. ಅದೊಂದು ದೊಡ್ಡ ದುರಂತ.

ನಾನು ಬಹಳ ದಿನಗಳ ತನಕ ಯೋಚನೆ ಮಾಡಿ ಈ ನಿರ್ಧಾರಕ್ಕೆ ಬಂದಿದ್ದೆ. ಏನಾದರೂ ಮಾಡಬೇಕೆಂದು ನಿಶ್ಚಯಿಸಿದ ನಂತರ ನಾನು ಅದರ ಬಗ್ಗೆ ಪಾಶ್ಚಾತ್ತಾಪ ಪಡುವುದಿಲ್ಲ. ಮಾಡುವ ಮೊದಲೇ ಯೋಚಿಸುತ್ತೇನೆ. ಯುಗಾದಿಯ ದಿನ, ನನ್ನ ಬದುಕಿನ ಒಂದು ಯುಗ ಕಳೆದು, ಇನ್ನೊಂದರ ಆದಿಯಾಗಲಿ ಎಂದು ನಾನೇ, ಸಜ್ಜಕದ ಹೋಳಿಗೆ ಮಾಡಿದೆ. ವಿಷದ ಪುಡಿ ಕಲೆಸಿ ಮಾಡಿದ ಹೋಳಿಗೆಯನ್ನು ಬಟ್ಟಲಲ್ಲಿಟ್ಟು, ನನ್ನ ಗಂಡನ ಮಂಚದ ಮೇಲಿಟ್ಟು, ಇನ್ನೊಂದನ್ನು ಮನೋಹರನ ಕೈಯಲ್ಲಿ ಕೊಟ್ಟೆ.

ಬೆಳಗ್ಗೆ ಎಂಟರ ಹೊತ್ತು, ನನ್ನ ನಂಟನ್ನೇ ಇವರಿಬ್ಬರ ಕೂಡ ಕಡಿದುಹಾಕೀತೆಂದು ನನಗನಿಸಿರಲಿಲ್ಲ. ಅವರು ತಿನ್ನುತ್ತ ಮಾತಾಡತೊಡಗಿದ್ದರು. ನಾನು ಏನೂ ಅರಿಯದವರಂತೆ ಒಳಗೆ ಬಂದೆ. ಲಲಿತಳು ಮತ್ತೆ ಬಟ್ಟಲಲ್ಲಿಟ್ಟು ಕೊಟ್ಟ ಹೋಳಿಗೆ, ಸಂಡಿಗೆ, ನೀರಿನ ತಂಬಿಗೆ ಹಿಡಿದು ಕೋಣೆಗೆ ಬಂದೆ. ಎರಡೂ ಹೋಳಿಗೆಗಳನ್ನು ಮನೋಹರನೇ ತಿಂದದ್ದು ನೋಡಿ ದಂಗು ಬಡಿದು ನಿಂತೆ. ಮೈಯೆಲ್ಲ ಬೆವೆತು ಹೋಯಿತು. ''ಆಂವ ತಿನ್ನಾಕ ಒಲ್ಲೆಂದ. ಎರಡುನ್ನೂ ನಾನು ತಿಂದೆ. ನನಗೆ ಸಾಕಿನ್ನ, ಅಂಗಡಿಗೆ ಲಗೂ ಹೋಗಬೇಕಿವತ್ತ. ಪೂಜೀ ಕೆಲಸ ಭಾಳದ'' ಎಂದು ಮನೋಹರ, ನೀರು ಇಸಗಂಡು ಕುಡಿದು ಎದ್ದೇಬಿಟ್ಟ. ನಾನು ಮನೋಹರನಿಗೆ ನೀರೂ ಕುಡಿಸಿದೆ. ನನ್ನ ಗಂಡನಿಗೆ ವಿಷ ಹಾಕಿದ್ದೆ. ಆದರೆ ನನ್ನ ಮಂಗಳಸೂತ್ರಕ್ಕೆ, ನನ್ನವನಿಗೆ, ನನ್ನ ನಿಜವಾದ ಗಂಡನಿಗೆ ವಿಷ ಹಾಕಿದೆ ಎಂದು ಈಗ ಅನ್ನಿಸಿತು.

ಮುಂದೆ 2-3 ದಿನ ಏನೂ ಆಗಲಿಲ್ಲ. ನಾಲ್ಕು ದಿನಗಳ ನಂತರ, ಮನೋಹರನ ದೇಹದ ಮೇಲೆ ಈ ವಿಷದ ಪರಿಣಾಮ ತೀವ್ರವಾಗಿ, ಅವನನ್ನು ದವಾಖಾನೆಗೆ ಸೇರಿಸಿ ಉಪಚಾರವಾಗುವಷ್ಟರಲ್ಲಿ, ನಾನು ಅವನನ್ನು ತಿರುಗಿ ಪಡೆಯಲಾರನೆಂದು ನನಗೆ ಖಾತ್ರಿಯಾಗಿತ್ತು. ಅವನ ಹೆಣದ ಮೇಲೆ ಅಳುವಾಗ, ಗದ್ದಲಲ್ಲಿ ಅಕಸ್ಮಾತ್ ನನ್ನ ತಾಳಿ ಹರಿದು, ಕರಿಮಣಿಗಳೆಲ್ಲ ಚೆಲ್ಲಾಪಿಲ್ಲಿಯಾದದ್ದು ಎಷ್ಟು ಶ್ರೀಮಂತ ಅರ್ಥದಿಂದ ಕೂಡಿತ್ತು!

ನನ್ನ ಎರಡನೇ ಮಗ ಮಾತ್ರ ಇನ್ನೂ ಮದುವೆಯಾಗಿಲ್ಲ. ಮಗಳನ್ನು ಒಂದು ಒಳ್ಳೆಯ ಮನೆಗೆ ಮದುವೆ ಮಾಡಿಕೊಟ್ಟಿದ್ದೇನೆ. ನನ್ನ ಗಂಡ ಸರೋಜಳನ್ನು ನೋಡಿ, ಮನೋಹರನ ಹಾಗೇ ಇದೆ ಎಂದು ಹೇಳಿದಾಗ ನಾನು ಬಿಕ್ಕಿ ಬಿಕ್ಕಿ ಅತ್ತುಬಿಟ್ಟಿದ್ದೆ-ಆನಂದದಿಂದ. ಜೀವನ ಸಾರ್ಥಕವಾದ ಹಾಗೆ ಅನ್ನಿಸಿದ್ದರಿಂದ. ಲಲಿತ ಯಾವ ಇಚ್ಛೆ, ಆಶೆ, ಆಸ್ತಿ ಏನೂ ಬಯಸದೆ, ತಿಳಿಸದೆ, ತನ್ನ ತವರು ಮನೆಯಲ್ಲಿದ್ದಾಳೆ. ಯಾವಾಗಲಾದರೊಮ್ಮೆ ಸರೋಜಳ ಊರಿಗೆ ಹೋಗಿ ಬರುತ್ತಾಳೆ. 4-5 ವರ್ಷ ಕುಟುಕುಟ ಜೀವ ಹಿಡಿದು, ಒಣಗಿದ ಮಾನಿ ಕಡ್ಡಿಯಂತೆ ಬೆಳ್ಳಗಾಗಿ, ನಿರಸಾಗಿ ನನ್ನ ಗಂಡ ಸತ್ತ. ನಾನವನಿಗೆ ವಿಷ ಹಾಕಿದ್ದೆ.

ನನ್ನ ಗಂಡ ಸಹಜ ವಿಷದಿಂದ ಸತ್ತ. ನನ್ನ ಮನಸ್ಸಿನ ಗಂಡ ನನ್ನ ವಿಷದಿಂದ ಸತ್ತ. ಸತ್ತವರ ಸಮಾಧಿ ನಾನು. ಉಸಿರಿನ ವಿಷದಿಂದ ಬದುಕುತ್ತಿರುವ ನಿತ್ಯ ಪ್ರೇತ ನಾನು. ನಾನು ಯಾವುದಕ್ಕೂ ದುಃಖಪಟ್ಟಿಲ್ಲ. ಈ ಬದುಕಿನಲ್ಲಿ ಪ್ರತಿಯೊಂದಕ್ಕೂ ನಾನು ಋಣಿಯಾಗಿದ್ದೇನೆ. ಈ ದಿನ ಬಂದ ಸರೋಜಳ ಪತ್ರಕ್ಕೂ ನಾನು ಋಣಿಯಾಗಿದ್ದೇನೆ. ಇಷ್ಟು ದಿನ ಕುದಿಯುತ್ತಿದ್ದ ಉಗಿಯನ್ನು ಹೊರಹಾಕಲು ಕಾರಣಳಾದ ನನ್ನ ಮನೋಹರನ ಮಗಳಿಗೆ, ನಾನು ಋಣಿಯಾಗಿದ್ದೇನೆ. ನನ್ನ ಗಂಡನಿಗೆ ವಿಷ ಹಾಕಿದೆ ಎಂದು ಹೇಳುವ, ನೋವನ್ನು ನಲಿಯುವ ಎದೆಗಾರಿಕೆಯನ್ನು ನನಗೆ ನೀಡಿದ ನನ್ನ ಗಂಡನ ರಕ್ತಕ್ಕೆ ನಾನು ಋಣಿಯಾಗಿದ್ದೇನೆ. ನಾನು ವಿಷವಾಗಿದ್ದೇನೆ.





ಎ. ಎನ್. ಪ್ರಸನ್ನ

# ಮುಂಗಾರು

ಹಿಂದಿನ ಸಂಚಿಕೆಯಲ್ಲಿ...

ವಿಶ್ರಾಂತ ಬದುಕು ನಡೆಸುತ್ತಿರುವ ನಂಜುಂಡಯ್ಯ, ತಮ್ಮ ತಾರುಣ್ಯದಲ್ಲಿ ಪ್ರತಿಭಾವಂತ ಫೋಟೊಗ್ರಾಫರ್ ಆಗಿದ್ದವರು. ಅವರ ಅಪೂರ್ವ ಯೋಚನೆಗಳು, ಹವ್ಯಾಸ, ಬದುಕಿನ ಆಗುಹೋಗುಗಳನ್ನು ವಿಭಿನ್ನವಾಗಿ ನೋಡುವ ದೃಷ್ಟಿಕೋನ ಕಛೇರಿಯಲ್ಲಿ ಹಲರು ಸ್ನೇಹಿತರನ್ನು, ಹಿತೈಷಿಗಳನ್ನು ಗಳಿಸಿಕೊಟ್ಟಿರುತ್ತದೆ. ಈ ಮಧ್ಯೆ, ಎಲ್ಲರಂತೆ ಅವರು ಗೃಹಸ್ಥರಾಗಿ, ಮಗನನ್ನು ಪಡೆದು, ಅವನಿಗೆ ಮದುವೆ ಮಾಡಿ, ಮೊಮ್ಮಗನನ್ನೂ ಕಂಡಿರುತ್ತಾರೆ. ಮಗನ ವಿಚಿತ್ರ ನಿರ್ಲಕ್ಷ್ಯ, ಬೆಚ್ಚಗಿನ ಪ್ರೀತಿಯ ಸ್ಪರ್ಶವಿಲ್ಲದೆ ನಡೆದುಕೊಂಡುಹೋಗುವ ಜೀವನ, ಸೊಸೆ ತೋರಿಸುವ ಕಿಂಚಿತ್ ಅಂತಃಕರಣ-ಇವೆಲ್ಲವುಗಳ ಮಧ್ಯೆ ಅವರ ಹೃದಯಕ್ಕೆ ಸ್ವಲ್ಪವಾದರೂ ತಂಪೆರೆಯುವವನೆಂದರೆ ಕ್ರಿಕೆಟ್ ಹುಚ್ಚಿನ ಮೊಮ್ಮಗ.

ಒಂದು ದಿನ ವರುಷಗಳ ಸ್ನೇಹಿತ ಗುಂಡಪ್ಪ ಭೇಟಿಯಾಗಿ, ತನ್ನ ಮಗಳು-ಅಳಿಯ ನರ್ಸಿಂಗ್ ಹೋಮ್ ಒಂದನ್ನು ಕಟ್ಟಿಸಿಕೊಂಡಿರುವುದು ತಿಳಿಸಿ, ಆ ಸಮಾರಂಭಕ್ಕೆ ಆಹ್ವಾನಿಸುತ್ತಾನೆ. ಅವರು ಅಲ್ಲಿಗೆ ಹೋಗಿ ಬರುತ್ತಾರೆ.

ಮುಂದೆ...

## - ದ್ವಿತೀಯಾರ್ಧ -

ನಂಜುಂಡಯ್ಯ ಫೋಟೊಗ್ರಫಿಯನ್ನು ತಮ್ಮ ಸಂತೋಷ ಸಾಧನವನ್ನಾಗಿ ಮಾತ್ರ ಬಳಸಲು ನಿಶ್ಚಯಿಸಿದ್ದರು. ಅವನಿಗೆ ಪೊಗರು ಜಾಸ್ತಿ ಎಂಬ ಬಿರುದು ತಗುಲಿಹಾಕಿಕೊಂಡಿತು. ತಮ್ಮದೇ ದಾರಿಯಲ್ಲಿ ನಡೆದ ಅವರಿಗೆ ಹಲವಾರು ಸ್ಪರ್ಧೆಗಳಲ್ಲಿ ಬಹುಮಾನ ಲಭಿಸಿತು. ಜೊತೆಗೆ ಆ ವಲಯದಲ್ಲಿ ಸಾಕಷ್ಟು ಮನ್ನಣೆ ದೊರಕಿತು. ಆ ಹವ್ಯಾಸದಲ್ಲಿ ತೊಡಗಿದವರಿಂದ ಮೆಚ್ಚುಗೆಯ ನೂರಾರು ಕಾಗದಗಳು ಬಂದಿದ್ದವು. ಅವರ ಮಂಚದ ಕೆಳಗಿದ್ದ ಸೂಟ್‌ಕೇಸಿನಲ್ಲಿ ಅವೆಲ್ಲವುಗಳ ಫೈಲೊಂದಿತ್ತು. ಅಷ್ಟರ ಹೊರತು ತಮ್ಮ ಹವ್ಯಾಸದಲ್ಲಿ ಅವರು ಗಳಿಸಿದ್ದು ಅತ್ಯಲ್ಪ.

ಫೋಟೊಗ್ರಫಿಯಲ್ಲಿ ಅವರಿಗೆ ದಾರಿಯೇನೂ ಸುಗಮವಾಗಿರಲಿಲ್ಲ. ಗುಣಮಟ್ಟ ಮತ್ತು ಯೋಗ್ಯತೆಗಳೇ ಪ್ರಧಾನವಾದ ಸಂಘ, ಸಂಸ್ಥೆಗಳಲ್ಲಿಯೂ ಸದಾಕಾಲ ಎರಡು ಬಗೆಯ ಗುಂಪುಗಳಿದ್ದವು. ಒಂದು ಯೋಗ್ಯತೆ ಇದ್ದದ್ದು ಮತ್ತೊಂದು ಯೋಗ್ಯತೆ ಇಲ್ಲದ್ದು. ಎರಡೂ ಗುಂಪಿನಲ್ಲಿದ್ದವರು ಮನ್ನಣೆ ಹಾಗೂ ಪುರಸ್ಕಾರಕ್ಕೆ ಹೊಡೆದಾಡುತ್ತಿದ್ದರು. ಪ್ರಾರಂಭದಲ್ಲಿ ಇದು ಮೋಜೆನಿಸಿದರೂ ಕ್ರಮೇಣ ಅಸಹ್ಯವಾಯಿತು. ಅವರಲ್ಲಿದ್ದ ಸೂಕ್ಷ್ಮತೆಗಳು ಅವರ ಕೃತಿಗಳಿಂದಾಚೆ ಕಾಲಿಡಲಿಲ್ಲ. ಇದರಿಂದ ನಿಧಾನವಾಗಿ ವಿಮುಖರಾದ ನಂಜುಂಡಯ್ಯ, ಸಾಮಾನ್ಯ ಸಂಗತಿ ಮತ್ತು ಜನ ಸಾಮಾನ್ಯರಲ್ಲಿಯೇ ಹೆಚ್ಚು ಆಸಕ್ತಿ ವಹಿಸಿದರು. ಅವರಿಗಲ್ಲಿ ಹೆಚ್ಚು ಸಮಾಧಾನ ದೊರಕಿತು.

ಇಂತಹ ಸಂದರ್ಭದಲ್ಲಿಯೇ ಅವರಿಗೆ ಸಮ್ರತಾಳ ಪರಿಚಯವಾದದ್ದು. ಅವರು ತೆಗೆದ ಒಂದು ಫೋಟೋ ಬೆಲೆಯುಳ್ಳ ಪತ್ರಿಕೆಯಲ್ಲಿ ಪ್ರಕಟವಾಗಿತ್ತು ಅದರಿಂದ ಪ್ರೇರಿತಳಾಗಿ ಭೇಟಿಯಾಗಿದ್ದಳು. ಭೇಟಿಗೆ ಮೊದಲೇ, ಅವರ ಗೆಲುವು-



ನಿಲುವುಗಳ ಬಗ್ಗೆ ಸಕಲ ಮಾಹಿತಿ ದೊರಕಿಸಿಕೊಂಡಿದ್ದಳು. ಅದು ಅವರಿಬ್ಬರಲ್ಲಿ ಮಾತಿಗೆ ಗ್ರಾಸ ಒದಗಿಸಿತ್ತು. ತಮ್ಮನ್ನು ಮತ್ತು ಫೋಟೊಗ್ರಫಿಯನ್ನು ಗಂಭೀರವಾಗಿ ಪರಿಗಣಿಸಿದ್ದನ್ನು ನಂಜುಂಡಯ್ಯ ಕೊಂಚ ವಿಶೇಷವಾಗಿ ಪರಿಗಣಿಸಿದರು. ಅವಳ ಬಗ್ಗೆ ಸಾಕಷ್ಟು ಆಸಕ್ತಿ ವಹಿಸಿದರು.

ಇಪ್ಪತ್ತರ ಉತ್ಸಾಹದಿಂದ ಚಿಮ್ಮುತ್ತಿದ್ದ ಸಮ್ರತಾ, ಹೇಳಿಕೊಳ್ಳುವಷ್ಟು ಚೆಲುವೆಯಾಗಿರಲಿಲ್ಲ. ಆದರೆ ಕ್ಯಾಮೆರಾಗೆ ಹೇಳಿಮಾಡಿಸಿದಂತೆ ಮುಖದ ರೇಖೆಗಳು. ನಂಜುಂಡಯ್ಯ ಅದೆಷ್ಟೋ ದಿನಗಳು ಆ ಗುಂಗಿನಲ್ಲೇ ಇರುತ್ತಿದ್ದರು. ಹಣ, ಪ್ರಭಾವ ಮತ್ತು ಸಂಪರ್ಕವಿಲ್ಲದ ಅವಳು ರೂಪದರ್ಶಿಯಾಗುವ ಕನಸನ್ನು ಬೆಳೆಸುತ್ತಿದ್ದಳು. ಅವಳ ಆಕಾಂಕ್ಷೆಯನ್ನು ನಂಜುಂಡಯ್ಯ ಬೆಂಬಲಿಸಿದ್ದರು. ತಮ್ಮ ಮಿತಿಯಲ್ಲಿ ಅದಕ್ಕಾಗಿ ಪ್ರಯತ್ನಿಸಿದ್ದರು ಕೂಡ.

ಸಮ್ರತಾಳ ಜೊತೆ ಸುಮಾರು ಆರು ತಿಂಗಳ ಕಾಲ ನಡೆಸಿದ ಮಾತು, ಒಡನಾಟ, ಸಾಮೀಪ್ಯ, ಸ್ಪರ್ಶ ಇವುಗಳ ಜೊತೆ, ಅವಳ ಅಭಿರುಚಿ, ನಡವಳಿಕೆಗಳ ಪ್ರಭಾವಕ್ಕೆ ನಂಜುಂಡಯ್ಯ ಸಿಲುಕಿದ್ದು ತೀರ ಸಹಜ. ಅದಕ್ಕವಳ ಪ್ರತಿಕ್ರಿಯೆ ಅನುರೂಪವಾಗಿದ್ದು ಅವರಿಗೆ ತೀರ ಹಿತವೆನಿಸಿತ್ತು. ಹೀಗಾಗಿ ಪರಸ್ಪರ ಮೈಯಿಗೆ ಸಂಬಂಧಿಸಿದ ಗುಟ್ಟುಗಳ ವಿನಿಮಯ ಅನಿರೀಕ್ಷಿತವಾಗಿರಲಿಲ್ಲ. ಆ ದಿನಗಳಲ್ಲಿ ಅವರಿಗೆ, ಕಣ್ಮುಚ್ಚಿದರೆ ಒಂದು ಬಗೆಯಲ್ಲಿ ಕಣ್ಣು ತೆರೆದಿದ್ದರೆ ಮತ್ತೊಂದು ಬಗೆಯಲ್ಲಿ, ಸಮ್ರತಾ ಅವರ ಕಣ್ಣೊಳಗಿಳಿಯುತ್ತಿದ್ದಳು. ಅವರ ಕಲ್ಪನೆ-ಕನಸುಗಳಿಗೆ ಕಾಮನಬಿಲ್ಲಿನ ಮಿರುಗು ಒದಗಿಸಿದ್ದಳು.

ಮೊದಲಿನಿಂದಲೂ ನಂಜುಂಡಯ್ಯ ಮನೆಯಲ್ಲಿ ಸ್ವತಂತ್ರರಾಗಿದ್ದರು. ತಮ್ಮಿಬ್ಬರಲ್ಲಿ ಎಲ್ಲ ವಿಧದಲ್ಲೂ ಹೊಂದಾಣಿಕೆ ಇದೆ ಎಂದು ಭಾವಿಸಿ, ಸಮ್ರತಾಳನ್ನು ಮದುವೆಯಾಗುವ ವಿಷಯಕ್ಕೆ ಕಾವು ಕೊಡುತ್ತ, ಅವಳ ಮನಸ್ಸಿನಲ್ಲಿ ನಿಜವಾಗಿಯೂ ಇರುವುದೇನು ಎಂದು ತಿಳಿಯಲು ಹಲವು ಬಾರಿ ಪ್ರಯತ್ನಿಸಿದ್ದರು. ಆದರೆ ಅವಳಿಗೆ ವಿಷಯಗಳು ಸ್ಪಷ್ಟವಿರಲಿಲ್ಲ. ಸಹಜವಾಗಿ ಪರಸ್ಪರ ರೂಪುಗೊಳ್ಳಬೇಕಾದ ಆ ಬಗೆಯ ಸಂಬಂಧವನ್ನು, ತಾವೊಬ್ಬರೇ ಅಪೇಕ್ಷಿಸುವುದು ಮೂರ್ಖತನವೆಂದು ತಿಳಿದು, ತಾವಿನ್ನೂ ಅವಳನ್ನು ಸರಿಯಾಗಿ ಅರಿತಿಲ್ಲ ಎಂದುಕೊಂಡು ಆ ಆಲೋಚನೆಯನ್ನು ಕೈ ಬಿಟ್ಟರು.

ಈ ವಿಷಯದ ವಾಸನೆ ಮೊದಲು ಹಿಡಿದವನು ಗುಂಡಪ್ಪ. ಯಾವುದೇ ಸಂಕೋಚವಿಲ್ಲದೆ ನಂಜುಂಡಯ್ಯ ಸಕಲವನ್ನೂ ಹರವಿಟ್ಟರು. ಜೊತೆಗೆ ಸಾಧ್ಯವಾದರೆ ಸಮ್ರತಾ ಗುರಿ ತಲುಪುವುದಕ್ಕೆ ಸಹಾಯ ಮಾಡಲು ಹೇಳಿದರು. ಇಷ್ಟರಿಂದಲೇ ಗುಂಡಪ್ಪ ಅವಳ ಬಗ್ಗೆ ಸಂಪೂರ್ಣ ಸಲಿಗೆ ಪಡೆದ. ಎರಡೇ ದಿನದಲ್ಲಿ ಗುಂಡಪ್ಪ ಒಂದು ಬಾಂಬ್ ಹಾಕಿದ. ''ನಿನ್ನ ಹುಡುಗಿ ಮೈ ಕಾವು ಅಂದರೆ ಹೈ ವೋಲ್ಟೇಜ್. ಅದರ ಮಜ ಇಡೀ ದಿನ ಇರುತ್ತೆ. ನಾನು ಇಂಥೋಳನ್ನ ಈವರೆಗೂ ನೋಡಿರಲಿಲ್ಲ'' ಎಂದು. ದಿನ ಕಳೆದಂತೆ ಗುಂಡಪ್ಪ ಮತ್ತು ಅವಳ ಒಡನಾಟ ಹೆಚ್ಚಾಯಿತು. ನಂಜುಂಡಯ್ಯ ಸಮ್ರತಾಳನ್ನು ಪೂರ್ತಿ ದೂರವಿಟ್ಟರು. ಆದಾದ ಮೂರು ತಿಂಗ

ಳೊಳಗೆ, ಒಂದು ಬಗೆಯ ಪವಾಡದಂತೆ, ನಮ್ರತಾ ಗುಂಡಪ್ಪನ ಜೊತೆ ಮುಂಬೈಗೆ ಹಾರಿದಳು. ವಾಪಸು ಬಂದ ಗುಂಡಪ್ಪ, ಅವಳ ಬಗ್ಗೆ ಹಾರಿಕೆಯ ಮಾತು ಹಾರಿಸಿದ್ದ.

ನಮ್ರತಾಳ ವಿಷಯ ನಂಜುಂಡಯ್ಯ, ಗುಂಡಪ್ಪ ಮಾತನಾಡುತ್ತಲೇ ಇರಲಿಲ್ಲ. ಆದರೆ ಆ ದಿನ ಪತ್ರಿಕೆಯಲ್ಲಿ, 'ಕಾಣೆಯಾಗಿದ್ದಾರೆ' ಎಂದು ಅವಳ ಫೋಟೋ ಪ್ರಕಟವಾದಾಗ ನಂಜುಂಡಯ್ಯ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ತನ್ನ ಗುರಿಗೆ ಹೇಗಾದರೂ ತಲುಪಲೇಬೇಕೆಂಬ ಹಠ ಈ ಪರಿಣಾಮಕ್ಕೆ ಕಾರಣವಿರಬೇಕು ಎಂದುಕೊಂಡರು. "ನಮ್ರತಾಳ ಫೇಸನ್ನ ಯಾರಿಗೇ ಆಗ್ಲಿ ಮ್ಯಾಚ್ ಮಾಡಕ್ಕೆ ಆಗಲ್ಲ... ಹೀಗಾಗಿರೋದೂ ಅದಕ್ಕೇ ಇರ್ಬೇಕು" ಎಂದು ಚುಟುಕಾಗಿ ಪ್ರತಿಕ್ರಿಯಿಸಿದ್ದ ಗುಂಡಪ್ಪ.

ಆ ದಿನ ಮನೆಗೆ ಹಿಂತಿರುಗುವ ಸಮಯದಲ್ಲಿ ಕತ್ತೆತ್ತಿ ನೋಡಿದಾಗ ಅವರಿಗೆ ಕಂಡದ್ದು, ಮಿರುಗುವ ಬೆಳ್ಳಿ ಬಣ್ಣದ ಮೋಡದ ಸಾಲು. ತಟ್ಟನೆ ಅವರ ಮನಸ್ಸು ಅದನ್ನೇರಿ ಹೋಯಿತು. ಹಿಂದೆಯೇ ತುಟಿಯಂಚಿನಲ್ಲಿ ನಗು ಮೂಡಿ, ಹೈಸ್ಕೂಲು ಓದುತ್ತಿದ್ದಾಗ ಅಂತಹ ಮೋಡದ ಸಾಲಿನ ವೇಗ, ಆಕಾರದ ಬದಲಾವಣೆ ಇತ್ಯಾದಿಗಳಲ್ಲಿ ಬಾಜಿ ಕಟ್ಟಿ ಆಡುತ್ತಿದ್ದದ್ದು ನೆನಪಾಯಿತು. ತಾವು ಹಾಗೆಯೇ ಇದ್ದುಬಿಟ್ಟಿದ್ದರೆ...



ಹೊರಗಡೆ ಮಳೆಯ ರಭಸ ಕಡಿಮೆಯಾಗಿರಲಿಲ್ಲ. ಕೈಯಲ್ಲಿ ಹಿಡಿದ ಪುಸ್ತಕ ಕೇವಲ ನೆಪ ಮಾತ್ರ ಎನ್ನಿಸಿತು. ಪಕ್ಕಕ್ಕಿಟ್ಟರು. ಹಾಲಿನಲ್ಲಿ ಬೆಳಕು ಕಾಣಲಿಲ್ಲ. ಎಲ್ಲ ಮಲಗಿರಬೇಕು ಎಂದುಕೊಂಡರು. ಅವರು ಎದ್ದು ಹೊದಿಕೆ ಸರಿಪಡಿಸಿಕೊಂಡರು. ಕೊಂಚ ವಿಚಲಿತಗೊಂಡಿದ್ದ ಅವರಿಗೆ ನಿದ್ದೆ ಇನ್ನೂ ದೂರವಿದೆ ಎನ್ನಿಸಿತು. ಏಕೋ ಅವರಿಗೆ ಮದುವೆಯಾಗಿ ಒಂದು ವರ್ಷಕ್ಕೇ ತೀರಿಕೊಂಡ ಮಗಳು ಸುನೀತ ಮತ್ತು ಹೆಂಡತಿ ಶ್ಯಾಮಲಾ ನೆನಪಾದರು. ಅವರು ಇದ್ದಿದ್ದರೆ ತಮ್ಮ ಪರಿಸ್ಥಿತಿ ಹೀಗಾಗುತ್ತಿರಲಿಲ್ಲವೇನೋ ಎಂದುಕೊಂಡರು. ಇವೆಲ್ಲದರ ಜೊತೆಗೆ, ತಮ್ಮ ವೈಯಕ್ತಿಕ ಆರ್ಥಿಕ ನೆಲೆ ಸ್ವಲ್ಪ ಬಲವಾಗಿ ಇದ್ದಿದ್ದರೆ, ತಾವು ಉಳಿದ ದಿನಗಳನ್ನು ನೂಕಲು ಬೇರೆ ವ್ಯವಸ್ಥೆ ಮಾಡಿಕೊಳ್ಳಬಹುದಿತ್ತು ಎಂದು ನಿಧಾನ ಉಸಿರೆಳೆದರು. ಈಗ ಮತ್ತೆ ಅವರಿಗೆ, ರಿಟೈರ್ ಆಗಿ ಬಂದ ಹಣದಲ್ಲಿ ಶಿವರಾಮ ಮನೆ ಕಟ್ಟಲಿ, ತಮ್ಮಲ್ಲಿ ಎಲ್ಲೋ ಮನೆಮಾಡಿದ್ದ ಕನಸು ನನಸಾಗಲಿ ಎನ್ನುವುದರ ಅಸಾಂಗತ್ಯ ಮನದಟ್ಟಾಯಿತು. ಈ ವಿಷಯ ತಿಳಿದಾಗ ರಘುನಾಥ, "ನೀನು ಪೆದ್ದು ಕೆಲಸ ಮಾಡಿದೀಯ, ಅದು ಲೌಕಿಕದ ಮಾತಾಯಿತು. ಮತ್ತೊಂದು; ನೀನು ಯಯಾತಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದೀಯ. ಅವನು ಮಗನಿಂದ ಬರಿ ತಾರುಣ್ಯ ಪಡೆದ. ಆದರೆ ನೀನು ನಿನ್ನ ಮಗನ ಮುಖಾಂತರ ಪರ್ಪೆಚುಯೇಟ್ ಆಗೋದಕ್ಕೆ ಹೊರಟಿದ್ದೀಯ... ಆಲ್ ದಿ ಬೆಸ್ಟ್..." ಎಂದಿದ್ದ.



ಅವನ ಮಾತು ತೀರ ಸರಿ ಎನ್ನಿಸಿತವರಿಗೆ. ಬೊಗಸೆ ತುಂಬುತ್ತಿದ್ದಂತೆಯೇ ಎಲ್ಲವೂ ಬರಿದಾಗುವುದರ ಸೂಚನೆ ತಾವು ಅರಿಯದೇ ಹೋದದ್ದು ಹೇಗೆ?... ತಿಳಿಯಲಿಲ್ಲ, ಅಷ್ಟೆ ಎಂದುಕೊಂಡರು.

ಬೆಳಿಗ್ಗೆ ಐದೂವರೆಗೆ ಎದ್ದು, ವಾಕಿಂಗ್ ಮುಗಿಸಿ ಮನೆಗೆ ಬರುವಾಗ ಕತ್ತಿನ ಹಿಂಬಾಗ ಕೊಂಚ ಬಿಗಿಯಾಗಿ ಆಕಡೆ-ಈಕಡೆ ಮುಖ ತಿರುಗಿಸುವುದು ಅವರಿಗೆ ಕಷ್ಟವೆನಿಸಿತು. ಮಾಮೂಲಿ ನಂತೆ, ಕಾಂಪೌಂಡಿನಲ್ಲಿ ಪೇಪರ್ ಬಿದ್ದಿದ್ದನ್ನು ತೆಗೆದುಕೊಂಡು, ಓದದೆ, ಹಾಲಿನಲ್ಲಿಟ್ಟು ತಮ್ಮ ರೂಮು ಸೇರಿದರು. ಹಿಂದೊಮ್ಮೆ ಇದೇ ರೀತಿ ಆಗಿದ್ದಾಗ, ಆಯುರ್ವೇದದ ಎಣ್ಣೆ ಹಚ್ಚಿ ಗುಣ ಪಡಿಸಿಕೊಂಡಿದ್ದರು. ಕೈಗೆ ಎಟಕುವಂತಿದ್ದ ಅದನ್ನು ತೆಗೆದು ಎಣ್ಣೆ ನೀವಿಕೊಂಡು ದಿಂಬಿಗೆ ತಲೆ ಕೊಟ್ಟರು. ಸ್ವಲ್ಪ ಸಮಯದ ಮೇಲೆ ಹಾಯೆನಿಸಿತು.

ಒಳಹೊರಗೆ ಒಂದೆರಡು ಸಲ ಓಡಾಡಿದಾಗ, ಶಿವರಾಮ-ರೇಖಾರನ್ನು ಕಂಡು, ಅವರ ತುಟಿಗಳು ಏಕೋ ಬಿಗಿದುಕೊಂಡಿವೆ ಎನ್ನಿಸಿತವರಿಗೆ. ಅರವಿಂದನನ್ನು ಸ್ಕೂಲಿಗೆ ಕಳಿಸುವ ಕಡೆಯೂ ರೇಖಾ ಅಷ್ಟು ಗಮನ ಕೊಟ್ಟಂತಿರಲಿಲ್ಲ. ಅದಿಲ್ಲ, ಇದಿಲ್ಲ ಎಂದು ಅವನು ರಾಗ ಎಳೆಯುತ್ತಿದ್ದ. ಅವನು ಹೊರಟ ಮೇಲೆ ಸ್ವಲ್ಪ ಹೊತ್ತು ಬಿಗಿ ಮೌನ ಮನೆಯಲ್ಲಿ. ನಂತರ ಶಿವರಾಮ, "ಹಾಗಾದ್ರೆ ಇವತ್ತೇ ಅದನ್ನು ಅಟೆಂಡ್ ಮಾಡಿ ಬಿಡೋದೂ ಅಂತೀಯಾ?..." ಎಂದಿದ್ದಕ್ಕೆ ರೇಖಾ, "ಅಲ್ರೀ, ಆಫೀಸಿನ ಕೆಲಸ, ಮನೆ ಹುಡುಕೋ ಕೆಲಸ ಅಂತ ನಾವು ಮುಖ್ಯವಾದದ್ದನ್ನ ಇವತ್ತು-ನಾಳೆ ಅಂತ ಮುಂದಕ್ಕೆ ಹಾಕಿದ್ದಾಯ್ತು...ಏನಾದ್ರೂ ಹೆಚ್ಚು ಕಮ್ಮಿ

ಆದ್ರೆ, ನಂಗೆ ತಾನೆ ಪ್ರಾಬ್ಲಮ್ಮು..'' ಎಂದು ಹೇಳಿದ್ದು ಕೇಳಿಸಿತು. ''ಪ್ರಾಬ್ಲಮ್ಮು ನಿಂದೊಬ್ಬಳದ್ದೆ ಅನ್ನೊ ಹಾಗೆ ಹೇಳ್ತಿದೀಯಲ್ಲ?... ನಂಗೂ ಅಷ್ಟೆ... ನಂಗೇನೂ-ನಿಂಗೇನೂ, ಇಬ್ಬರಿಗೂ ಜವಾಬ್ದಾರಿ ಹೆಚ್ಚು, ನಿಭಾಯಿಸೋದು ಕಷ್ಟ, ಹಾಗೆ ಹೇಳು'' ಎಂದವನು ಹೇಳಿದ್ದಕ್ಕೆ ಕೂಡಲೆ, ''ನಡೀರಿ.... ಇನ್ನೇನೂ ಮಾತು ಬೇಡ, ಇವತ್ತು ಆ ಕೆಲಸ ಪೂರೈಸಲೇಬೇಕು. ಡಿಸೈಡ್ ಮಾಡಿ... ಲೇಟ್ ಮಾಡ್ಕೊಬೇಡಿ ಅಂತ ಡಾಕ್ಟರ್ ಹೇಳಿರಲಿಲ್ಲ?'' ಎಂದಳು ರೇಖಾ.

ಸ್ವಲ್ಪ ಹೊತ್ತಿನಲ್ಲೆ ಅವರು ತರಾತುರಿಯಿಂದ ತಯಾರಾಗಿ ಹೊರಟಾಗ ರೇಖಾ, ''ಮಾವಯ್ಯಾ, ಅರವಿಂದ ಬಂದಮೇಲೆ ಮಾಡಿಟ್ಟರೂ ಅವಲಕ್ಕಿ ಇದೆ... ತೊಗೊಳ್ಳಕ್ಕೆ ಹೇಳಿ... ಟೇಬಲ್ಲಿನ ಮೇಲೆ ಇಟ್ಟಿದೀನಿ... ನಾವೂ ಅಷ್ಟರೊಳಗೆ ಬಂದು ಬಿಡ್ತೀವಿ'' ಎಂದಳು. 'ಏನೋ ಮುಖ್ಯವಾದದ್ದು ಇರಬೇಕು... ಅವರಿಗಿಷ್ಟ ಬಂದದ್ದನ್ನು ಮಾಡಲಿ. ನಾನೇಕೆ ತಿಳಿಯದ ವಿಷಯದಲ್ಲಿ ಮೂಗು ತೂರಿಸಲಿ' ಎಂದುಕೊಂಡು ಬಾಗಿಲು ಹಾಕಿಕೊಳ್ಳಲು ಹೋದಾಗ, ಮೋಡ ಒಟ್ಟಾಗುತ್ತಿರುವುದನ್ನು ಗಮನಿಸಿದರು ನಂಜುಂಡಯ್ಯ.

ಹಾಲಿನಲ್ಲಿ ಬಂದು, ಕತ್ತು ಸರಿ ಮಾಡಿಕೊಳ್ಳುತ್ತ ಟೀವಿಯಲ್ಲಿ ನ್ಯೂಸ್ ಕೇಳಿದರೂ ಈ ಮುಂಚೆ ಶುರುವಾದ ಚಡಪಡಿಕೆ ಕಡಿಮೆಯಾಗಲಿಲ್ಲ. ಆಗಲೇ ಅವರಿಗೆ ಅರಿವಾದದ್ದು, ತಾವು ದಿನನಿತ್ಯದಂತೆ ಪೇಪರ್ ಓದದೇ ಇರುವ ವಿಷಯ. 'ಛೆ... ಇಷ್ಟು ಹೊಳೀಲಿಲ್ಲವಲ್ಲ... ನಂಗೇನಾಗಿದೆ?' ಎಂದು ಕನ್ನಡಕ ಇಡುವ ಸ್ಥಳದಲ್ಲಿ ನೋಡಿದರೆ, ಅದು ಅಲ್ಲಿ ಕಾಣಲಿಲ್ಲ. ಹಾಲಿನಲ್ಲಿ, ಶೋ ಕೇಸಿನಲ್ಲಿ ಹುಡುಕಿದಾಗ ಸಿಕ್ಕಲಿಲ್ಲ. ಕೊಂಚ ಆತಂಕದಿಂದ, ಫ್ರಿಜ್ ಮೇಲೆ ನೋಡಿದಾಗ ಸಿಕ್ಕರೂ, ಅದನ್ನು ತೆಗೆದುಕೊಳ್ಳುವಾಗ ಪಕ್ಕದಲ್ಲಿದ್ದ ಚಿಕ್ಕ ಫೈಲೊಂದು ಕೆಳಗೆ ಬಿತ್ತು. ನಂಜುಂಡಯ್ಯ ಕನ್ನಡಕ ಹಾಕಿಕೊಂಡು, ಅಕಾರಣವಾಗಿ ಆ ಫೈಲಿನ ಹಾಳೆಗಳ ಮೇಲೆ ಕಣ್ಣಾಡಿಸಿದರು. ತಕ್ಷಣವೇ ಅವರಿಗೆ ಮೈ ಕೊಂಚ ಬಿಸಿಯಾಯಿತು. 'ಹೀಗೋ ಸಮಾಚಾರ... ಎಲ್ಲ ಅವಿವೇಕ... ಹಾಳು ಕೆಲಸ... ಈಗಿನ ಕಾಲದೋರ ಆಲೋಚನೆಯೇ ಅರ್ಥವಾಗಲ್ಲ... ಒಂದಕ್ಕೇ ಇವರು ಸುಸ್ತು... ಮತ್ತೊಂದು ಬೇಡವೇ ಬೇಡ... ಮೈ ಇಳಿಸಿಕೊಳ್ಳೋದೇ ಇವರ ಜಾಣತನ...' ಎಂದು ಏನೂ ಕೈಲಾಗದವರಂತೆ ಅದನ್ನು ಪಕ್ಕಕ್ಕಿಟ್ಟರು. ನಂತರ ಮತ್ತೆ ಕತ್ತು ನೀವಿಕೊಂಡು ಡಾಕ್ಟರು ಮತ್ತು ನರ್ಸಿಂಗ್ ಹೋಮಿನ ವಿಳಾಸ ನೋಡಿದರು. ತಕ್ಷಣ, ಡಾಕ್ಟರು ಗುಂಡಪ್ಪನ ಮಗಳಲ್ಲವೇ ಎಂದುಕೊಂಡು, ತಾವು ನರ್ಸಿಂಗ್ ಹೋಮಿನ ಉದ್ಘಾಟನೆಗೆ ಹೋದದ್ದು ನೆನಪಾಯಿತು. ಅವರಿಗೊಂದು ಆಲೋಚನೆ ಹೊಳೆದು ಒಂದೊಂದು ಕ್ಷಣವೂ ಮುಖ್ಯವೆನಿಸಿತು.

ಮೊದಲು ಆಫೀಸಿಗೆ ಫೋನ್ ಮಾಡಿ ಗುಂಡಪ್ಪನನ್ನು ಕೇಳಿದರು. ಆದರೆ ಸಿಕ್ಕವನು ರಘುನಾಥ. ''ಏನ್ ನಂಜುಂಡೀ... ಗುಂಡಪ್ಪನ್ನ ವಿಚಾರಿಸಿಕೊಳ್ತಿದೀಯ. ಅವನಿಲ್ಲ ಆನ್ ಡ್ಯೂಟಿ ಹೋಗಿದ್ದಾನೆ. ಮಧ್ಯಾನ್ಹದ ಮೇಲೆ ಸಿಗ್ತಾನೆ. ಆದೇನಿದ್ರೂ ಹೇಳು ಪರವಾಗಿಲ್ಲ. ಬಂದ ತಕ್ಷಣ ಫೋನ್ ಮಾಡಕ್ಕೆ ಹೇಳ್ತೀನಿ'' ಎಂದ. ಕೊಂಚ ಪೆಚ್ಚಾದ ನಂಜುಂಡಯ್ಯ, ''ಸುಮ್ನೇ ಕೇಳಿದೆ ಅಷ್ಟೆ.. ಆಮೇಲೆ ನಾನೇ ಫೋನ್ ಮಾಡ್ತೀನಿ'' ಎಂದರು. ತಕ್ಷಣವೇ ನರ್ಸಿಂಗ್ ಹೋಮಿಗೆ ಫೋನ್ ಮಾಡಿದರು. ಅಲ್ಲಿನ ರಿಸೆಪ್ಷನಿಸ್ಟ್‌ಗೆ ತಾವು ಡಾಕ್ಟರ್ ರಾಧಾ ಅವರ ತಂದೆಯ ಸ್ನೇಹಿತರೆಂದು ಹೇಳಿ, ಅರ್ಜೆಂಟಾಗಿ ಅವರ ಜೊತೆ ಮಾತನಾಡಬೇಕು ಎಂದು ಹೇಳಿದ್ದಕ್ಕೆ ಕೆಲವು ಕ್ಷಣಗಳ ನಂತರ ಆ ಕಡೆಯಿಂದ ಡಾಕ್ಟರ್ ರಾಧಾ, ''ಗೊತ್ತಾಯ್ತು, ನಮ್ಮ ತಂದೆ ಆಗಾಗ ಹೇಳ್ತಿರ್ತಾರೆ... ಏನಾಗಬೇಕಿತ್ತು...?'' ಎಂದು ಕೇಳಿದ್ದಕ್ಕೆ ಅವರು, ''ಏನಿಲ್ಲ... ನನ್ನ ಮಗ ಶಿವರಾಮ, ಸೊಸೆ ರೇಖಾ ಅಲ್ಲಿಗೆ ಈಗ ಬರ್ತಾರೆ. ಹೇಗಾದ್ರೂ ಸರಿ ಸೇವ್ ಮಾಡಬೇಕು... ನಾನು ಬರೋವರೆಗೂ ದಯವಿಟ್ಟು ನೀವೇನೂ ಆಕ್ಷನ್ ತೊಗೊಬೇಡಿ. ಎಲ್ಲಾದನ್ನೂ ಫೋನ್‌ನಲ್ಲಿ ಹೇಳಕ್ಕೆ ಆಗಲ್ಲ... ಪ್ಲೀಸ್ ಪ್ಲೀಸ್'' ಎಂದರು. ''ಯು ಆರ್ ವೆಲ್ಕಮ್... ದಯವಿಟ್ಟು ಬನ್ನಿ... ಇಟ್ ವಿಲ್ ಬಿ ಎ ಪ್ಲೆಝರ್ ಟು

ಮೀಟ್ ಯು...'' ಎಂದಳು ರಾಧಾ.

ಎರಡು ನಿಮಿಷದಲ್ಲಿ ತಯಾರಾಗಿ ನಂಜುಂಡಯ್ಯ, ಕೊಡೆ ಹಿಡಿದು ಹೊರಟರು. ತಾವು ನರ್ಸಿಂಗ್ ಹೋಮಿಗೆ ಹೋಗಿ ಬರುವುದರೊಳಗೆ ಅರವಿಂದ ಬಂದುಬಿಟ್ಟರೆ ಎಂಬ ಆತಂಕ ಮೂಡಿ, ಪಕ್ಕದ ಮನೆಯವರಿಗೆ ಕೀ ಕೊಡುವಾಗ, ರಾಧಾ ತಮಗೆ ಹೇಳಿದ್ದನ್ನು ಅವರಿಗೆ ತಿಳಿಸಿದರು.

ಮನೆ ಮುಂದಿನ ರಸ್ತೆ ದಾಟಿ ಪಕ್ಕಕ್ಕೆ ಹೋಗುತ್ತಿದಂತೆಯೇ, ಮುಂಗೈ ಮೇಲೆ ಹನಿ ಬಿದ್ದದ್ದನ್ನು ನೋಡಿ ಕತ್ತೆತ್ತಿದರು. ಮೋಡ ಆವರಿಸಿ ಕೊಂಡಿತ್ತು. ಆಟೋ ಸಿಗುವಲ್ಲಿಗೆ ಹೋಗುವಷ್ಟರಲ್ಲಿ ಮಳೆ ಹನಿಯಲಾರಂಭಿಸಿತು. ಸಿಕ್ಕ ಆಟೋದವ ನೊಬ್ಬ ತಾವು ಹೋಗಬೇಕಾದ ಕಡೆ ಬರುವುದಿಲ್ಲ ಎಂದ. ಮತ್ತೊಬ್ಬ, 'ಎರಡರಷ್ಟು' ಎಂದಾಗ ನಂಜುಂಡಯ್ಯ ಜೇಬಲ್ಲಿ ನೋಡಿಕೊಂಡರು. ಗಡಿಬಿಡಿಯಲ್ಲಿ ಅವರದಕ್ಕೆ ಸಿದ್ಧರಾಗಿರಲಿಲ್ಲ. 'ನಂಗೇನು ಮಂಕು ಮುಚ್ಚಿಕೊಂಡಿತೇ' ಎಂದು ಕೊಂಡರು. ಬಸ್ ಬರುತಿದ್ದುದನ್ನು ಕಂಡು, ಏದುಸಿರು ಬರುವಂತೆ ದಾಪುಗಾಲು ಹಾಕಿ ಸ್ಟಾಪಿಗೆ ಹೋಗಿ ನಿಂತರು. ಅಲ್ಲಿ ಸಾಕಷ್ಟು ಜನರಿದ್ದರು. ಬಸ್ ನಿಂತ ಕೂಡಲೆ, ಹತ್ತಲು ನೂಕುನುಗ್ಗಲು. ಕೊಡೆ ಮಡಿಸಿಟ್ಟು, ಅವರ ನಡುವೆ ತೂರಿ ಹತ್ತುವ ನುಗ್ಗಾಟದಲ್ಲಿ ಎಡಗಾಲಿನ ಚಪ್ಪಲಿ ಕಳಚಿ ಹೋಯಿತು. ಅದು ಗಮನಕ್ಕೆ ಬಂದು ಒಮ್ಮೆ ಆ ಕಡೆ ನೋಡಿದರು. ತಮ್ಮ ಕಾಲು ತಮಗೇ ಕಾಣದಷ್ಟು ಜನರ ಒತ್ತಡವಿದ್ದು, ಪ್ರಯಾಸದಿಂದ ಕರ್ಚೀಫು ತೆಗೆದು ಮುಖ ಒರೆಸಿಕೊಂಡರು. ಇನ್ನು ಈ ಗೊಂದಲದಲ್ಲಿ ಚಪ್ಪಲಿ ಸಿಗುವ ಮಾತೇ ಇಲ್ಲ ಎಂದುಕೊಂಡು, ಇಳಿಯುವಾಗ ಒಂದು ಕಾಲಿಗೆ ಚಪ್ಪಲಿ ಹಾಕಿಕೊಂಡಿರಲು ಮುಜುಗರವಾಗಿ, ಅದನ್ನು ನಿಂತಲ್ಲಿಯೇ ಕಳಚಿದರು.

ಸ್ಟಾಪಿನಲ್ಲಿ ಇಳಿದ ಮೇಲೆ, ಕೊಡೆ ಏರಿಸಿ ಹೊರಟರು. ಬರಿಗಾಲಲ್ಲಿ ನಡೆಯುವಾಗ, ಅತ್ತಿತ್ತ ನಡೆಯುತ್ತಿದ್ದವರ ಚಪ್ಪಲಿ-ಶೂಗಳ ಮೇಲೆಯೇ ಹೆಚ್ಚು ಗಮನವಿದ್ದದ್ದು ಅವರಿಗೆ ಕುತೂಹಲವೆನಿಸಿತು. ಎದುರಿಗೇ ನರ್ಸಿಂಗ್ ಹೋಮ್ ಕಾಣುತ್ತಿದ್ದರೂ, ಮಳೆಯಲ್ಲಿ, ವಾಹನಗಳ ಓಡಾಟದಲ್ಲಿ, ರಸ್ತೆ ದಾಟಬೇಕಾದರೆ ಅವರಿಗೆ ಸಾಕುಸಾಕಾಯಿತು. ಅಲ್ಲಿಗೆ ತಲುಪಿದ್ದರಿಂದಲೇ ತಮ್ಮ ಕೆಲಸ ಆಯಿತೆಂದು ತಿಳಿದರು.

ಒಳಗೆ ಹೋಗಿ ಪರಿಚಯ ಹೇಳಿಕೊಂಡು ಡಾಕ್ಟರ್ ರಾಧಾ ಬರಲು ಹೇಳಿದ್ದಾರೆಂದರು. ''ಆಗ್ಲಿ ಸಾರ್, ನಿಮ್ಮ ಕಾರ್ಡ್ ಕೊಡಿ ಡಾಕ್ಟರ್‌ಗೆ ಕೊಡ್ತೀನಿ'' ಎಂದಳು ರಿಸೆಪ್ಷನಿಸ್ಟ್. ಕೊಂಚ ಗಲಿಬಿಲಿಗೊಂಡು ಅಲ್ಲಿದ್ದ ಪೇಪರ್ ತುಂಡಿನ ಮೇಲೆ ಹೆಸರು ಬರೆದುಕೊಟ್ಟರು ನಂಜುಂಡಯ್ಯ. ಒಳಗೆ ಹೋಗಿ ಬಂದ ಆಕೆ, ಅವರು ಹೋಗಲು ಸನ್ನೆ ಮಾಡಿದಳು.

''ಕೂತ್ಕೊಳ್ಳಿ... ನಮ್ಮ ತಂದೆ ನಿಮ್ಮ ವಿಷಯ ಏನೇನೋ ಹೇಳಿದ್ದಾರೆ... ನಂಗೆ ನಿಮ್ಮನ್ನ ಮೀಟ್ ಮಾಡಕ್ಕೆ ಅಕೇಶನ್ ಸಿಕ್ಕಿರಲಿಲ್ಲ... ಹೇಳಿ ನನ್ನಿಂದ ಏನಾಗ್ಬೇಕು...''

''ಅದೇ ಹೇಳಿದ್ನಲ್ಲ, ನನ್ನ ಮಗ-ಸೊಸೆ ಬರಬಹುದು ಅಂತ...''

''ಶಿವರಾಮ್ ಮತ್ತು ಮಿಸೆಸ್ ರೇಖಾ ಅವರಲ್ಲವೇ... ಅವರು ನಿಮ್ಮವರು ಅಂತ ತಿಳಿದ ಮೇಲೆ ಬೇರೆ ಕೇಸಿಗಿಂತ ಮೊದಲು ತೊಗೊಂಡು, ಏನೂ ತೊಂದರೆ ಆಗದಂತೆ ಎಲ್ಲಾ ಮುಗಿಸಿದೆ. ಮನೇಲೇ ರೆಸ್ಟ್ ತೊಗೋತಾರಂತೆ... ಈಗಷ್ಟೆ ಹೊರಟರು'' ಎಂದು ಪೋನೆತ್ತಿಕೊಂಡು ಚುಟುಕಾಗಿ ಮಾತಾಡಿದಳು

''ಏನು ಹಾಗಂದ್ರೆ?... ಅಲ್ಲ ನಾನು ಹೇಳಿದ್ದೂ...'', ಅರ್ಥವಾಗದೆ ನಂಜುಂಡಯ್ಯ ರಾಧಾಳ ಕಣ್ಣನ್ನು ನೋಡಿದರು.

''ಅಬಾರ್ಷನ್ ತುಂಬ ಸೇಫಾಗಿರಬೇಕೂಂತ ತಾನೆ ನೀವು ಹೇಳಿದ್ದು, ಜೊತೆಗೆ ನಿಮ್ಮ ಮಗ-ಸೊಸೆ ಇಷ್ಟಪಟ್ಟದ್ದು?... ಹಾಗೇನೇ ಮಾಡಾಯ್ತು... ಟೋಟಲಿ ಸೇಫ್... ನೀವೇನೂ ಯೋಚನೆ ಮಾಡ್ಬೇಡಿ.... ನಾನು ನಿಮ್ಮನ್ನ ನಿಜಕ್ಕೂ ಅಪ್ರೀಷಿಯೇಟ್ ಮಾಡ್ತೀನಿ. ಯಾಕಂದರೆ ಈಗಿನ ಕಾಲದವರು ಒಂದೇ ಮಗು ಸಾಕೂ ಅಂತ ಡಿಸೈಡ್ ಮಾಡೋದು ತೀರ ಸಾಮಾನ್ಯ... ಆದ್ರೆ ನೀವೂ ಕೂಡ ಅದನ್ನ ಸಪೋರ್ಟ್ ಮಾಡಿರೋದು ಅಪರೂಪ....''

''ನಾನು ಹೇಳೋದೂ... ನೀವು ಒಂದು ಸ್ವಲ್ಪ... ನಾನು ಬರೋವರ್ಗೂ...'', ಪೆಚ್ಚಾದ ನಂಜುಂಡಯ್ಯ ಮೆಲುದನಿಯಲ್ಲಿ ಹೇಳಿದರು.

''ನೋಡಿ... ಗಡಿಬಿಡಿನಲ್ಲಿ ನೀವಿಲ್ಲಿಗೆ ಬರೋ ದನ್ನ ಅವರಿಗೆ ಹೇಳೋದು ಮರೆತು ಬಿಟ್ಟೆ... ಇನ್ನೇನು ಬಿಡಿ, ಎಲ್ಲಾ ಸರಿ ಹೋಗಿದೆಯಲ್ಲ''

''ಆಯ್ತು... ಈಗ ಇನ್ನು ಮಾತಾಡಕ್ಕೆ ಏನಿದೆ... ಥ್ಯಾಂಕ್ಸ್...'' ಎಂದು ತಮ್ಮೊಳಗಿದ್ದುದನ್ನು ವ್ಯಕ್ತಪಡಿಸುವುದರ ನಿರರ್ಥಕತೆಯನ್ನು ಮನಗಂಡು, ಡಾಕ್ಟರ್ ರಾಧಾಳ ಮುಖವನ್ನು ನೋಡಿಯೂ ನೋಡದವರಂತೆ ಹೇಳಿ ಎದ್ದರು. ಅವರ ಕೆನ್ನೆಗಳ ಸ್ನಾಯುಗಳ ಚಲನೆಯಿಂದ ಕೊಂಚ ವಿಚಲಿತಳಾದ ಅವಳು, ''ಎನಿಥಿಂಗ್ ರಾಂಗ್?'' ಎಂದು ಕೇಳಿದಳು.

''ಇಲ್ಲ ಇಲ್ಲ, ಏನೂ ಇಲ್ಲ'' ಎನ್ನುತ್ತಾ ಪಕ್ಕಕ್ಕ ಹೆಜ್ಜೆ ಇಟ್ಟರು. ಈಗ ತಡ ಆಗಿದೆ ಎಂದು ಅವಳಿಂದ ಹೇಳಿಸಿ, ಮಗು ಉಳಿಯುವಂತೆ ಮಾಡಬೇಕೆಂಬ ತಮ್ಮ ಅಭಿಲಾಷೆ ನೆಲಸಮವಾದದ್ದನ್ನು ಅರಗಿಸಿ ಕೊಳ್ಳುತ್ತ, ನರ್ಸಿಂಗ್ ಹೋಮ್ ಬಾಗಿಲಲ್ಲಿ ನಿಂತು ಹೊರಗೆ ನೋಡಿದರು. ಮಳೆ ಜೋರಾಗಿ ಸುರಿಯುತ್ತಿತ್ತು. ಅಲ್ಲಿ ನಿಂತಿರಲು ಮನಸ್ಸಾಗದೆ ನಂಜುಂಡಯ್ಯ ಹೊರಗೆ ಕಾಲಿಟ್ಟರು. ಕೈಯಲ್ಲಿದ್ದ ಕೊಡೆ ಬಿಚ್ಚಬೇಕೆಂದು ತಕ್ಷಣ ಹೊಳೆಯದೆ ಪೂರ್ತಿ ತೊಯ್ದುಹೋದರು. ಏನೋ ಗೊಂದಲ ಉಂಟಾಗಿ ತಲೆಯೆತ್ತಿದ ಅವರ ಬಲ ಕಣ್ಣೊಳಗೆ ಮಳೆ ಹನಿ ಬಿದ್ದು, ಅವರಿಗೆ ಕಂಡದ್ದೆಲ್ಲವೂ ನೀರೇ ನೀರು. ಮನೆಗೆ ಬಂದ ಮೇಲೆ ಮತ್ತು ನಂತರ ಅವರು ಈ ವಿಷಯವನ್ನು ಪ್ರಸ್ತಾಪಿಸುವ ಸಾಧ್ಯತೆಯೇ ಇರಲಿಲ್ಲ. ಈ ಮಧ್ಯೆ ಶಿವರಾಮು, ರೇಖಾ ಏನೂ ಆಗದವ ರಂತಿದ್ದು ಮನೆ ಬದಲಾವಣೆಯಲ್ಲಿ ಮುಳುಗಿದ್ದರು.

ಮಾರನೆಯ ದಿನದಿಂದ ಹೊಸ ಮನೆಗೆ ಹೋಗುವ ಸಿದ್ಧತೆ ಪ್ರಾರಂಭವಾಯಿತು. ಆರು ವರ್ಷ ಅದೇ ಮನೆಯಲ್ಲಿ ಇದ್ದುದರಿಂದ, ತೆಗೆದುಕೊಂಡು ಹೋಗಬೇಕಾದ ವಸ್ತುಗಳನ್ನು ಒಪ್ಪಮಾಡಿ ಜೋಡಿಸಿಡುವುದಕ್ಕಿಂತ, ಬೇಕಿಲ್ಲದ ವಸ್ತುಗಳನ್ನು ಎಸೆಯುವುದಕ್ಕೇ ಹೆಚ್ಚು ಸಮಯ ಹಿಡಿಯಲಾರಂಭಿಸಿತು. ನಂಜುಂಡಯ್ಯ ತಮಗೆ ಸಂಬಂಧಿಸಿದ ವಸ್ತುಗಳನ್ನು ವಿಂಗಡಿಸಿದರು. ಹೀಗೆ ಮಾಡುವಾಗ, ಸೂಟ್‌ಕೇಸ್ ಕೊಡವಿ, ಅದರಲ್ಲಿ ಇದ್ದವುಗಳನ್ನು ಹರಡಿದರು. ಸೂಟ್‌ಕೇಸಿನಿಂದ ನಾಲ್ಕಾರು ಜಿರಲೆಗಳು ಎತ್ತೆಂದರತ್ತ ಓಡಿದವು. ಒಳಗೆ ಸುತ್ತಲೂ ಸಾಲುಗಟ್ಟಿದ್ದ ಜಿರಲೆ ಮೊಟ್ಟೆಗಳನ್ನು ಕಡ್ಡಿಯಿಂದ ಕಿತ್ತರು. ದಶಕಗಳ ಹಿಂದೆ ಬಂದ ಪ್ರಶಸ್ತಿ, ಪುರಸ್ಕಾರ ಕುರಿತು ಪತ್ರಗಳು. ಅವುಗಳೀಗ ಕಂದು ಬಣ್ಣಕ್ಕೆ ತಿರುಗಿದ್ದವು. ನಡುನಡುವೆ ಕಿತ್ತರೂ ಗುರುತು ಬಿಡದ ಜಿರಲೆ ಮೊಟ್ಟೆಗಳು. ಒಂದೆರಡನ್ನು ಕಣ್ಣು ಕಿರಿದು ಮಾಡಿ ಓದಿದರು. ನೆನಪಾಯಿತು, ನಿಜ. ಆದರೆ ಅದನ್ನು ವಿತರಿಸುವಾಗ ತಮ್ಮನ್ನೇ ಪ್ರೇಕ್ಷಕರಲ್ಲಿ ಒಬ್ಬರಾಗಿ ನೋಡಿದ ಹಾಗೆ. ಇನ್ನು ಇತರ ಕಾಗದಗಳ ಮೇಲೆ ಕಣ್ಣಾಡಿಸಿದರು. ತಮಗೆ ಎಳ್ಳಷ್ಟೂ ಪರಿಚಯ ಇಲ್ಲದವರದ್ದು. ಅವರಿಗೆ ಏನೂ ಅನಿಸಲಿಲ್ಲ. ಸುಮ್ಮನೆ ಎಲ್ಲವನ್ನೂ ಮೂಲೆಗೆಸೆದರು.

ಸ್ವಲ್ಪ ಸಮಯ ಎದುರುಗಡೆಯ ಮಾಸಿದ ಗೋಡೆಯನ್ನು ಅನ್ಯಮನಸ್ಕರಾಗಿ ನೋಡುತ್ತ ಕುಳಿತರು. ನಂತರ ಮೆಲ್ಲನೆ ತಲೆ ಕೊಡವಿ ಏನೂ ಆಗದವರಂತೆ ಎದ್ದರು. ಈಗ ನೆಗಟಿವ್ ರೋಲು ಗಳಿರುವ ಪ್ಲಾಸ್ಟಿಕ್ ಡಬ್ಬಿಯನ್ನು ತೆಗೆದುಕೊಂಡರು. ಅದರಿಂದ ಒಂದೊಂದನ್ನೂ ತೆಗೆದು ಬೆಳಕಿಗೆ ಹಿಡಿದು ನೋಡಿದರು. ಕೆಲವು ಮನಸ್ಸಿನ ಕಟ್ಟೆಯ ಮೇಲೆ ಕೂರುವ ಮುಂಚೆಯೇ ಜಾರಿ ಉರುಳಿದವು. ಹಲವು, ಸ್ವಲ್ಪ ಸಮಯ ಕೂತರೂ



ಗುಟ್ಟು ಬಿಟ್ಟುಕೊಡದೆ ಹೋದವು. ಮತ್ತೆ ಕೆಲವು, ಒಗಟಿನಂತೆ ಮಾತನಾಡಿ ಏನೂ ಬಗೆಹರಿಯದ ದಾರಿ ಹಿಡಿದವು. ಗುರುತು ಹಿಡಿದರೂ, ತುಟಿ ಹೊಲಿದುಕೊಂಡು, ಬಾಯಿ ಬಿಡದ ಪಾಪಸಾದವು, ಸಾಕಷ್ಟು. ಮನಸ್ಸಿನ ಕಟ್ಟೆಯ ಮೇಲೆ ನಕ್ಕು ಕುಳಿತರೂ ವಿಶ್ವಾಸ ಗಳಿಸದೆಹೋದವು ಇನ್ನಷ್ಟು. ಕಂಡೊಡನೆ ಹಂಬಲಿಸಿ, ದುಂಬಾಲು ಬಿದ್ದವು ಬೆರಳೆಣಿಕೆಯಷ್ಟು ಮಾತ್ರ. ಅಂಥವನ್ನು ಟೇಬಲ್ಲಿನ ಮೇಲಿಟ್ಟರು. ಉಳಿದವನ್ನು ಮತ್ತೆ ಡಬ್ಬಿಗೆ ಹಾಕಿದರು. ಎದ್ದು, ಒಮ್ಮೆ ನಿಧಾನ ಉಸಿರೆಳೆದು-ಬಿಟ್ಟು, ಮಂಚದ ಮೇಲೆ ಕಾಲು ಚಾಚಿದರು.

ಅವರಿಗೆ ಸುಮ್ಮನಿರಲಾಗಲಿಲ್ಲ. ಹಾಗೆಯೇ ಮೂಲೆ, ಡಬ್ಬಿ, ಟೇಬಲ್ಲಿನ ಕಡೆ ತಡೆತಡೆದು ನೋಡಿದರು. ಮತ್ತೆ ಎದ್ದು, ಮೂಲೆಯಲ್ಲಿ ಬಿಸುಡಿದ್ದನ್ನು ಡಬ್ಬಿಗೆ ಹಾಕಿದರು. ಉಟ್ಟ ಪಂಚೆಯೇ ಸಾಕೆಂದು, ಮೇಲೆ ಶರಟು ತೊಟ್ಟು ಡಬ್ಬಿ ಹಿಡಿದು ರೂಮು ದಾಟಿದರು. ಅಲ್ಲಿಂದ ಮತ್ತೆ ತಿರುಗಿ ಟೇಬಲ್ಲಿನ ಕಡೆ ನೋಡಿದರು. ಕ್ಷಣ ಕಾಲ ನಿಂತು, ಒಳಗೆ ಬಂದು ಅವುಗಳನ್ನೂ ಡಬ್ಬಿಗೆ ತುರುಕಿದರು. ಮಂದ ಬೆಳಕಿದ್ದ ರಸ್ತೆಯಲ್ಲಿ ಹೋಗಿ, ಮೂಲೆಯ ತಿಪ್ಪೆಗೆ ಅಷ್ಟನ್ನೂ ಎಸೆದು, ಒಮ್ಮೆ ಉಗುಳು ನುಂಗಿ ಒಂದೆರಡು ಕ್ಷಣ ನಿಂತರು. ಆ ಸಂದರ್ಭದಲ್ಲಿ ಅವರಿಗೆ ಆಚೀಚಿನ ಯಾವ ಶಬ್ದವೂ, ನೋಟವೂ ಅರಿವಿಗೆ ಬರಲಿಲ್ಲ. ಹಿಂದಕ್ಕೆ ಹೆಜ್ಜೆಯಿಟ್ಟ ನಂತರ ತಟ್ಟನೆ ಅವರಿಗೆ ನಮ್ರತಾ ನೆನಪಾದಳು. ಮುಖ್ಯವಾಗಿ ಅವಳ ಕಣ್ಣು, ತುಟಿ, ಮುಂಗುರುಳು; ನಂತರ ಒಟ್ಟಾರೆ ಆಕಾರ. ಅವರಿಗೆ ಮದುವೆಗೆ ಮುಂಚೆ ಮತ್ತು ಅನಂತರವೂ ಈ ಬಗೆಯ ಉತ್ಕಟತೆ ಉಂಟಾದ ಸಮಯದಲ್ಲೆಲ್ಲ ಹೀಗಾಗಿದೆ. ತಮಗೆ ನಮ್ರತಾಳ ಮೇಲೆ ಪ್ರೇಮವಿದ್ದೂ ಅದರ ತೀವ್ರತೆ ಅರಿವಾಗದೆ, ಆ ವಿಷಯದಲ್ಲಿ ತಮ್ಮದು ಹೀನಾಯ ಸೋಲು ಎಂದು ಸುಮ್ಮನೆ ಹಿಂಸೆಪಟ್ಟು ಕೊಂಡಿದ್ದಾರೆ.

ಹೊಸ ಮನೆಗೆ ಹೊರಡುವ ತಯಾರಿ ಮುಗಿದಿತ್ತು. ಆ ದಿನ ಶಿವರಾಮ ಮತ್ತು ರೇಖಾ ಸಡಗರದಿಂದಿದ್ದರು. ಅರವಿಂದನ ಖುಷಿ ಅವನ ಮುಖದಲ್ಲೆಲ್ಲ ಹರಡಿತ್ತು. ಆದರೆ ಹೇಳಿದ ಸಮಯಕ್ಕೆ ಟೆಂಪೋ ಬರಲಿಲ್ಲ. ಜೊತೆಗೆ ಆಕಾಶದಲ್ಲಿ



ಒಟ್ಟಾಗುತ್ತಿದ್ದ ಕಪ್ಪು ಮೋಡ. ಇವೆರಡೂ ಆತಂಕಕ್ಕೆ ಕಾರಣವಾಯಿತು. ಶಿವರಾಮ ಮಾತನಾಡಿಸಿದರೆ ಎಗರಿ ಬೀಳುವ ಸ್ಥಿತಿ ತಲುಪಿದ್ದ. ಒಂದೆರಡು ಸಲ ಅರವಿಂದ ಅವನಿಂದ ಗದರಿಸಿಕೊಂಡದ್ದೂ ಆಯಿತು. 'ಮನೆ ಏನು ಮಾಡುತ್ತೆ.... ಮನಸ್ಥಿತಿ ಮುಖ್ಯವಲ್ಲವೇ' ಎಂದು ನಂಜುಂಡಯ್ಯ ಗಂಟೆಗಳು ಉರುಳುವುದನ್ನು ನೋಡುತ್ತ ಕುಳಿತರು.

ಮಧ್ಯಾಹ್ನ ಟೆಂಪೋ ಬಂದ ಮೇಲೆ ಎಲ್ಲಕ್ಕೂ ತರಾತುರಿ. ಏಕೋ ಅರವಿಂದ ಸಪ್ಪೆಮುಖ ಮಾಡಿಕೊಂಡಿದ್ದ. ನಂಜುಂಡಯ್ಯ ಅವನನ್ನು ಕರೆದು, ''ಯಾಕೋ ಮೂತಿ ಊದಿಕೊಂಡಿದೆ'' ಎಂದಿದ್ದಕ್ಕೆ ಅವನು, ''ನನ್ನ ಗೋಲಿ ಡಬ್ಬ ಸಿಗ್ಲೇಯಿಲ್ಲ'' ಎಂದ. ''ಓ... ಅದಾ... ಅದು ಹೇಗೋ ನನ್ನ ಸಾಮಾನಿನ ಜೊತೆ ಸೇರಿಕೊಂಡು ಬಿಟ್ಟಿದೆ. ಆಮೇಲೆ ಕೊಡ್ತೀನಿ'' ಎಂದಾಗ ಅವನು ಗೆಲುವಾದ. ಶಿವರಾಮ ಇನ್ನಷ್ಟು ಅವಸರಪಡಿಸಿ, ಟೆಂಪೋ ಹೊರಟ ನಂತರ, ಅಷ್ಟು ವರ್ಷದ ಪರಿಚಿತ ರಸ್ತೆ, ಮರಗಳು ಕಮ್ಮಿ ಬೆಳಕಿನಲ್ಲಿ ಜೋಬದ್ರಗಳಂತೆ ಕಂಡವು.

ಸಾಮಾನುಗಳನ್ನು ಇಳಿಸಿಕೊಂಡು ಅರ್ಧ ಗಂಟೆ ಕಳೆಯುವುದರೊಳಗೆ ಪ್ರಾರಂಭವಾಯಿತು, ಎಲ್ಲರೂ ಕೊಚ್ಚಿ ಹೋಗುವಂಥ ಆರ್ಭಟದ ಮಳೆ. ರಸ್ತೆ,

ಫುಟ್ ಪಾತುಗಳು ಮುಳುಗಿಹೋದ ಮಳೆ.

ನಂಜುಂಡಯ್ಯ ಪಕ್ಕದ ಮನೆಯಾತನನ್ನು ಕಂಡದ್ದು ಮಾರನೆಯ ದಿನ ಬೆಳಗ್ಗೆ. ಹೆಚ್ಚು-ಕಡಿಮೆ ತಮ್ಮ ಓರಗೆಯವರಂತಿದ್ದ ಅವರ ಕಣ್ಣು, ಮೂಗು, ಬಾಯಿ ಮತ್ತು ಒಟ್ಟಾರೆ ಅವರ ಆಕೃತಿ ಅವರನ್ನು ಪರಿಚಿತ ಮತ್ತು ಅಪರಿಚಿತಗಳ ಗೊಂದಲಕ್ಕೆ ಸಿಲುಕಿಸಿತು. ಮೂರು ಬಾರಿ ಒಬ್ಬರೊಬ್ಬರ ದೃಷ್ಟಿಗಳು ಸಂಧಿಸಿದವು. ಆ ವೇಳೆಗೆ ಸಂಕೋಚದ ಎಳೆಗಳು ಪುಡಿಯಾದವು. ನಂಜುಂಡಯ್ಯ ಅವರ ಹತ್ತಿರ ಹೋಗಿ ಮೆಲ್ಲನೆ, ''ಒಂದ್ನಿಮಿಷ...'' ಎಂದು ಗಮನ ಸೆಳೆದು, ''ನಿಮ್ಮನ್ನು ನೋಡಿದ್ರೆ ನನ್ನ ಹಳೇ ಸ್ನೇಹಿತರೊಬ್ಬರನ್ನ ನೋಡಿದ ಹಾಗಾಗತ್ತೆ...'' ಎಂದು ಶುರು ಮಾಡಿ, ಹೆಸರು, ಊರು, ಸ್ಕೂಲು, ಮುಂತಾದ ಮಾಹಿತಿಯನ್ನು ವಿನಿಮಯ ಮಾಡಿಕೊಂಡರು. ತಕ್ಷಣವೇ ನಂಜುಂಡಯ್ಯ, ''ನೀನು ನಮ್ಮ ರಾಜು ಅಲ್ವೇನೋ....'' ಎಂದು ಹೇಳಿ ಮುಗಿಸುವುದರೊಳಗೆ ಆತ, ''ಹೇಗಿದೀಯ ನಂಜುಂಡೀ...'' ಎಂದು ಏಕವಚನಕ್ಕೇ ಇಳಿದರು. ಇಬ್ಬರೂ ದಿಢೀರನೆ ಸಂಭವಿಸಿದ ಸಂಭ್ರಮದಿಂದ ಸಾವರಿಸಿಕೊಂಡು, ವಿಶದವಾದ ಮಾತಿಗೆ ರಾಜಪ್ಪ ಅವರ ಮನೆ ಸೇರಿದರು. ತಾವಿಬ್ಬರೂ ಹೈಸ್ಕೂಲು ಬಿಟ್ಟ ಮೇಲೆ ಬೇರೆಯಾದ ಸಂಗತಿ ಮತ್ತು ಆನಂತರ ಜರುಗಿದ ವೈಯಕ್ತಿಕ ವಿದ್ಯಮಾನಗಳನ್ನು ಮೊದಲು ಎತ್ತಿಕೊಂಡರು. ''ಮದುವೆಯಾಗಿ ಹತ್ತು ವರ್ಷವಾದ್ರೂ ಯಾಕೋ ನಂಗು ಅವಳ್ಗೂ ಹೊಂದಾಣಿಕೆ ಆಗ್ಲೇ ಇಲ್ಲ. ಈಗ ನನ್ನ ಪಾಡಿಗೆ ನಾನು, ಅವಳ ಪಾಡಿಗೆ ಅವಳು... ಅದೇನೋ ಮಕ್ಕಳಾಗಲಿಲ್ಲ. ಒಂದು ರೀತೀಲಿ ಅದೇ ಸರಿ'' ಎಂದು ತಮ್ಮ ಹೆಂಡತಿ ಬಗ್ಗೆ ಹೇಳಿದರು ರಾಜಪ್ಪ. ನಂಜುಂಡಯ್ಯ ಅನುಮೋದಿಸುವಂತೆ ತಲೆ ಹಾಕಿದರು. ಒಂದೆರಡು ಕ್ಷಣಗಳು ಸುಮ್ಮನೆ ಸೂರು ನೋಡುತ್ತ ಕುಳಿತ ರಾಜಪ್ಪ, ''ಆದ್ರೆ, ನೋಡು ನಂಜುಂಡಿ, ಹೀಗೆ ಒಬ್ನೇ ಇರೋದು ಅಂದರ ಯಾವಾಗ್ಲೂ ಕಿವಿ ಹತ್ತಿರ ನಗಾರಿ ಬಾರಿಸಿದ ಹಾಗೆ ಇರತ್ತೆ. ಅದರಿಂದ ಬಿಡುಗಡೆ ಸೂನ್ನೆ; ತ್ರಿಬಲ್ ಲೈಫ್ ಟರ್ಮ್ ಶಿಕ್ಷೇಲಿ ಇದ್ದ ಹಾಗೆ'' ಎಂದು ಹೇಳಿ, ಹಣೆಯ ಮೇಲೆ ಕೈ ಬೆರಳಿನ ಉಗುರಿನಿಂದ ಗೀರಿಕೊಂಡ. ಮತ್ತೆ ಸ್ವಲ್ಪ ಸಮಯ ಮಾತಿಲ್ಲದೇ ಕೂತರು. ನಂತರ ಮಾತು ಮುಂದುವರಿಸಿದ ಮೇಲೆ, ಅವರಿಗೇ ಆಶ್ಚರ್ಯವಾಗುವ ಹಾಗೆ, ಉಳಿದ ಅರ್ಧ ಶತಮಾನದ ಲೌಕಿಕ ವ್ಯವಹಾರಗಳು ಅರ್ಧ ಗಂಟೆಯಲ್ಲಿ ಮುಗಿದು ಸಪಾಟಾಯಿತು. ಒಬ್ಬರ ನ್ನೊಬ್ಬರು ನೋಡುತ್ತ ನಕ್ಕು, ಹಿಂದಕ್ಕೊರಗಿ ಸೂರು ನೋಡಿ ಮತ್ತೆ ನಕ್ಕರು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು.

ನಂತರ ರಾಜಪ್ಪ, ''ಇದೇನಯ್ಯ ಹೀಗೇ... ಎಲ್ಲ ಖಾಲಿ... ಮುಗಿದೇ ಹೋಯ್ತಲ್ಲ,, ನಂಜುಂಡಿ'' ಎಂದದ್ದಕ್ಕೆ, ''ಅದು ಹಾಗೇನೇ... ಇಷ್ಟು ಬಿಟ್ಟು ಬೇರೆ ಆಗಕ್ಕೆ ಸಾಧ್ಯಾನೇ ಇಲ್ಲ'' ಎಂದರು ನಂಜುಂಡಯ್ಯ.

ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿಕೊಳ್ಳುತ್ತ, ಅದರ ಒಂದೊಂದೇ ಘಟನೆ, ಅವುಗಳ ವಿವರ ಇತ್ಯಾದಿಗಳನ್ನು ಮತ್ತೆ ಹರವಿಕೊಳ್ಳಲು ಪ್ರಾರಂಭಿಸಿದರು. ಅವರಿಗೆ ಸಮಯದ ಪರಿವೆಯೇ ಇರಲಿಲ್ಲ. ನೋಡನೋಡುತ್ತ ಸುಮ್ಮನೆ ಸಂತೋಷಿಸುವ, ನೋಯುವ ತಮ್ಮ ಬಾಲ್ಯ ಬಿಟ್ಟು ಉಳಿದದ್ದೆಲ್ಲ ಸಾರಾಸಗಟು ವ್ಯರ್ಥ ಮತ್ತು ನಿರರ್ಥಕ ಎನ್ನಿಸಿ ತವರಿಗೆ. ಅದನ್ನೇ ಮಾತಾಡುತ್ತ ಕುಳಿತರು. ಅರವಿಂದ ಬಂದು, ''ಅಮ್ಮ ಕರೀತಿದಾಳೆ... ಊಟಕ್ಕೆ ಬರಬೇಕಂತೆ ತಾತ'' ಎಂದಾಗಲೆ ನಂಜುಂಡಯ್ಯ, ''ನೀನು ಸಿಕ್ಕಿಯಲ್ಲ, ಇನ್ನೇನು ನನಗೆ ಯೋಚನೆ ಯಿಲ್ಲ ರಾಜು'' ಎಂದು ನಗುತ್ತ ಹೊರಟದ್ದು.

ಮಾರನೆಯ ದಿನದಿಂದ ನಂಜುಂಡಯ್ಯ ಮತ್ತು ರಾಜಪ್ಪ ಅವರ ದಿನಚರಿಯೇ ಬದಲಾಯಿತು. ಸಂಸಾರವಿದ್ದರೂ ಈಗ ಒಂಟಿಯಾಗಿರುವ ರಾಜಪ್ಪ ಮತ್ತು ಸಂಸಾರದಲ್ಲಿ ಈಗ ಪ್ರತಿಕೂಲ ಪರಿಸ್ಥಿತಿಯಲ್ಲಿ ಇರುವ ನಂಜುಂಡಯ್ಯ ಆ ಬಗ್ಗೆ ಯೋಚಿಸುವು ದನ್ನೇ ಬಿಟ್ಟರು.

ಅವರಿಗೆ ಹಳೆಯ ದಿನಗಳನ್ನು ಇನ್ನಷ್ಟು, ಮತ್ತಷ್ಟು ಹತ್ತಿರ ಸೆಳೆಯುವ ಅಪೇಕ್ಷೆಯಾಯಿತು. ''ಬಾ ನಂಜುಂಡೀ'' ಎಂದು ರಾಜಪ್ಪ ಸೈಕಲ್ ಶಾಪಿಗೆ ಕರೆದುಕೊಂಡು ಹೋದರು. ಅಲ್ಲಿ ಎರಡು ಬಾಡಿಗೆ ಸೈಕಲ್ಲುಗಳನ್ನು ತೆಗೆದುಕೊಂಡು, ಆಗಿನಂತೆ ಈಗಲೂ ಸ್ಪರ್ಧೆಯಲ್ಲಿ ಪೆಡಲು ತುಳಿದರು. ಇವರು ಸುಸ್ತಾದಾಗ ಅವರು, ಅವರು ಸುಸ್ತಾದಾಗ ಇವರು ಪರಸ್ಪರ ಗೇಲಿಮಾಡಿ ಸಂತೋಷ

ಗೊಂಡರು. ಇದರಿಂದ ಮೈ-ಕೈ ನೋವು ಉಂಟಾಗಿ ಇಬ್ಬರೂ ಎರಡು ದಿನ ಸುಧಾರಿಸಿಕೊಂಡರು. ಆದರೆ ಗೆಲುವು ಕುಗ್ಗಲಿಲ್ಲ.

ನಂತರ ಮತ್ತೆ ತಯಾರಾದರು. ''ಗೋಲಿ ಆಟ ಆಡ್ಬೇಕು ನಂಜುಂಡಿ... ನಿನ್ನ ಬೆರಳಲ್ಲಿ ಅದೇ ಕರಾಮತ್ತು ಇದೆಯಾ ನೋಡ್ಬೇಕು... ಇಲ್ಲೊಂದು ರೌಂಡು ಹೊಡೆದೆ, ಗೋಲಿ ಸಿಕ್ಕಲಿಲ್ಲ ನೋಡು'' ಎಂದು ರಾಜಪ್ಪ ಹೇಳುತ್ತಿದ್ದಂತೆ, ''ಈಗ ಬಂದೆ ತಡಿ'' ಎಂದು ಅರವಿಂದ ಇನ್ನೂ ಕೇಳಿರದ ಗೋಲಿ ಡಬ್ಬಿಯನ್ನು ತಂದರು. ತಾವಿದ್ದಲ್ಲಿ ಇಕ್ಕಟ್ಟು, ಜಾಗ ಸಾಲದೆಂದು ಹೈಸ್ಕೂಲ್ ಮೈದಾನ ಸೇರಿದರು. ಆಟ ಪ್ರಾರಂಭಿಸುವ ಮುಂಚೆ ರಾಜಪ್ಪ ಕತ್ತೆತ್ತಿ ನೋಡಿ, ''ತುಂಬ ಮೋಡ ಸೇರಿಬಿಡ್ತಾಇದೆಯಲ್ಲ ನಂಜುಂಡಿ... ನಾಳೆ ಆಡೋಣ ಬಿಡು'' ಎಂದರು. ಅವರ ಮಾತನ್ನು ನಂಜುಂಡಯ್ಯ ಕಿವಿಗೆ ಹಾಕಿಕೊಳ್ಳಲೇ ಇಲ್ಲ.

ಹಿಂದಿನಂತೆ ಅವರು ಎಲ್ಲ ಸಿದ್ಧಗೊಳಿಸಲು ಶುರು ಮಾಡಿದರು. ಮೊದಲು ಪೂಚು ಮಾಡಿ, ಅದರ ಸುತ್ತಳತೆ, ಆಕಾರಗಳು ಸರಿಯೇ ಪರೀಕ್ಷಿಸಿ ತಲೆ ಹಾಕಿದರು. ಹೆಜ್ಜೆ ಅಳತೆ ಇಟ್ಟು ಇತರ ಅಂತರಗಳನ್ನು ನಿಗದಿಪಡಿಸಿದರು. ಆಟ ಪ್ರಾರಂಭಿಸಿದ ನಂತರ ಅವರು ಸಮಯದ ಪರಿವೆ ಇಲ್ಲದೆ ಆಟದಲ್ಲಿ ಮುಳುಗಿಹೋದರು. ಮಧ್ಯೆ ಮಧ್ಯೆ ಅವರ ಕೂಗಾಟ, ಉದ್ಗಾರಗಳು ಅತ್ತಿತ್ತ ಓಡಾಡುವ ಜನರನ್ನು ಆಕರ್ಷಿಸಿತು. ಒಬ್ಬಿಬ್ಬರಂತೆ ಶುರುವಾಗಿ ಕ್ರಮೇಣ ಜನ ಅವರಿಬ್ಬರನ್ನು ಸುತ್ತುವರಿದರು. ಆಟ ರಂಗೇರುತ್ತಿದ್ದ ಹಾಗೇ, ಸುತ್ತ ನಿಂತವರಿಗೆ ಆಶ್ಚರ್ಯದ ಜೊತೆ ಒಂದು ರೀತಿಯ ಮನರಂಜನೆ, ಮೋಜು.

ಮಳೆ ಹನಿ ಬೀಳುತ್ತಿದ್ದಂತೆ ಆಟದ ತೀವ್ರತೆ ಹೆಚ್ಚಾಯಿತು. ಒಂದಲ್ಲ, ಎರಡು-ಮೂರು ಮೀಟರ್ ದೂರದ ಗೋಲಿಗೂ ನಂಜುಂಡಯ್ಯ ಬೆರಳು ಮೀಟಿ ಗೋಲಿಯಿಂದ ಹೊಡೆದಾಗ ರಾಜಪ್ಪ ಹುಚ್ಚೆದ್ದು ಕುಣಿಯುತ್ತ, ''ವಾಟ್ ಎ ಶಾಟ್... ವಾಟ್ ಎ ಶಾಟ್...'' ಎಂದು ಚಪ್ಪಾಳೆ ತಟ್ಟ ಸಂಭ್ರಮಿಸಿದ. ಅವರಿವರೂ ಕೂಡ, ''ಶಭಾಷ್'', ''ವಾರೆ ವಾಹ್'', ''ಗುಡ್ ಶಾಟ್'' ಎಂದು ಕೂಗಿದ್ದು ಕೇಳಿಸುತ್ತಲೇ ನಂಜುಂಡಯ್ಯ ಎದ್ದು ಸುತ್ತ ನೋಡಿದರು. ಚಿಕ್ಕವರು, ದೊಡ್ಡವರು, ಮಕ್ಕಳು-ಎಲ್ಲ ಅಲ್ಲಿದ್ದರು. ಅರೆಬೆಳಕಿನಲ್ಲಿ ಉದ್ದಾನುದ್ದ ಗೀರುಗಳನ್ನು ಎಳೆದಂತೆ ಇಳಿಯುತ್ತಿದ್ದ ಮಳೆ ನಿರ್ಮಿಸಿದ ಹಿನ್ನೆಲೆ, ಹಲವಾರು ಮುಖಗಳ ಮೇಲಿಂದ ಜಾರಿಳಿಯುತ್ತಿದ್ದ ನೀರಿನ ಸಾಲುಗಳಿದ್ದ ವಿವಿಧ ಮುಖ ಚಹರೆ, ಭಂಗಿ, ಮಂದ ಬೆಳಕು-ಇವುಗಳೆಲ್ಲ ಸೇರಿ ಸುತ್ತಲಿನ ನೋಟ, ಸ್ಟಿಲ್ ಫೋಟೋಗಳ ಹಾಗೆ ಕಂಡವು. ಅವರ ತುಟಿ ಯಂಚಿನಲ್ಲಿ ನಗು ಮೂಡಿತು. ನಿಂತಲ್ಲಿಂದ ಮೇಲಕ್ಕೆಲ್ಲೋ ಚಿಮ್ಮಿದ ಅವರ ಮನಸ್ಸು, ತನಗೆ ಇಷ್ಟಬಂದ ಕಡೆ ತೊನೆದಾಡಿ, ಹಲವು ಹನ್ನೊಂದರಲ್ಲಿ ಮಿಂದು ಥಳಥಳಿಸುತ್ತ ಮೇಲೆದ್ದಿತ್ತು. ಕೆಲವು ಕ್ಷಣ ತಮ್ಮನ್ನೇ ಮರೆತಿದ್ದ ಅವರಿಗೆ ರಾಜಪ್ಪ ಬೆನ್ನು ಚಪ್ಪರಿಸಿದಾಗಲೆ ಮತ್ತೆ ಆಟದ ಕಡೆ ಗಮನ.

ಮಳೆ ಹನಿ ಬೀಳಲು ಹೆಚ್ಚಾದ ಕೂಡಲೆ ಸುತ್ತಲಿದ್ದವರು ಒಬ್ಬೊಬ್ಬರಾಗಿ ಜಾಗ ಖಾಲಿ ಮಾಡಿದರು. ಆದರೆ ಅವರಿಬ್ಬರ ಆಟ ನಿಲ್ಲಲಿಲ್ಲ.

ನಿಲ್ಲದೆ ಮುಂದುವರೆಯಿತು...ಆಟ... ಮಳೆ...ಮಳೆ...ಆಟ...



ಕಥೆ ಎಂದರೆ ನಮ್ಮೆಲ್ಲರನ್ನು ಎಳೆಯುವ ಹಲವು ವಿಷಯಗಳ ಬದುಕಿನ ಎಳೆಯೊಂದು ಹಠಾತ್ತನೆ ಅರಿವಾಗುವ ರೀತಿ. ಬದುಕಿನ ಬಗ್ಗೆ ಇನ್ನಷ್ಟು ಆಸಕ್ತಿ ಹುಟ್ಟಿಸುವ, ಜೀವನ-ಪ್ರೀತಿಯ ಬೆಳೆಸುವ ಮಾರ್ಗ

ಎ.ಎನ್.ಪ್ರಸನ್ನ





ಭೂಲೋಕೇ ವಿಚಿತ್ರಂ

ಕುಂ. ವೀರಭದ್ರಪ್ಪ

# ಬಂದನಾ ಬ್ರೆಡ್‌ರಾಯನು

ಕಾಲ:1967 ಲೊಕೇಷನ್ನು: ಕೊಟ್ಟೂರು ಗ್ರಾಮದ 2ನೇ ವಾರ್ಡ್

ಬ್ರೆಡ್‌ರಾಯ ಎಂಬ ಮುಂಗಾರಿನ ಆಗಮನದ ಸಂದರ್ಭದಲ್ಲಿ, ನಮ್ಮೋಣಿ ಎಂಬ ಇಥಿಯೋಪಿಯಾದ ಪರಿಸ್ಥಿತಿ ಡಾಲರ್ಸ್ ಕಾಲನಿಯಷ್ಟು ಕೆಟ್ಟದ್ದಾಗಿರಲಿಲ್ಲ. ಅಪ್ಪಿತಪ್ಪಿ ಯಾರನ್ನಾದರೂ, 'ಉಂಡ್ಯಾ' ಎಂದು ಕೇಳಿದರೆ ಸಾಕು, ರಾವಣಾಯಣದಂಥ ಮಹಾಕಾವ್ಯಗಳೇ ಸೃಷ್ಟಿಯಾಗಿಬಿಡುತ್ತಿದ್ದವು. ಅದರ ತುಂಬ ನಿಟ್ಟುಸಿರುಗಳೆಂಬ ಕಂದಪದ್ಯಗಳೆಷ್ಟೋ? ನಿಟ್ಟುಸಿರುಗಳೆಂಬ ವೃತ್ತಗಳ ಅಟ್ಟಹಾಸಗಳೆಷ್ಟೋ? ದುಕ್ಕದುಮ್ಮಾನಗಳೆಂಬ ಟೀಕಾ ಪ್ರಹಾರಗಳೆಷ್ಟೋ. ಅವರ ಮನೆಯಿಂದ ಇದನ್ನು, ಇವರ ಮನೆಯಿಂದ ಅದನ್ನು ಕದಿಯುತ್ತಿದ್ದ ನಿಶಾಚರಿಗಳಿಂದಾಗಿ ಇರುಳು ಎಂಬ ಪದಕ್ಕೊಂದು ಅರ್ಥ ಇತ್ತು. ಬೆರಣಿ, ಕಟ್ಟಿಗೆ, ಕಸ ಪೊರಕೆಗಳಂಥ ಕೊಹಿನೂರು ವಜ್ರಗಳ ಕಳುವಿನಿಂದಾಗಿ ಕಂಗಾಲಾಗುತ್ತಿದ್ದವರ ವಾಗ್ ವಿಲಾಸದ ವೈಭವ, ಬ್ರಾಹ್ಮೀ ಮುಹೂರ್ತದಲ್ಲಿ ಶುರುವಾಗಿ, ಗೋಧೂಳಿ ಮುಹೂರ್ತದಲ್ಲಿ ಪರಾಕಾಷ್ಠೆ ತಲುಪಿ, ರಾತ್ರಿ ಸುಮಾರು ಹೊತ್ತಿನ ನಂತರ ಮಂಗಳಾವಸಾನಗೊಳ್ಳುತ್ತಿತ್ತು. ಇದ್ದುದರಲ್ಲಿಯೇ ಉಂಡು, ನಂತರ ಡಯಮಂಡು ಅಡಕೆ ಚೀಟಿ ಹಾಕಿಕೊಂಡು ಓಣಿ ತುಂಬ ಅದ್ಭುತ ಪರಿಮಳ ಬೀರುತ್ತಿದ್ದ ತಂದೆಯೋರ್ವನ ಮಗನಾಗಿದ್ದ ನಾನಂತೂ, ಪಿಳಿ ಪಿಳಿ ಕಣ್ಣು ಬಿಡುತ್ತ, ಬಡಕಲು ಮೈ ತುಂಬ ಸಾವಿರದೆಂಟು ಕಿವಿಗಳನ್ನು ಮುಡಿದುಕೊಂಡು, ಓಣಿಯ ಪ್ರತಿಯೊಂದು ದೃಶ್ಯ, ಶಬ್ದ, ವಿನ್ಯಾಸಗಳನ್ನು ಎದೆಯ ಪೆಟಾರಿಯೊಳಗೆ ಸಂಗ್ರಹಿಸಿಟ್ಟುಕೊಳ್ಳುತ್ತಿದ್ದೆ. ಉಪ್ಪಾರ ಹುಲಿಗೆವ್ವ, ಭವಾನಿಗಂಗವ್ವ, ಬೀರುಡಿ ಭದ್ರಯ್ಯ, ಮಂಡಾಳು ಭಟ್ಟಿ ರುದ್ರಪ್ಪನವರಂಥ ಗ್ರಾಮ ಸುವಿಖ್ಯಾತ ಜಗಳಗಂಟ-ಗಂಟಿಯರಂತೂ ನನ್ನ ಪಾಲಿಗೆ ಶಮಂತಕ ಮಣಿಗಳೇ ಆಗಿದ್ದರು. ಜಾಲಗಾರರ

ಮನೆಯ ಭೀಮ, ಅಗಸರ ಮನೆಯ ರಾಮ, ಉಪ್ಪಾರರ ಮನೆಯ ಅರ್ಜುನರಿಂದೊಡಗೂಡಿದ ಶ್ವಾನ ಸಂಪುಟವಂತೂ, ದಿನಂಪ್ರತಿ, ಓಣಿಯ ಹತ್ತಾರು ಕಡೆ ಸಭೆ ಸೇರಿ, ಓಣಿಯ ಆಡಳಿತ ಭದ್ರತಾ ವ್ಯವಸ್ಥೆಗೆ ಸಂಬಂಧಿಸಿದಂತೆ ನಡೆಸುತ್ತಿದ್ದ ವಾದೋಪವಾದವಂತೂ, ಅಕ್ಕಪಕ್ಕದ ಬೋರ್ಗಳ್ಳಿ, ಮಲ್ಲಾಕ್ಷಳ್ಳಿವರೆಗೆ ಕೇಳಿಸದೆ ಇರುತ್ತಿರಲಿಲ್ಲ. ಅಮೇರಿಕಾದ ಕೆಂಪು ಜೋಳದ ಮುದ್ದೆ, ರೊಟ್ಟಿ ಉಂಡು, ಓಣಿಯ ಹತ್ತಾರು ಕಂದಮ್ಮಗಳು ಮನೆಯಿಂದ ತಿಪ್ಪೆಗೂ, ತಿಪ್ಪೆಯಿಂದ ಮನೆಗೂ ಕೈಗೊಳ್ಳುತ್ತಿದ್ದ ಮ್ಯಾರಥಾನ್ ದೃಶ್ಯಗಳಂತೂ ಹಬ್ಬ ಸದೃಶವಾಗಿದ್ದವು. ಗ್ರಾಮದ ಸಮಸ್ತ ವರ್ಣ ವೈವಿಧ್ಯ-ನವರಸ ಭರಿತ ಕೊಳಚೆಯನ್ನೇ ಮಹಾ ಪ್ರಸಾದವೆಂಬಂತೆ ಸ್ವೀಕರಿಸುತ್ತಿದ್ದ ಬಸವನ ಬಾವಿ ತಗ್ಗು ಪ್ರದೇಶ, ನಮ್ಮೋಣಿಯ ಉತ್ತರಾಯಣ ಪುಣ್ಯಕಾಲವಾದರೆ, ಜೀವನದಲ್ಲಿ ಜಿಗುಪ್ಸೆ ಹೊಂದಿದವರಿಗೆ, ಭಗ್ನ ಪ್ರೇಮಿಗಳಿಗೆ ಮೋಕ್ಷ ಸಾಯುಜ್ಯ ಕರುಣಿಸುತ್ತಿದ್ದ ಕನ್ನೀರವ್ವನ ಬಾವಿ, ನಮ್ಮೋಣಿಯ ದಕ್ಷಿಣಾಯಣ ಪುಣ್ಯಕಾಲವಾಗಿತ್ತು. ಇಂತಿರ್ಪ ಹತ್ತು-ಹಲವು ವಿಶೇಷಗಳಿಂದ ಕೂಡಿದ್ದ ನಮ್ಮೋಣಿಯ ಒಡಲಲ್ಲಿ, ಏಳೆಂಟು ವಿಶ್ವವಿದ್ಯಾಲಯಗಳು ಅಹರ್ನಿಶಿ ಕ್ರಿಯಾಶೀಲವಾಗಿದ್ದವು.

ಹೊಯ್ಸಳ ಸಾಮ್ರಾಜ್ಯದ ಮೂಲೆಯೊಂದರಿಂದ ರಾತ್ರೋರಾತ್ರಿ ವಿಜಯಂಗೈದ ಬ್ರೆಡ್ರಾಯ, ಇಂತಿರ್ಪ ನಮ್ಮೋಣಿಯಲ್ಲೊಂದು ಮನೆಯಂ ಹಿಡಿದು ಪುಣ್ಯ ಕಟ್ಟಿಕೊಂಡ ಸಂಗತಿ, ನಮಗೆಲ್ಲ ಅಸಾಮಾನ್ಯವೆನಿಸಿತು. ಮುದ್ದೆ, ರೊಟ್ಟಿ, ಇಂಡಿ, ಇವಣಕ್ಕಿ ಬಾನ ಭುಂಜಿಸೀ ಭುಂಜಿಸೀ ಯದ್ವಾ ತದ್ವಾ ಬೆಳೆದಿದ್ದ ನಮ್ಮ ಬಾಡಿಗಳಿಗೂ, ಕಾಳಹಸ್ತಿ ಬೀಡಿಗಳಿಗೂ ವ್ಯತ್ಯಾಸವಿರಲಿಲ್ಲ. ನೆಲ್ಕುದುರೆಯವರ ಮನೆಯ ನವರಂಧ್ರಗಳಿಂದ ಹೊರಟ ಬೇಕರಿಯ ಪರಿಮಳ, ಓಣಿಯ ಸಮಸ್ತರ ಮೂಗುಗಳನ್ನೂ ಕಟುಕಿ, ವಿಚಿತ್ರವೂ, ವಿಲಕ್ಷಣವೂ ಆದ ವದಂತಿಗಳಿಗೆ ಎಡೆಮಾಡಿಕೊಟ್ಟಿತು. ಎಲ್ಲೋ, ಯಾರೋ ನಾಯಿ ಸುಡ್ತಿದ್ದಂಗದಾರ ಅಂತ ಭವಾನಿ ಗಂಗವ್ವ ಮೂಗು ಮುಚ್ಚಿಕೊಂಡರೆ, ಜಾಲಗಾರ ಸಂಗವ್ವ, ಇಲ್ ಬಿಡೆತ್ತೆ ಯಾರೋ ಬಟ್ಟೆಬರೆ ಸುಡ್ತಿದ್ದಂಗೈತಿ ಎಂದು ವಾದ ಮಂಡಿಸಿದಳು. ರಂಗವ್ವ, ಕೆಂಚವ್ವ ಮಾಡಿಕೊಂಡ ಒಂದೆರಡು ವಾಂತಿಗಳಿಗೂ, ಬೇಕರಿಯ ಪರಿಮಳಕ್ಕೂ ಚರ್ಚೆಯ ಸಂಪರ್ಕ ಸೇತುವೆ ಕಟ್ಟಲಾಯಿತು. ಓಣಿಯ ಸಮಸ್ತ ಮಹಿಳೆಯರ ಮುಖವಾಣಿಯೂ, ಗಟ್ಟಿವಾಣಿಯೂ ಆದ ನಮ್ಮ ವಿಶ್ವಸುಂದರಿ ನಿಂಗಮ್ಮಜ್ಜಿಯಂತೂ, ಅದರ ವಾಸನಗೆ ಬೇಸತ್ತು, ತಲೆಗೆ ಸೆರಗಿನ ತುದಿಯನ್ನು ಕಟ್ಟಿಕೊಂಡಿತಲ್ಲದೆ, ಹಣೆಗೆ ಸೀಮೆಎಣ್ಣೆಯಲ್ಲಿ ಬೆಳ್ಳುಳ್ಳಿ ತೇದು ಹಚ್ಚಿಕೊಂಡು, ''ಈ ಬಿರೆಡ್ನ ವಾಸ್ನೆ ಕುಡುದ್ರೆ ಈಟು, ಇನ್ನದ್ನ ತಿಂದ್ರೆ ಯಿನ್ನೇಟೋ'' ಎಂದು ಗೊಣಗಾಡಲಾರಂಭಿಸಿತು. ಹೀಗೆ, ಓಣಿಯ ಎಲ್ಲಾ ವೃದ್ಧೆ ವೀರ ರಮಣಿಗಳು, ತಂತಮ್ಮ ಕಲ್ಲ ಬತ್ತಗಳಲ್ಲಿ ಬ್ರೆಡ್‌ರಾಯನೆಂಬ ತೊಂಬಲವನ್ನಿಟ್ಟು ಕುಟ್ಟಲಾರಂಭಿಸಿದರು.

ಆದರೆ ಹುಡುಗರಾದ ನಮ್ಮ ಪಾಲಿಗಂತೂ ಬ್ರೆಡ್‌ರಾಯ ಸೂಪರ್‌ಸ್ಟಾರ್ ಆಗಿಬಿಟ್ಟಿದ್ದ. ಆತ ತಯಾರಿಸುತ್ತಿದ್ದ ಬ್ರೆಡ್‌ಗೆ ದೈವದ ಸ್ಥಾನಮಾನ ಲಭಿಸಿತ್ತು. ಕೆಲವು ಹುಡುಗರಂತೂ, ಶಾಲೆಗೆ ಚಕ್ಕರ್ ಕೊಟ್ಟು, ಸದಾ ಬೇಕರಿ ಭವನದ ಮುಂದೆ ಸುಳಿದಾಡಿ, ಬ್ರೆಡ್ ಬಗ್ಗೆ, ರಾಯನ ಬಗ್ಗೆ ಮಾಹಿತಿ ಸಂಗ್ರಹಿಸಿ, ಬೆಲ್ಲದ ಚೂರು, ಸೊಂಟಿ ಪೆಪ್ಪರ್ಮೆಂಟು ಲಂಚ-ರುಷುವತ್ತು ನೀಡಿದವರಿಗೆ ಬ್ರೆಡ್ ಸಂಕೀರ್ತನ ಉಣಬಡಿಸತೊಡಗಿದರು. ಅವರು ಮಾಡುತ್ತಿದ್ದ ವರ್ಣನೆ ಎಷ್ಟು




ಪರಿಣಾಮಕಾರಿಯಾಗಿರುತ್ತಿತ್ತೆಂದರೆ, ಬ್ರೆಡ್‌ರಾಯ ನನ್ನ ಕನಸಿನಲ್ಲಿ ಕಾಣಿಸಿಕೊಂಡು ಲೈನು ಹೊಡೆಯಲಾರಂಭಿಸಿದ. ನನ್ನ ದರುಶನ ಪಡೆದು ಧನ್ಯನಾಗುವ ಆಸೆ ನಿನಗಿಲ್ಲವೇನು ಎಂದು ಪ್ರಶ್ನಿಸತೊಡಗಿದ. ಆ ಗುಂಗಿನಲ್ಲಿ, ಮೋಟಾಸಾಮಿಗಳನ್ನೆಲ್ಲ ಬ್ರೆಡ್‌ರಾಯರೆಂದು ಭಾವಿಸಿ ಬೇಸ್ತು ಬಿದ್ದದ್ದೂ ಉಂಟು.

ಊರಿಗೆ ಬಂದವರು ಹೇಗೆ ನೀರಿಗೆ ಬಾರದಿರುವರೋ ಹಾಗೆ, ಬ್ರೆಡ್‌ರಾಯ ಬಹಿರ್ದೆಶೆಗೆ ಹೊರಡದಿರುವನೇನು! ಆತನ ಬಹಿರ್ದೆಶೆಯ ಅಮೃತ ವ್ಯಾಳೆಗಳನ್ನು ಪತ್ತೆಹಚ್ಚಿ, ಕಾದೂ ಕಾದೂ ಆತನ ಭವ್ಯ ದೇಹಾಕೃತಿಯನ್ನು ನೋಡಿ, ಪುನೀತನೂ, ರೋಮಾಂಚಿತನೂ ಆದೆನು. ಆತನ ಭೌತಿಕ ಕಾಯದ ಅನುಭವದಿಂದಾಗಿ ಕಾರ್ಟೂನು ಬರೆವುದು, (ನಾನು ಹದಿಹರೆಯದ ದಿನಗಳಲ್ಲಿ ಒಳ್ಳೆ ಕಾರ್ಟೂನಿಸ್ಟು. ನಾನು ಬರೆದ ವ್ಯಂಗ್ಯ ಚಿತ್ರಗಳು ಜನಪ್ರಿಯ ಮಾಸಿಕಗಳಲ್ಲಿ ಪ್ರಕಟವಾಗಿವೆ) ಪದ್ಯ ಬರೆಯುವುದು ಮಾಡಿದೆ. ಢ್ಹಿ...ಢ್ಹಿ...ಢ್ಹಿ... ಅಂತ ಹಲ್ಲು ಕಿಸಿಯುವುದರ ಮೂಲಕ ಆತನ ಪರಿಚಯ ಮಾಡಿಕೊಂಡೆ. ಏನು ಮರಿ, ಎಷ್ಟನೆ ತರಗತಿ ಓದ್ತಿದ್ದೀಯಾ, ಊಟ ಆಯಿತೋ, ಎಂದು ಸುಸಂಸ್ಕೃತವೂ, ಸುಸಜ್ಜಿತವೂ ಆದ ಭಾಷೆಯಲ್ಲಿ ಮಾತಾಡಿಸಿದಾಗ, ನಮಗೋ ಸಂಭ್ರಮಾಶ್ಚರ್ಯ. ಈ ರೀತಿ ಭಾಷೆಯನ್ನು ನಾವೂ ಅನುಕರಿಸಲಾರಂಭಿಸಿದೆವು. ಓಣಿಯ ಅನೇಕರು, ಊಟ ಆಯ್ತೋ! ಊಟ ಆಯ್ತೋ ಅಂತ ಮಾತಾಡಿ ನಗಲಾರಂಭಿಸಿದರು. ಉಡುಗೆ-ತೊಡುಗೆಗೆ ಸಂಬಂಧಿಸಿದಂತೆಯೂ ಅನುಕರಣ ನಡೆಯಿತು. ಆದರೆ ಆ ಶೈಲಿಯ ಮಾತುಕತೆಗೆ ನಮ್ಮ ನಿಂಗಮ್ಮಜ್ಜಿಯ ಸಹಮತವಿರಲಿಲ್ಲ. ಊರನ್ನು ಹಾಳು ಮಾಡಲಿಕ್ಕೆಂದೇ, ಅಂಥವರು, ಹಾಗೆ ಮಾತಾಡುತ್ತಾರೆಂಬುದು ಆಕೆಯ ಅಭಿಪ್ರಾಯ.

ಬ್ರೆಡ್‌ರಾಯನಷ್ಟು ಜನಪ್ರಿಯತೆಯನ್ನು ಆತ ತಯಾರಿಸುವ ಬ್ರೆಡ್ ಗಳಿಸಿರಲಿಲ್ಲ. ಬ್ರೆಡ್ ತಯಾರಿಸುವವರ ಜಾತಿಯ ನಿಗೂಢತೆಯಿಂದಾಗಿಯೋ ಅಥವಾ ಅದರ ತಯಾರಿಕೆಯಲ್ಲಿ ಮೊಟ್ಟೆ ಬಳಸುವರೆಂಬ ವರ್ತಮಾನದಿಂದಾಗಿಯೋ ಏನೋ, ವೃದ್ಧೆಯರು ಅದನ್ನು ತಿನ್ನಬಾರದೆಂಬ ಅಘೋಷಿತ ನಿಷೇಧಾಜ್ಞೆ ವಿಧಿಸಿದ್ದರು. ಉಲ್ಲಂಘನೆ ವಿಷಯದಲ್ಲಿ ಹೆಸರು ಮಾಡಿದ್ದ ಹುಡುಗರಿಗೆ, ಆ ನಿಷೇಧವನ್ನು ದಾಟುವುದು ಕಷ್ಟವಾಗಲಿಲ್ಲ. ಓಣಿಯ ಕಾನೂನುಬಾಹಿರ ಲೈಂಗಿಕ ಚಟುವಟಿಕೆಗಳನ್ನು ಪತ್ತೆ ಹಚ್ಚಿ ಜಗಜ್ಜಾಹಿರು ಮಾಡುವಲ್ಲಿ, ಕೊರೆ ಬೀಡಿ ಎಳೆಯುವುದರಲ್ಲಿ ಹೆಸರು ಮಾಡಿದ್ದ ಕೊಟ್ರದ್ವಯರಂತೂ, ಬ್ರೆಡ್ ತಿನ್ನುವುದಷ್ಟೇ ಅಲ್ಲದೆ ರಾಯನ ನಿಕಟವರ್ತಿಗಳೂ ಆಗಿಬಿಟ್ಟಿದ್ದರು. ಬ್ರೆಡ್‌ರಾಯ ಇಸಪೀಟಾಟದ ಕ್ಲಬ್ ನಡೆಸುತ್ತಿದ್ದನಷ್ಟೆ. ಅಲ್ಲಿ, ಇವರು ಚಹ, ಬೀಡಿ, ಸೀಕರೇಟು, ಸರಬರಾಜು ಮಾಡುತ್ತಿದ್ದರು. ಅಲ್ಲದೆ ಅವರು, 'ಬ್ರೆಡ್ ತಿಂದವರು ಬ್ರೆಡ್ಡಿನಂತಾಗುವರು' ಎಂದು ಹಾಡುತ್ತ, ಬ್ರೆಡ್ ಕುರಿತು ಪ್ರಚಾರ ಮಾಡುತ್ತಿದ್ದರು. ಹೀಗಾಗಿ, ಓಣಿಯ ಮುದುಕಿಯರು ಏರಿಗೆಳೆದುದರಿಂದಾಗಿಯೂ, ಹುಡುಗರು ನೀರಿಗೆಳೆದುದರಿಂದಾಗಿಯೂ ಯಾವ ನಿಷೇಧಾಜ್ಞೆಯೂ ಜಾರಿಗೆ ಬಾರದೆ ಹಾಗೇ ಸೊರಗಿಹೋದವು.

ಕೈಲಾಗದವ ಮೈ ಪರಚಿಕೊಂಡ ಎಂಬ ಗಾದೆ ಮಾತಿನಂತೆ, ಸಾಹಸತನೆಯರಾದ ಮುದುಕಿಯರು, ಏನಾದರೊಂದು ನೆಪ ಹುಡುಕಿಕೊಂಡು, ಬೇಕರಿ ಕಾರ್ಯಾಗಾರದ ಬಳಿ ಹೋಗುವುದು, ''ಎಲವೋ ನನ್ನಾಟಗಳ್ಳ... ಮರ್ವಾದಿಯಿಂದ ಓಣಿ ಬುಟ್ಟೋಯ್ತಿಯೋ ಇಲ್ಲೋ'' ಎಂದು ಹೇಷಾರವ ಮಾಡುವುದು ಆರಂಭಿಸಿದರು. ಅಪ್ಪಟ ಕನ್ನಡಿಗನಾದ ರಾಯನಿಗೆ, ಈ ಮುದುಕಿಯರ ಕನ್ನಡೋಪಕನ್ನಡ ಲಗೂನ ಅರ್ಥವಾಗುತ್ತಿರಲಿಲ್ಲವೋ, ವಯಸ್ಸಾದ ಮುದುಕರು, ಬಯ್ದರೆ ಬಯ್ದುಕೊಳ್ಳಲಿ ಎಂಬ ಉಪೇಕ್ಷೆಯಿಂದಾಗಿಯೋ, ರಾಯ, ಅಶ್ಲೀಲ ಎಂಬ ಪದಕ್ಕೆ ಪ್ರಸಾದದ ಪಟ್ಟ ಕಟ್ಟಿದ್ದನು.

ಬ್ರೆಡ್ಡು ಗ್ರಾಮದಾದ್ಯಂತ ಪ್ರಸಿದ್ಧಿ ಪಡೆಯಿತು. ಜೂಜು ಮದ್ಯಪಾನ, ವ್ಯಭಿಚಾರಗಳ ಅನೈತಿಕ ಚಟುವಟಿಕೆಗಳಿಗೆ ಆಧುನಿಕ ಸ್ವರೂಪ ಕೊಟ್ಟಿದ್ದ ರಾಯ, ಸೂಜಿಗಲ್ಲಿನಂತೆ, ಗ್ರಾಮದ ಸೋಕಾಲ್ಡ್ ಮುಖಂಡರ ವಲಯದಲ್ಲಿ ಸಾಕಷ್ಟು ಮನ್ನಣೆ ಗಳಿಸಿದ್ದ.

ಜೊತೆಗೆ, ಗ್ರಾಮದ ಹಳೆ, ಹೊಸ ವೈದ್ಯರು ಅನ್ನಕ್ಕೆ ಬದಲು ಬ್ರೆಡ್ ತಿನ್ನಬೇಕೆಂದು ರೋಗಿಗಳಿಗೆ ಪತ್ಯ ಹೇಳತೊಡಗಿದ ಮೇಲೆ ರಾಯನ ಅದೃಷ್ಟ ಖುಲಾಯಿಸಿತು. ಬ್ರೆಡ್ ತಿನ್ನುವ ಆಸೆಯಿಂದ ಹುಡುಗರು ಜ್ವರದ ಆಟ ಆಡಲಾರಂಭಿಸಿದರು. ಇವರ ಪೈಕಿ ಕೆಲವರು ಯಶಸ್ವಿಯಾದದ್ದುಂಟು. ಇನ್ನು ಕೆಲವರು ತಮ್ಮ ಅಮೋಘ ನಟನೆಗಾಗಿ ಹಿರಿಯರಿಂದ ಒದೆಗಳೆಂಬ ಪಾರಿತೋಷಕ ಪಡೆದು, ಅಳುವೆಂಬ ಸಂತೋಷವನ್ನು ಪ್ರಕಟಿಸಿದ್ದೂ ಉಂಟು. ಬ್ರೆಡ್‌ರಾಯನ ಪ್ರಭಾವ ಭೌತಿಕವಾಗಿ ಅದೆಷ್ಟು ಶಕ್ತಿಶಾಲಿಯಾಗಿತ್ತೆಂದರೆ, ಓಣಿಯ ಕೆಲ ತಾಯಂದಿರು, ಬ್ರೆಡ್ಡ್ಯಾಯ್ನಿಗಿಡ್ಕೊಟ್ಟೇನಿ ಎಂದು ಗತ್ತು ಹಾಕಿ, ತಂತಮ್ಮ ಕೂಸು ಕಂದಮ್ಮಗಳಿಗೆ ಮಮ್ಮುಣಿಸುತ್ತಿದ್ದರು.

ಒಟ್ಟನಲ್ಲಿ ಬ್ರೆಡ್‌ರಾಯ ಬೀರಿದ ಪ್ರಭಾವ, ನಮ್ಮೋಣಿಯಲ್ಲಿ ಮುವ್ವತ್ತು ವರ್ಷಗಳ ನಂತರವೂ, ಹೊಸ ಹೊಸ ಆಯಾಮಗಳ ಮೂಲಕ ಜೀವಂತವಿದೆ.

■



ಚಿತ್ರಶೇಖರ ಕಂಠಿ

# ತಮ್ಮ

ಇಸ್ತ್ರೀ ಮಾಡಿದ್ದ ಗರಿ ಗರಿ ಬಟ್ಟೆ ತೊಟ್ಟವರು, ರೋಡಿಗೆ ಬಂದವರೇ, ಸೀಟುಗಳಿಲ್ಲದ ಮ್ಯಾಕ್ಸಿಕ್ಯಾಬ್ ಹತ್ತಲು ಹಿಂದೇಟುಹಾಕಿದರು. ಹದಿನೈದು ನಿಮಿಷಗಳ ಕಾಲ ನಿಂತು ಪ್ರಯಾಣಿಸಲು ಅಶಕ್ತರೆನ್ನುವ ಕಾರಣಕ್ಕಲ್ಲ, ತಮ್ಮ ಇಸ್ತ್ರಿ ಮಾಡಿದ ಬಟ್ಟೆ ಹಾಳಾಗುವುದು ಅವರಿಗೆ ಇಷ್ಟವಿರಲಿಲ್ಲ. ಇನ್ನೇನು ಬಂದೇ ಬರುತ್ತದಲ್ಲ ಇನ್ನೊಂದು, ಹತ್ತಿದರಾಯಿತೆನ್ನುವ ಸಮಜಾಯಿಷಿ. ಮುಖದಲ್ಲಿ ಎಣ್ಣೆ ಬಸಿಯುವ ಹದಿಹರೆಯ. ಮುದ್ದೆಯಾಗಿ ಮೂಲೆಯಲ್ಲಿ ಕೂಡು ಅಂದರೆ ಹೇಗೆ ಕುಂತಾರು? ಒಬ್ಬ ಕೇಟಿ ಮಾಡಿಸಿಕೊಂಡು ಕುಡಿದರೆ, ಮತ್ತೊಬ್ಬ ಮರದ ಮರೆಯಲ್ಲಿ ನಿಂತು ಸಿಗರೇಟು ಸೇದುತ್ತಿದ್ದ. ಇನ್ನೊಬ್ಬ, ತನ್ನಪ್ಪನೊಂದಿಗೆ ಯಾವುದೋ ಊರಿಗೆ ಹೊರಟಿದ್ದ ಶಾಮಲಾಳನ್ನು ಕದ್ದು ಕದ್ದು ನೋಡುತ್ತಿದ್ದ. ನೆರೆಮನೆಯಲ್ಲೇ ಇರುವ ಶಾಮಲಾ ತನ್ನ ಕಣ್ಣಿಗೆಂದೂ ಇಷ್ಟೊಂದು ರೂಪವತಿಯಾಗಿ ಕಂಡಿರಲಿಲ್ಲಲ್ಲ ಎಂದು ಹಪಹಪಿಸುತ್ತಿದ್ದ.



''ಟೆಂಪೋದಾಗ ಜಾಗ ಸಾಕಾಗಲ್ಲ, ನೀವೆಲ್ಲ ಹುಡುಗರು ಲಾರಿ, ಮ್ಯಾಕ್ಸಿಕ್ಯಾಬ್ ಹಿಡದು ಮುಂದ ನಡೀರಿ ತಮ್ಮ'' ಅಂತ ಧೂಳಪ್ಪ ನಾಲ್ಕಾರು ಸಾರಿ ಹೇಳಿದ ನಂತರವೇ, ಜೋಲು ಮಾರಿ ಹೊತ್ತು ರೋಡಿಗೆ ಬಂದ ಇನ್ನೊಂದು ಹುಡುಗರ ದಂಡು, ಹೋಳಿಗೆ ಊಟ ಹಾಕುವ ಧೂಳಪ್ಪ, ನಿರ್ದಯಿ, ಕಟುಕ ಅಂತ ಯೋಚಿಸುತ್ತ, ಅವ ಅನ್ನೋ ಮಾತಿನೊಳಗರ ತಪ್ಪೇನದ ಅಂತಲೂ ಸಮಾಧಾನಪಡಿಸಿಕೊಳ್ಳುತ್ತಲೇ, ತುಂಬು ಬಸುರಿಯಂತೆ ಮೈ ತುಂಬಿಕೊಂಡು ಬಂದ ಮ್ಯಾಕ್ಸಿಕ್ಯಾಬಿನಲ್ಲೇ ಹಿಗ್ಗಾಮುಗ್ಗಾ ಎಳೆದಾಡಿ ಹತ್ತಿ, ಒಬ್ಬ ಒಂಟಿ ಕಾಲಲ್ಲಿ ನಿಂತರೆ, ಮತ್ತೊಬ್ಬ ದೇಹದ ಭಾರವನ್ನೆಲ್ಲ ಕಂಬಿ ಹಿಡಿದ ಕೈ ಮೇಲೆ ಹಾಕಿದ, ಬೇರೆಯವನೊಬ್ಬ ಗಾಳಿಗೆ ಆಶೆಪಟ್ಟು ರುಮಾಲಿನವನ ತಲೆ ಹಿಂದೆ ಮುಖ ತೂರಿಸಿ ಕಿಟಕಿಗೆ ಹತ್ತಿರವಾದ.

ಗಿಜಿಗುಡುತ್ತಿದ್ದ ಮನೆಯಷ್ಟೇ ಗೌರಿಯ ಮನಸ್ಸೂ ಗೊಂದಲಕ್ಕೊಳಗಾಗಿತ್ತು. ದವಾಖಾನೆಗೆ ಹೋದಾಗ ಸ್ವತಃ ತಾನೇ ಅಂತಃಕರಣ, ಕಕ್ಕುಲಾತಿಯ ದನಿ ತೆಗೆದು ಹೇಳಿದ್ದಲ್ಲದೇ, ಪ್ರತಿದಿನ ಊರಿಂದ ಹೋಗಿ ಬರುವ ಅದೆಷ್ಟೋ ಮಂದಿಯ ಮೂಲಕ ಹೇಳಿಕಳಿಸಿರುವುದರಿಂದ ಹರಕೆ ಕಾರ್ಯಕ್ಕೆ ತನ್ನ ತಮ್ಮ ಬಂದೇ ಬರುತ್ತಾನೆ ಅನ್ನುವ ತರ್ಕ ಗೌರಿಯದು..., ರೈತನ ಆಶೆ ಹುಸಿಯಾಗದಂತೆ ಮಳೆಗಾಲದ ಕಪ್ಪು ಮೋಡ ಕರಗಿ ಮಳೆಯಾಗಿ ಇಳೆಗೆ ಇಳಿಯುವ ಪರಿಯಂತೆ. ಮನೆಯಲ್ಲಿ ತುಂಬಿ ಹೋಗಿದ್ದ ನೆಂಟರಿಷ್ಟರು, ನೆರೆಯವರಿಗೆಲ್ಲ ಆದಷ್ಟು ಬೇಗ ಗುಡ್ಡಕ್ಕೆ ಹೋಗಿ, ಗುಡ್ಡದ ಸಿದ್ಧನ ದರುಶನ



ಪಡೆದು, ಗಡದ್ದಾಗಿ ಹೋಳಿಗೆ, ಮಾವಿನ ಹಣ್ಣಿನ ಸೀಕರ್ಣೆ ಹೊಡೆದು ತೃಪ್ತರಾಗಬೇಕೆಂಬ ಬಯಕೆ ಉತ್ಕಟವಾಗಿ, ಅದನ್ನು ಹೊರಗೆಡುಹದೇ, ಇವರ್‍ಯಾಕೆ ವಿನಾಕಾರಣ ತಡ ಮಾಡ್ತಿದ್ದಾರೆ ಅನ್ನುವ ಪ್ರಶ್ನೆಗೆ ಉತ್ತರ ಅರಸುತ್ತಿದ್ದರು. ಗೌರಿ ಅಂಗಳಕ್ಕೆ ಬರುತ್ತಿದ್ದಳು, ದಿಡ್ಡಿ ಬಾಗಿಲ ತೋಳು ಹಿಡಿದು ಬೀದಿಯ ತುದಿವರೆಗೂ ನೋಟ ಹರಿಸಿ, ನಡೆದಾಡುವ ಮಂದಿಯಲ್ಲೊಬ್ಬ ತನ್ನ ತಮ್ಮನಿರಬಹುದೇ ಎಂದು ಅರೆಗಣ್ಣಿಂದ ಹುಡುಕುತ್ತಿದ್ದಳು. ಗೌರಿಯನ್ನು ಕಂಡಾಗಲೊಮ್ಮೆ ಟೆಂಪೊ ಡ್ರೈವರ್ ಚೆನ್ನೊ, ತಾನು ತಯಾರಾಗೇ ಇದ್ದೀನಿ, ನೀವೆಲ್ಲ ಹತ್ತುವುದೇ ತಡ, ಗೇರ್ ಬದಲಾಯಿಸಿಬಿಡ್ತೀನಿ ಅನ್ನುವ ಹಾಗೆ ಹಾವಭಾವದಲ್ಲಿ ಸೂಚಿಸುತ್ತಲೇ ಇದ್ದ.

ಸೀಜನ್ ಶುರುವಾದಾಗಿನಿಂದಲೂ ಮಾವಿನ ಹಣ್ಣಿನ ಸೀಕರ್ಣೆಯನ್ನು ಉಂಡಿರದಿದ್ದ ಚೆನ್ನೊಗೆ, ತನ್ನ ಟೆಂಪೋದಲ್ಲಿ ಮನುಷ್ಯರಿಗಿಂತ ಮೊದಲೇ ತಮ್ಮ ಜಾಗ ಭದ್ರಪಡಿಸಿಕೊಂಡು ಕುಳಿತಿದ್ದ ಮಾವಿನ ಹಣ್ಣಿನ ಬುಟ್ಟಿಯ ವಾಸನೆ ಮನಸ್ಸು ಕೆಡಿಸಿಬಿಟ್ಟಿತ್ತು.

ಮನೆಯಂಗಳದ ಮರದ ನೆರಳಿನಲ್ಲಿ ಕಟ್ಟೆಯ ಮೇಲೆ ಕುಳಿತು ಅದೆಷ್ಟು ಸಾರಿ ನಸ್ಸೆ ಏರಿಸಿದರೋ ಗೌರಿಯ ಅಪ್ಪ. ನಸ್ಸೆ ಡಬ್ಬಿ ಬನಿಯನ್ ಕಿಸೆಯಿಂದ ಕೈಗೆ ಬಂದಾಗಲೊಮ್ಮೆ ಒಂದು ಚಿಟಿಕೆ ಮೂಗಿನ ಹೊಳ್ಳೆಗೆ ಏರಿಸುವ ಹಾಗೆ, ಮಗಳು ಅಂಗಳಕ್ಕೆ ಬಂದಾಗಲೊಮ್ಮೆ, ''ಆಯ್ತಾ ಮಗ?'' ಅಂತ ಕೇಳುತ್ತಲೇ ಇದ್ದರು. ''ನೀವು ಹೋದಾಗ ತಮ್ಮ ಏನಂದಿದ್ದ ಬಾಬಾ? ಬರ್ತೀನಂದಾನಲ್ಲ?'' ಅಂತ ಮಗಳು ಕೇಳಿದ್ದು ಮರೆತಿದ್ದ ಅಪ್ಪ, ಇವರೆಲ್ಲ ಸುಮ್ಮನೆ ಯಾಕ ತಡ ಮಾಡ್ತಾರ ಅನ್ನುವ ಯೋಚನೆಯಲ್ಲಷ್ಟೇ ಇದ್ದ. ಮನೆಯಲ್ಲಿನ ಚಹಾದ ಕಪ್ಪುಗಳಿಗಿನ್ನೂ ವಿಶ್ರಾಂತಿ ದೊರೆತಿರಲಿಲ್ಲ. ಚಹಾ ಭಾಳಾಯ್ತು ಅಂತ ಹೇಳುತ್ತಿದ್ದವರೆಲ್ಲ ತಿರಸ್ಕರಿಸಲು ಮನಸ್ಸಿಲ್ಲದೇ, 'ಅರ್ಧ ಕಪ್ಪು ಕೊಡು ತಂಗಿ' ಅಂತ ಹೇಳುತ್ತಲೇ ಕುಡಿದು ಮೈ ಬೆಚ್ಚಗೆ ಮಾಡಿಕೊಳ್ಳುತ್ತಿದ್ದರು. ''ಗಾಡಿ ಚಾಲೂ ಆಗಾತನ ದುಕಾನ ಬಾಗಲು ತೆರದಿದ್ರ, ತೀನ್ ಚಾರಸೆ ರೂಪಾಯಿ ಯಾಪಾರ ಆಗ್ತಿತ್ತಲ್ಲ'' ಅಂತ ಗೌರಿಯ ಗಂಡನ ವ್ಯಾಪಾರಿ ಮನಸ್ಸಿನ ಆಶೆ. ಮನೇಲಿ ಕಾರಣ ಇಟಗೊಂಡು ದುಕಾನ ತೆರಕೊಂಡು ಕುಂತಾನಲ್ಲ ಅಂತ ಮಂದಿ ಅಂದಾರು ಅನ್ನುವ ತನ್ನ ಅಂದಾಜು ಸರಿಯಲ್ಲವೇನೋ ಅಂತ ತಡವಾಗಿ ಅನ್ನಿಸಿತು. ಮನೆಬಿಟ್ಟು ಹೊರಗೆ ಬಂದ ಎಳೆಯ ಮಕ್ಕಳ ಹೊಟ್ಟೆ, ಬಾಗಿಲಿಲ್ಲದ ಅಗಸಿಯಂತೆ ತೆರೆದುಕೊಂಡೇ ಇರುತ್ತದೆ. ಕುಂಯ್... ಕುಂಯ್ ಅನ್ನುತ್ತ ಅಪ್ಪಂದಿರ ಮಗ್ಗುಲಲ್ಲಿ ಕುಳಿತು, ತೋಳು ಹಿಡಿದು, ಜೋಲು ಮೋರಿ ಮಾಡಿಕೊಂಡ ಮಕ್ಕಳ ಕೈಗೆ ಡಬಲ್‌ರೊಟ್ಟಿ ಕೊಡುತ್ತಿದ್ದ ಗೌರಿಯ ಹಿರೀಮಗ ಈಶ್ವರ. ಅಂಗಡದಲ್ಲಿ ಕುಣಕುಣದು ಆಡುತ್ತಿದ್ದ ಮಕ್ಕಳೆಲ್ಲ ಒಬ್ಬೊಬ್ಬರಾಗಿ ಮನೆಯೊಳಗೆ ಹೊಕ್ಕು ಅಂಗಳ ಬರಿದಾಯಿತು. ಹುಲ್ಲು ಮೇಯಲು ಹೋಗಿದ್ದ ತನ್ನವ್ವ, ಸೂರ್ಯ ತನ್ನ ಶಾಖ ಕಳೆದುಕೊಂಡು ಹಣ್ಣಾಗಿ ತಾಯಿ ಒಡಲು ಸೇರುವವರೆಗೆ ಮರಳಿ ಬರಲಾರಳು, ತನಗೆ ಹಾಲುಣಿಸಲಾರಳು ಅನ್ನುವುದು ಗೊತ್ತಿದ್ದ ಪುಟ್ಟ ಪಂಚಕಲ್ಯಾಣಿ ಕರು, ಹುಲ್ಲು ಕಡ್ಡಿಗಳನ್ನು ತಿನ್ನಲೋ ಬೇಡವೋ ಅನ್ನುವ ಹಾಗೆ ಬಾಯಲ್ಲಿರಿಸಿಕೊಂಡು ಚೀಪುತಿತ್ತು. ಅಂಗಳದ ಮೂಲೆಯೊಂದರಲ್ಲಿ ದನಿ, ಚಲನೆಗಳಿಲ್ಲದ ಗುಲಾಬಿ ಗಿಡ, ತನ್ನ ಮೈ ತುಂಬ ಹೂ ಅರಳಿಸಿಕೊಂಡು ಸುಂದರವಾಗಿ ಕಾಣಿಸುತ್ತಿತ್ತು. ಮಕ್ಕಳು ಮತ್ತು ಮಂದಿಯಷ್ಟೇ, ಗೌರಿ ಗುಲಾಬಿಯನ್ನು ಪ್ರೀತಿಸುತ್ತಿದ್ದಳು. ತಾನು ನಗರಕ್ಕೆ ಹೋದಾಗ ಮಗಳ ಕಿವಿಯೋಲೆಯಷ್ಟೆ ಪ್ರೀತಿಯಿಂದ ಈ ಗುಲಾಬಿಯ ಸಸಿಯನ್ನೂ ತಂದು, ನಾಟಿ ಮಾಡಿ, ನೀರು, ಗೊಬ್ಬರ ನೀಡಿ ಸೊಂಪಾಗಿ ಬೆಳೆಯುವಂತೆ ಮಾಡಿದ್ದಳು.

ಮತ್ತೊಂದು ಚಿಟಿಕೆ ನಸ್ಸೆ ಮೂಗಿನ

ಹೊಳೆಗಳಿಗೇರಿಸಿದ ಗೌರಿಯ ಅಪ್ಪ, ಮೊದಲನೇ ಸಾರಿ ಅನ್ನುವಂತೆ ಎವೆಯಿಕ್ಕದೇ ಅರಳಿದ ಗುಲಾಬಿಗಳ ದಿಟ್ಟಿಸುತ್ತ... ಎಲ್ಲ ಹೂಗಳ ಬಣ್ಣ, ಅಂದ ಒಂದೇ ಆದರೂ ಒಂದೇ ರಕ್ತ ಹಂಚಿಕೊಂಡು ಹುಟ್ಟುವ ಮಕ್ಕಳ ಮೈ ಮನಸ್ಸುಗಳೇಕೆ ಹೀಗಿರುವುದಿಲ್ಲ? ಅನ್ನುವ ತತ್ವ ಒರೆಗಲ್ಲಿಗೆ ಹಚ್ಚಿ ನೋಡಿದರು. ಅಳುತ್ತಿದ್ದ ಮಕ್ಕಳ ಕಾಟ ಹೆತ್ತವರಿಗೆ ಕಿರಿಕಿರಿ ಅನ್ನಿಸತೊಡಗಿತು. ಮನೆಯ ಸೂರಿನಲ್ಲಿದ್ದ ಸೂರ್ಯನ ಬಿಸಿಲು ಗೋಡೆಗಿಳಿಯತೊಡಗಿತು. ಸೆರಗಿನಿಂದ ಮುಖ ಒತ್ತಿಕೊಳ್ಳುತ್ತ ಅಂಗಳದಲ್ಲಿನ ಕಟ್ಟೆಯ ಬಳಿ ಬಂದ ಗೌರಿ, ಅಪ್ಪನೆದುರು ನಿಂತು,

"ಬಿಸಲೇರತು, ಯಾಕೋ ತಮ್ಮ ಬರಲೇ ಇಲ್ಲಲ್ಲ ಬಾಬಾ?" ಅಂದಳು. ಇದಕ್ಕಾಗೇ ಮಗಳು ಇಷ್ಟೊತ್ತು ಕಾಯುತ್ತಿದ್ದಾಳೆನ್ನುವ ಯೋಚನೆಯೇ ಮಾಡಿರದಿದ್ದ ಅಪ್ಪ, ಈಗ ವಾಸ್ತವ ಅರಿತಿದ್ದರು. ಒಮ್ಮೆ ಮಗಳ ಮೇಲೆ ಕೋಪ ಬಂದರೆ, ಅದರ ಬೆನ್ನಲ್ಲೇ ತನ್ನ ತಮ್ಮನ ಮೇಲೆ ಈ ಅಕ್ಕನಿಗದೆಷ್ಟು ಅಕ್ಕರೆ ಅನ್ನಿಸಿ ಸಮಾಧಾನವೂ ಪಟ್ಟುಕೊಂಡರು. ಮದುವೆಗೆ ಮುಂಚೆ ಮಗಳ ಪ್ರೀತಿಯ ತಮ್ಮನಿಗೆ ಕೋಪದಲ್ಲಿ ತಾನು ಬಯ್ದಾಗ ಅಥವಾ ಹೊಡೆದಾಗ ಅವನಿಗಿಂತ ಇವಳೇ ಹೆಚ್ಚಾಗಿ ಅಳುತ್ತಿದ್ದ, ಸಂಕಟ ಪಡುತ್ತಿದ್ದ ದಿನಗಳೂ ಇವರಿಗೆ ನೆನಪಾದವು.

"ಅಲ್ಲೇ ಮಗ, ತಮ್ಮ ಬರ್ತಾನಂತ ಈಟೊಂದು ಟೇಮ್ ಮಡದಾ? ಎಲ್ಲಾ ತಯಾರಾಗುತ್ಲೇ ಹೊಂಟಿದ್ರ, ಇಷ್ಟೊತ್ತಿಗಿ ನಾವೆಲ್ಲ ಗುಡ್ಡ ಸೇರಿ, ಗುಂಡ ಮುಳುಗಿ, ಪೂಜೆ ಪುನಸ್ಕಾರ ಮಾಡಿ ಅರ್ಧ ಕಾರ್ಯ ಮುಗೀತಿತ್ತು. ಅಮಾಸಿ ದಿನ ಮುಗಲು ನೋಡಿ ಚಂದ್ರಾಮಗ ಹುಡುಕಿದಂಗಾಯ್ತು ನಿನ್ನ ಪಾಡು. ನಿನ್ನ ತಮ್ಮ ಬರದು, ಸೂರ್ಯ ಪಶ್ಚಿಮದಾಗ ಹುಟ್ಟದು ಎರಡೂ ಒಂದೇ. ಖುದ್ದ ನೀನೇ ಆಟೊಂದು ಹೇಳಿ ಬಂದಿದ್ದಿ ಅಂದಮ್ಯಾಲ ನಿನ್ನ ಮೇಲಿನ ಪ್ರೀತಿಯಿಂದ ಬಂದ್ರೂ ಬಂದಾನು. ಆದರ ಇಲ್ಲಿಗಿ ಯಾಕ ಬರ್ತಾನ್ಹೇಳು? ಬಂದರ ಸೀದಾ ಗುಡ್ಡಕ್ಕೇ ಬಂದಾನು. ಅಂವ ಬಂದಾನಂತ ದಾರಿ ನೋಡುದು ಬ್ಯಾಡ, ಇನ್ನೇನು ಸೂರ್ಯ ನೆತ್ತಿ ಮ್ಯಾಲ ಬರೋ ಹೊತ್ತಾಯ್ತು, ಹೈಗೈ ಮಾಡ ಬ್ಯಾಡ ಇನ್ನ ಎಲ್ರೂ ಹೊರ್ಳಗ ಆಗ್ರಿ" ಅಂತ ಹೇಳಿ ಅಂಗಳ ದಾಟಿ ಹೊರಗೆ ಬಂದರು. ಎಲ್ಲರೂ ನಡೀರಿ.... ನಡೀರಿ ಅಂತ ಹೇಳುತ್ತಲೇ ಹೊರಗೆ ಬಂದರು. ಈ ಮಾತಿಗಾಗಿ ಸರಿ ಸುಮಾರು ಮೂರು ಗಂಟೆಯಿಂದ ಕಾಯುತ್ತಿದ್ದ ಮಕ್ಕಳು, ನಾ ಮುಂದೆ ತಾಮುಂದೆ ಅಂತ ಓಡೋಡಿ ಟೆಂಪೋ ಹತ್ತಿ, ಕಿಟಕಿ ಬದಿಯ ಸೀಟು ಹಿಡಿದುಕೊಂಡು ಕುಳಿತವು. ಪಾಪ, ಪ್ರಪಂಚ ಜ್ಞಾನವೇ ಅರಿಯದ ಅವಕ್ಕೇನು ಗೊತ್ತು ಎಲುಬು, ಚರ್ಮ ಬಲಿತವರು ತಮ್ಮನ್ನೆಲ್ಲ ಕೈ ಚೀಲದಂತೆ ಎಳೆದುಕೊಂಡು ತೊಡೆಯ ಮೇಲೆ ಕೂರಿಸಿಕೊಂಡೋ, ಇಲ್ಲ ಮುಂದೆ ನಿಲ್ಲಿಸಿ ಕೊಂಡೊ ಹೊರಡುತ್ತಾರನ್ನುವ ಪೂರ್ಣ ಸತ್ಯ. ತಂಬಾಕು ಹಾಕುವ, ಚುಟ್ಟ ಸೇದುವ ಮಂದಿ, ಕಿಟಕಿ ಸೀಟು ಬೇಕೆಂದು ದೈನ್ಯದಿಂದ ಕೇಳುವಂತೆ ನಟಿಸಿ ಸಫಲರಾಗಿದ್ದರು. ಮಾವಿನ ಹಣ್ಣಿನ ಬುಟ್ಟಿಯ ಮೇಲೆ ಕೂಡುವ ಹುನ್ನಾರ ನಡೆಸಿದ್ದ ಸಿಂಬಳ ಮೂಗಿನ ಪೋರನಿಗೆ ಗದರಿಸಿ ಹಿಂದೆ ಸರಿಸಿದ ಚೆನ್ನೂ, ತನ್ನ ಇಷ್ಟದೇವತೆಗಳನ್ನೆಲ್ಲ ಮನದೊಳಗೆ ನೆನೆಯುತ್ತ ಟೆಂಪೂ ಭರ್ರ ಅನ್ನಿಸಿದ. ಭರ್ರಂದ ಸದ್ದಿಗೆ ತಾಳ ಹಾಕಿದಂತೆ ಒಳಗಿನ ಹುಡುಗರು ಹೋ ಅಂದವು. ಟೆಂಪೋದ ಸವೆದ ಟಾಯರ್‌ಗಳು ತಗ್ಗಿನಲ್ಲಿಳಿಯುತ್ತ, ಕಲ್ಲುಗುಂಡುಗಳೊಂದಿಗೆ ಚಕ್ಕಂದವಾಡುತ್ತ ನಿಧಾನವಾಗಿ ಚಲಿಸಿದವು. ಹಿಂದೆ ಏಳುತ್ತಿದ್ದ ಬಿಳೀ ಧೂಳು ತನ್ನ ಜನ್ಮಾಂತರದ ವೈರಿ ಅನ್ನುವ ಹಾಗೆ ಎಂದೋ ಸರ್ವಿಸಿಂಗ್ ಮಾಡಿಸಿಕೊಂಡಿದ್ದ ಎಂಜಿನ್ನು, ದಟ್ಟವಾದ ಕಪ್ಪು ಹೊಗೆಯಿಂದ ಅದನ್ನು ಮುಚ್ಚಿಬಿಡುತ್ತಿತ್ತು. ಮನೆಯ ಮುಂದಿನ ಪಾರಿಜಾತ ಗಿಡದ

ನೆರಳಲ್ಲಿ ಕುಳಿತು ಮಗಳ ತಲೆಯಲ್ಲಿ ಹೇನು ಹುಡುಕುತ್ತಿದ್ದ ಸುಗುಲಮ್ಮ, ದೂರದಲ್ಲಿ ಬರುತ್ತಿದ್ದ ಟೆಂಪೋ ನೋಡಿ, ಚುಟ್ಟಂದ ಪಟ್ಟಂದ ... ಸಣ್ಣದ್ದ ಹಾರೆ ಅಂತ ಕರೀತಿದ್ದ ಗೌರಮ್ಮ, ದೇವರ ಕಾರ್ಯಕ್ಕೆ ತನ್ನ ಕರೆಯಲಿಲ್ಲವಲ್ಲ ಅನ್ನುವ ಕಂಡದಂಥ ಕೋಪ ಮಗಳ ತಲೆಯ ಮೇಲೆ ತೀರಿಸಿಕೊಂಡು. "ಏ ನಡಿಯೇ ಒಳಗ, ಮದ್ವ್ಯಾಣಾಯ್ತು ಜಳಕ ಮಾಡಸ್ತೀನಿ" ಅಂತ ಹೇಳುತ್ತ ಒಳಗೆಳೆದು



ಕೊಂಡು ಹೋಗಿ ದಢಕ್ಕನೆ ಬಾಗಿಲು ಹಾಕಿಕೊಂಡಳು. ಟೆಂಪೋದೊಳಗಿದ್ದ ಮಂದಿ ಕೋರಸ್ಸಿನಲ್ಲಿ, 'ಗುಡ್ಡದ ಮುತ್ಯಾ ಮಹಾರಾಜಕೀ ಜೈ' ಅನ್ನುತ್ತಿದ್ದರು. ಟೆಂಪೂ ರೋಡಿಗೆ ಬಂತು. ಒಳಗೆ ಕುಳಿತಿದ್ದ ಗೌರಿ ಎದ್ದು, ಬಾಗಿ ನಿಂತು ಸುತ್ತಲೂ ನೋಡಿದಳು... ತಮ್ಮ ಎಲ್ಲೂ ಕಾಣಲಿಲ್ಲ.

ಮದುವೆಯಾಗಿ ಮೂರು ಮಕ್ಕಳ ತಾಯಿಯಾದರೂ, ಸೀರೆ ಬೇಡ ಒಂದು ಕುಪ್ಪಸದ ಖಣವೂ ಪ್ರೀತಿಯಿಂದ ತಂದು ಕೊಟ್ಟರದ ತನ್ನ ತಮ್ಮನ ಮೇಲೆ ಗೌರಿಗೆ ಅದೇಂಥ ವಾತ್ಸಲ್ಯವೋ. ಅದೂ ಬೇಡ, ಊರಿಂದ ಬರುವಾಗ ಸೊಸೆ-ಅಳಿಯಂದಿರಿಗೆಂದು ಬಟ್ಟೆಬರಿ, ಆಟಿಕೆ, ಅದ್ಯಾಕೆ ಹಣ್ಣು ಹಂಪಲ, ಫೇಡೆ, ಜಿಲೇಬಿಗಳೂ ಹೆಚ್ಚಾಗಿ ತಂದವನಲ್ಲ. ಬರಿದೇ ಕೈ ಬೀಸಿಕೊಂಡು ಬಂದರೆ ಬರಲಿ, ಬಂದವ ಚಹಾ ಕುಡಿದರೆ, ನಾಷ್ಟಾ ಮಾಡುತ್ತಿರಲಿಲ್ಲ, ನಾಷ್ಟಾ ಮಾಡಿದರೆ ಸುತರಾಂ ಊಟ ಬೇಡವೆಂದು ಹೊರಟುಬಿಡುತ್ತಿದ್ದ. ಏನೋ. ಇವಳ ತಮ್ಮನ ಸುದ್ದಿ ಕಟ್ಟಿಕೊಂಡು ಅಂಗಡಿಗೆ ಬರುವ ಗಿರಾಕಿಗಳಿಗೆ ಏನೂ ಆಗಬೇಕಿರಲಿಲ್ಲ. ಹೀಗಿದ್ದೂ, ಕೇಳದೆಯೇ ತನ್ನ ತಮ್ಮ ಬಂದು ಹೋದ ಸಮಾಚಾರವನ್ನು ಕಥೆ ಮಾಡಿ ಹೇಳುತ್ತ ಹೆಮ್ಮೆಪಡುತ್ತಿದ್ದಳು ಗೌರಮ್ಮ.

ಟೆಂಪೋ ಚಲಿಸುತ್ತಲೇ ಇತ್ತು. ನಸುಕಿನಲ್ಲಿಯೇ ಎದ್ದಿದ್ದ ಕೆಲವರು ಕಣ್ಣು ಮುಚ್ಚಿ ಮಲಗಿದ್ದರು. ಮತ್ತೆ ಕೆಲವರು ಭಕ್ತಿಪರವಶರಾಗಿದ್ದರು, ಹಲವರಿಗೆ ಹೋಳಿಗೆ ಸೀಕರ್ಣಿ ನೆನಪಾಗುತ್ತಿದ್ದವು. ಕಿಟಕಿ ಬದಿಯಲ್ಲಿ ನಿಂತ ಮಕ್ಕಳು ಹಿಂದೆ ಓಡಿದಂತೆ ತೋರುತ್ತಿದ್ದ ಗಿಡ ಮರ ನೋಡುತ್ತಿದ್ದವು. ಸಿಡಿಪಿಡಿ ಮಾಡುತ್ತಿದ್ದ ತನ್ನ ಒಂದು ವರ್ಷದ ಕೂಸಿನ ಬಾಯಿಗೆ ಮೊಲೆ ತೊಟ್ಟು ನೀಡಿ ತಲೆ ಸವರುತ್ತಿದ್ದಳು ಪಾರ್ವತಿ. ಆದರೆ ಗೌರಿಯ ಮನಸ್ಸಿನ ತುಂಬ ತಮ್ಮನ ವಿಚಾರವೇ ತುಂಬಿಕೊಂಡಿತ್ತು. ತಾವೆಲ್ಲ ಗುಡ್ಡ ಸೇರಿ, ಗುಂಡ ಮುಳುಗಿ, ಹಸಿಯುಡುಗೆಯಲ್ಲಿ ಧೀನ್ ನಮಸ್ಕಾರ (ದೀರ್ಘದಂಡನಮಸ್ಕಾರ) ಹಾಕೋದಕ್ಕ ಸುರು ಮಾಡೋವ್ಯಾಳೆಕ್ಕ ಸರಿಯಾಗಿ ತಮ್ಮ ಬಂದೇ ಬರ್ತಾನ ಅನ್ನುವ ಆಶೆ ಗೌರಿಯದು.

ಗುಡ್ಡದ ಬುಡದಲ್ಲಿ ಅಷ್ಟು ದೂರದಲ್ಲಿದ್ದ ಭಾರಂಬಾವಿಯ ಬಳಿ ಬಂದು ನಿಂತಿತು ಟೆಂಪೋ. ಹತ್ತುವಾಗ ಎಷ್ಟು ಖುಷಿಯಾಗಿದ್ದವೋ, ಇಳಿಯುವಾಗಲೂ ಅದರೆರಡರಷ್ಟು ಉತ್ಸಾಹ ಮಕ್ಕಳಲ್ಲಿತ್ತು. ಪುಟ್ಟ ಪುಟ್ಟ ಮಕ್ಕಳ ಜವಾಬ್ದಾರಿ ಎಲ್ಲವೂ ಹೆಂಗಸರ ಪ್ರಾರಬ್ಧ ಅನ್ನುವಂತೆ ಗಂಡಸರು ಕೈ ಕಾಲು ಆಡಿಸುತ್ತ, ಬಾವಿಯಲ್ಲಿ ಈಜುತ್ತ, ದೇಹದ ಆಯಾಸ ನೀಗಿಸಿಕೊಳ್ಳುತ್ತಿದ್ದರು. ಬಾವಿಯ

ಮೆಟ್ಟಿಲ ಮೇಲೆ ಮಕ್ಕಳನ್ನು ಕೂಡಿಸಿ ಜಳಕದ ಶಾಸ್ತ್ರ ಮುಗಿಸುತ್ತಿದ್ದರು ಹೆಂಗಸರು. ಕೆಂಡದಂಥ ದೇವರ ಸನ್ನಿಧಿಯಲ್ಲಿ ಪಾಪದ ಸೆರಳಿಗೂ ಆಸ್ಪದವಿಲ್ಲ ಅಂತ ಬಲವಾಗಿ ನಂಬಿದ್ದ ಹೆಂಗಸರು, ಬಾವೇಲಿ ಈಜುತ್ತಿದ್ದ ಪರಪುರುಷರ ಪರಿವೆಯೇ ಇಲ್ಲದೆ, ತಾವೂ ನೀರಿನಲ್ಲಿ ಮುಳುಗಿ ಏಳುತ್ತಿದ್ದರು. ''ತಡ ಆಗ್ತದ ನಡೀರಿನ್ನ'' ಅಂತ ಧೂಳಪ್ಪ ಹೇಳುತ್ತಲೇ ಇದ್ದ. ಮಕ್ಕಳೆಲ್ಲ ಟೆಂಪೊ ಹತ್ತಿದವು. ದೊಡ್ಡವರು ನಡೆದುಕೊಂಡೇ ಗುಡ್ಡದ ಬುಡಕ್ಕೆ ಬಂದರು. ಗೌರಿ ಉಟ್ಟಿದ್ದ ಸೀರೆಯಿಂದ ಇನ್ನೂ ನೀರು ಹನಿಯುತ್ತಲೇ ಇತ್ತು. ಕಾವಿ ತೊಟ್ಟ ಪುರ ವಂತರು, ಹಣೆಯ ಮೇಲೆ ಎದ್ದು ಕಾಣುವಂತೆ ವೀಭೂತಿ ಧರಿಸಿದ್ದರು, ಅರಸಿಣ, ಕುಂಕುಮವೂ ಬಳಿದುಕೊಂಡಿದ್ದರು. ಇನ್ನೇನು ಧೀನ್‌ನಮಸ್ಕಾರ ಹಾಕಲು ಶುರು ಮಾಡಬೇಕು, ಕೊನೆಯ ಬಾರಿ ಅನ್ನುವ ಹಾಗೆ ಸುತ್ತಲೂ ತನ್ನ ತಮ್ಮನಿಗಾಗಿ ಹುಡುಕಿದಳು ಗೌರಿ. ಎದುರಿಗಿದ್ದ ಗುಡ್ಡದಷ್ಟು ಎದೆಭಾರ, ನೋವು ಮೊದಲ ಬಾರಿಗೆ ಗೌರಿ ಗಾದವು. ಅಪ್ಪನನ್ನು ನೋಡಿದಳು. ಕಾರ್ಯ ನಡೀಲಿ ಮಗ, ಸಮಾಧಾನ ಮಾಡ್ಕೊ. ಅಂತ ಕಣ್ಣಲ್ಲೇ ಹೇಳಿದಂತಿತ್ತು. 'ಗುಡ್ಡದ ಮುತ್ಯಾ ಮಹಾರಾಜ ಕೀ ಜೈ...,' 'ಜಗದ್ಗುರು ಮುತ್ಯಾ ಮಹಾರಾಜ ಕೀ ಜೈ' ಸುತ್ತಲಿದ್ದವರು ಹೇಳು ತ್ತಿದ್ದರು. 'ಹರ ಹರ ವೀರಭದ್ರ.., ಸೊಲ್ಲಾಪುರ ಸಿದ್ಧರಾಮ', ಭಕ್ತಿಯಿಂದ ಹೇಳುತ್ತ ಪುರವಂತರು ಮುಂದೆ ಮುಂದೆ ನಡೆದರು. ಒದ್ದೆಯಾಗಿದ್ದ ಶೆಲ್ಯ ಬೆನ್ನ ಮೇಲೆ ಹಾಕಿಕೊಂಡಿದ್ದ ಐನೋರು, ಉದ್ದವಾದ ಪುಂಡಿ ಕಟ್ಟಿಗೆಯಿಂದ ಹತ್ತು ಹನ್ನೆರಡು ಅಡಿಗೊಂದೊಂದು ಗೆರೆ ನೆಲದ ಮೇಲೆ ಕೊರೆಯುತ್ತ ಮುನ್ನಡೆದರು. ಪ್ರತಿ ಗೆರೆಯ ಮೇಲೆ ನಿಂತು, ಗೌರಿ, ಕೈಗಳು ಜೋಡಿಸಿ, ಭಯ ಭಕ್ತಿಯಿಂದ ತನ್ನ ದೇಹದ ಇಡೀ ಮುಂಭಾಗ ಭೂಮಿಗೆ ಸ್ಪರ್ಶಿಸಿ ದೀರ್ಘದಂಡ ನಮಸ್ಕಾರ ಹರಕೆ ಸಲ್ಲಿಸುತ್ತಿದ್ದಳು. ಹರಕೆ ಸಲ್ಲಿಸುತ್ತಿರುವ ಈ ತಾಯಿಯ ಪುಣ್ಯದಿಂದ, ತಿಳಿದೋ ತಿಳಿಯ ದೆಯೋ ತಾವು ಮಾಡಿರುವ ಪಾಪದ ತೂಕ ಒಂದಿಷ್ಟಾದರೂ ಕಡಿಮೆಯಾಗಲಿ ಎಂದು ಗೌರಿಯ ಹಿಂದೆ ಬರುತ್ತಿದ್ದವರೆಲ್ಲ ದೇವರಲ್ಲಿ ಬೇಡುತ್ತಿದ್ದರು. ಇನ್ನು ಮುಂದಕ್ಕೆ ಯಾರಪ್ಪ ಬಂದರೂ, ಒಂದು ಹೆಜ್ಜೆ ಇಡಲೂ ನಾನೊಲ್ಲೆ ಅಂತ ಹಟ ಮಾಡುತ್ತಿದ್ದ ಸುಕೋಮಲ ಪಾದಗಳ ಕೂಸನ್ನು ಅದರಪ್ಪ ಅನಾಮತ್ತಾಗಿ ಎತ್ತಿಕೊಂಡು, ತನ್ನ ಹೆಗಲ ಮೇಲೆ ಕೂಡಿಸಿಕೊಂಡು ನಡೆದ. ತುಕ್ಕು ಹಿಡಿದ ಸೈಕಲ್ಲಿನ ಹಿಂಬದಿಯಲ್ಲಿನ ಡಬ್ಬದಿಂದ ನೀರು ಹನಿಯುತ್ತಿರುವುದು ಕಂಡ ಇನ್ನೊಬ್ಬ ಪೋರ, ಕೈ ಕಣ್ಣ ಸನ್ನೆಯಿಂದಲೇ ಐಸ್‌ಕ್ರೀಂ ಕೊಡಿಸೆಂದು ತನ್ನವ್ವನಲ್ಲಿ ಕೇಳುತ್ತಿರು ವಾಗ, ಅವ್ವ ಅನ್ನಿಸಿಕೊಂಡವಳು ಮೂಗಿನ ಮೇಲೆ ತೋರು ಬೆರಳಿಟ್ಟು ಗುಡ್ಡ ತೋರಿಸುತ್ತ, ದೇವರಿಗೆ ಸಿಟ್ಟು ಬರುತ್ತದೆ ಅನ್ನುವಂತೆ ಭಯದ ಸೂಚನೆ ನೀಡುತ್ತ, ಸುಮ್ಮನಾಗಿಸುತ್ತಿದ್ದಳು. ಹಿಂದೆ ಹಿಂದೆ ನೋಡುತ್ತಲೇ ಅವ ಮುಂದೆ ಹೆಜ್ಜೆ ಇಡುತ್ತಿದ್ದ.

ಮುತ್ಯಾನ ಗರ್ಭಗುಡಿಯವರೆಗೂ ಬಂದ ಗೌರಿಯ ನಿಸ್ತೇಜ ಕಣ್ಣುಗಳು ಭಾರವಾದಂತಾಗಿ ಮುಚ್ಚಿಕೊಳ್ಳುತ್ತಿದ್ದವು. ಬೆಳಿಗ್ಗೆಯಿಂದ ಬಾಯಿಗೆ ಹನಿ ನೀರೂ ಹಾಕಿರದಿದ್ದವಳಿಗೆ ಬವಳಿ ಬಂದಂತಾಗಿ ಅಶಕ್ತತೆಯಿಂದ ಕುಸಿದುಬಿಟ್ಟಳು. 'ಮುತ್ಯಾಗ ಹರಕೆ ಸಲ್ಲತು', ಒಬ್ಬ ಹೇಳಿದರೆ, ಇನ್ನೊಬ್ಬ, 'ಐನೋರಪ್ಪ, ಪೂಜಾರಿ ಬಲ್ಲಿ, ಮುತ್ಯಾನ ತೀರ್ಥ ಇಸಕೋರಿ..., ಗೌರಮ್ಮನ ಕುಡಸ್ರಿ' ಅನ್ನುತ್ತಿದ್ದ. ಗೌರಿಯ ದೇಹದ ಮುಂದಿನ ಭಾಗ ಪೂರ್ತಿ ಮಣ್ಣಿನಲ್ಲಿ ಅದ್ದಿದಂತಿತ್ತು. ಅವಳು ನಿಧಾನ ಕಣ್ಣುಬಿಟ್ಟಳು. ಗುಡಿಯ ಪೂಜಾರಿ ಪೂಜೆ ಮುಗಿಸಿ, ಗಂಟೆನಾದ ಮೊಳಗಿಸುತ್ತ ಮಂಗಳಾರತಿ ತಂದ. ಹೊಸ ತಾಮ್ರದ ಬಿಂದಿಗೆಯ ಮಡಿ ನೀರು ಗೌರಿಯ ಮೇಲೆ ಧೂಳಪ್ಪ ಎರೆದ. ನಡುಗುತ್ತಿದ್ದ ಗೌರಿಯ ಮೈ ಒರೆಸಿ ಸಂಗಮ್ಮ ಹೊಸ ಸೀರೆ ಉಡಿಸಿದಳು.

ಭಕ್ತಿಯಿಂದ ಮತ್ತೊಮ್ಮೆ ದೇವರಿಗೆ ಕೈ ಮುಗಿದ ಗೌರಿ, "ಬಾಬಾ ಎಲ್ಲಿ?... ನನ್ನ ತಮ್ಮ ಬಂದನಾ?" ಕೇಳಿದಳು. ಅಪ್ಪ ಅಡುಗೆಯವರ ಬಳಿ ಇರುವುದನ್ನು ಹೇಳಿದ ಧೂಳಪ್ಪ, ಇನ್ನೂ ತಮ್ಮ ಬಂದಿಲ್ಲ ಅನ್ನುವುದೂ ಹೇಳಿದ.

ಎರಡು ಗುಂಪಾಗಿ ಬಂದಿದ್ದ ತರುಣರು ಎರಡು ಗಂಟೆಗೆ ಮೊದಲು ತಮಗೆ ಊಟಕ್ಕೆ ಬುಲಾವ್ ಬರದು ಅನ್ನುವುದು ಖಾತ್ರಿ ಮಾಡಿಕೊಂಡೇ, ಮುತ್ಯಾನ ಗುಡಿ ಹಿಂದಿನ ಆಲದ ಕಟ್ಟೆಯ ನೆರಳು ಆರಿಸಿಕೊಂಡಿದ್ದರು. ಹೊಚ್ಚ ಹೊಸ ಇಸ್ಪೀಟು ಬೆರಸುತ್ತ, ಹಂಚುತ್ತ ಖುಷಿ ಪಡುತ್ತಿದ್ದರು. ಕಾರ್ಡು ಜೋಡಿಸುತ್ತ ಸೀಕ್ವೆನ್ಸು, ಟ್ರಿಲ್ಲು ಬಿದ್ದಿರಲಿ ದೇವರೆ ಅಂತ ಒಬ್ಬ; ಹ್ಯಾಂಡ್‌ರಮ್ಮಿ ಬೀಳಂಗ ಮಾಡು ಮುತ್ಯಾ ಅಂತ ಇನ್ನೊಬ್ಬ ದೇವರಲ್ಲಿ ಮೊರೆ ಇಡುತ್ತಿದ್ದ.

ಅತ್ತ ಭರದಿಂದ ಅಡುಗೆಯ ಸಿದ್ಧತೆ ನಡದಿತ್ತು. ಇತ್ತ ಬಂದವರೆಲ್ಲ ಗುಡಿಯ ವಿಶಾಲವಾದ ಅಂಗಳದ ನೆರಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಅನಾರೋಗ್ಯದಿಂದ ಮಲಗಿದ್ದ ವೆಳು ಇದೀಗ ಸುಧಾರಿಸಿಕೊಳ್ಳುತ್ತಿದ್ದಾಳೆನ್ನುವಂತೆ ಕಾಣುತ್ತಿದ್ದ ಗೌರಿಯನ್ನು ಕಂಡು ಇಳೀವಯಸ್ಸಿನ ಚಂದಮ್ಮ, "ನಿನ್ನ ಮಾರಿ ಮ್ಯಾಲ ಅದೆಂಥ ಖಳೀನೇ ಮಗ ಗೌರಮ್ಮ. ಅಂತೂ ನಿನ್ನ ಹರಕಿ ಈ ಗುಡ್ಡದಪ್ಪಗ ಸಲ್ಲಿತು ಬಿಡು!" ಅನ್ನುತ್ತಿದ್ದಳು. "ಇನ್ನ ಆಯ್ತು ಬಿಡು ತಂಗಿ ಗೌರಮ್ಮ, ನಿನ್ನ ಸಣ್ಣ ಮಗನಿಗಿ ಉರಿ ಬರದು, ನಿದ್ದೀಗಣ್ಣಾಗ ಸಾಯ್ತಿನಿ ಅನ್ನದು, ಗೊತ್ತು ಗುರಿ ಇಲ್ಲದೆ ಅಡವಿ, ಗುಡ್ಡ ಸುತ್ತದು, ಎಲ್ಲ ಕಡಿಮಿ ಆಗ್ತದ. ಅದೆಲ್ಲ ಗುಡ್ಡದ ಮುತ್ಯಾ ತಾನೇ ತಗೊಂಡು ನಿನ್ನ ಮಗನಿಗಿ ದೊಡ್ಡ ಆಶಿ ಕುಡ್ತಾನ" ಅಂತ ನೆರೆಮನಿ ನೀಲಮ್ಮ ಹೇಳುತ್ತಿದ್ದಳು. ಈಗಲೂ ಗೌರಿಯ ಕಣ್ಣು ತನ್ನ ತಮ್ಮನನ್ನು ಹುಡುಕುತ್ತಲೇ ಇದ್ದವು. ಸರಸರನೆ ಬಂದ ತನ್ನ ಅಪ್ಪನನ್ನು ಕಂಡು ಗೌರಿ,

"ತಮ್ಮ ಬಂದ್ನಾ ಬಾಬಾ?" ಅಂತ ಕೇಳಿದಳು.

"ನೀ ಜರಾ ಹೀಂಗ ಬಾ ಮಗ" ಅಂತ ಕರೆದುಕೊಂಡು ಹೋದ ಅಪ್ಪ,

"ಅಲ್ಲ. ಮಗಾ ಗೌರಾ, ನಿನ್ನ ತಮ್ಮನ ಮೊಂಡುತನ ನಿನಗೇನು ಗೊತ್ತಿಲ್ಲ? ಬಂದನಾ ಬಂದನಾ ಅಂತ ಕೇಳಿದ್ರ, ಅಂವ ಬಂದು ಬಿಡ್ತಾನ? 'ಕಾರಣ, ಕರ್ತೂಪ ಅಂತ ಒಣ ಖರ್ಚು ಮಾಡ್ತೀರಿ, ದೇವರು-ದಿಂಡರು ಅಂತ ಊರ ಮಂದಗಿ ಊಟ ಹಾಕ್ತೀರಿ, ಕಲ್ಲು ದೇವರ ಮುಂದ ಕುಂತು ಕಣ್ಣೀರಿಟ್ಟರ ಕಷ್ಟ ಪರಿಹಾರ ಆಗಲ್ಲ. ಹಾಂಗೇನಾದ್ರೂ ಆಗ್ತಿತ್ತಂದ್ರ ಈವತ್ತು ಗಲ್ಲಿ, ಗಲ್ಲಿಯೊಳಗ ಡಾಕ್ಟರಗಳು ಇರ್ತಿರಲಿಲ್ಲ. ಮೊದಲು ನಮ್ಮ ಮನಸ್ಸು ಶುದ್ಧ ಇರಬೇಕು, ಹಸಿದವರಿಗಿ ತುತ್ತು ಹಾಕೋ ದೊಡ್ಡತನ ಇರಬೇಕು. ಅಳುವವರ ಕಣ್ಣೀರು ಒರಸೋ ಅಂತಃಕರಣ ಇರಬೇಕು. ಹುಟ್ಟಿದ ಪ್ರತಿಯೊಬ್ಬರಿಗೂ ಸುಖ-ಸಂತೋಷ, ದುಃಖ, ದುಮ್ಮಾನ ನೋವು-ನಲಿವು, ರೋಗ ರುಜಿನ ತಪ್ಪಿದ್ದಲ್ಲ. ಇವೆಲ್ಲ ಪ್ರಕೃತಿ, ಪರಿಸರದ ಪ್ರಭಾವ. ಆಸ್ತಿಕನಾಗಿರಲಿ, ನಾಸ್ತಿಕನಾಗಿರಲಿ ಹುಟ್ಟಿನ ಬೆನ್ನಿಗಂಟಕೊಂಡೇ ಸಾವೂ ಬಂದಿರ್ತದ, ಇಲ್ಲಿ ಯಾರೂ ಅಜರಾಮರರಲ್ಲ, ಇರುವಷ್ಟು ದಿವಸ ಬದುಕಬೇಕಷ್ಟೆ...' ಮಾತೆತ್ತಿದ್ರ ಹೀಂಗೆಲ್ಲ ವಾದ ಮಾಡೋ ನಿನ್ನ ತಮ್ಮ ದೂರದ ಊರಿಂದ ಹರಕಿ ಕಾರ್ಯಕ್ಕ ಬಾ ಅಂದ್ರ, ಹ್ಯಾಂಗ ಬಂದಾನು ಹೇಳು. ಸುಮ್ಮನೆ ಅಂವನ ದಾರಿ ನೋಡದು ಬಿಟ್ಟುಬಿಡು ಗೌರಿ. ಊಟಕ್ಕೆಲ್ಲ ತಯಾರಾಗ್ಯದ, ಜಲ್ದಿ ಊಟ ಮುಗಿಸಿ ಒಂದೆರಡು ತಾಸು ಆರಾಮ ಮಾಡಿ ಗಾಡಿ ಹತ್ತಿದರಾಯ್ತು' ಅಂದ ಅಪ್ಪ.

"ಅದಕ್ಕಲ್ಲ ಬಾಬಾ, ತಮ್ಮನ ಗುಣ ನನಗೇನು ಗೊತ್ತಿಲ್ಲ? ಗುಡಿ-ಗುಂಡಾರು, ಪೂಜೆ-ಪುನಸ್ಕಾರ ಅಂತ ಕರದಾಗ ಖಡ್ಡಿ ಮುರದಂಗ, ಯಾಕ ನನಗ ಬ್ಯಾರೆ ಕೆಲಸ ಇಲ್ಲೇನು, ನೀ ಎಷ್ಟೇ ತಿಪ್ಪರಲಾಗ ಹಾಕಿದ್ರೂ, ನಾನಂತೂ ಬರಲ್ಲ ಅಂತ ಹೇಳ್ತಿದ್ದಾಂವ, ಅವತ್ತು

ನಾ ಹೋಗಿ, ಬರಬೇಕು ತಮ್ಮ ನೀನು ಅಂತ ಕರದಾಗ, ಆಯ್ತು ಬಿಡು ನಿನಗ ಸಂತೋಷ ಆಗ್ತದಂದ್ರ, ಬಂದು ಹೋಗ್ತೀನಿ ಅಂದಿದ್ದ. ಆ ಮಾತು ಕೇಳಿದಾಗಿನಿಂದ ನಿನ್ನೀತನ ನಾನು ಹಿಗ್ಗಿ ಹೀರಿಕಾಯಿ ಆಗಿದ್ದ, ಆದರ ಬಾಬಾ ನಿನ್ನ ಮುಂದೇನು ಮುಚ್ಚೂಮರಿ, ನಿನ್ನಿ ರಾತ್ರಿ ಎಂಥಾ ಖತರ್‌ನಾಕ್ ಕನಸು ಬಿದ್ದಿತ್ತಂತಿ. ತಮ್ಮ ದೇವರ ಜತಿ ಜಗಳಾ ಆಡ್ತಿದ್ದ. ನೀ ಕಲ್ಲು ದೇವರು, ನಿನಗ ಐಶಾರಾಮ ಬೇಕು. ಪೂಜಿ, ನೈವೇದ್ಯ ಬೇಕು, ದರಿದ್ರರ ಅಳು, ಆಕ್ರಂದನ ಬ್ಯಾಡ, ಹಸಿದವರ ಹೊಟ್ಟಿ ಹಸಿವಿನ ಸಂಕಟ ನಿನಗ ತಿಳಿಯೋದಿಲ್ಲ. ಅಂತ ವಾದ ಮಾಡ್ತಿದ್ದ. ಎಲ್ಲ ಕೇಳಿದ ಮ್ಯಾಲ ದೇವರು ಒಂಟಿ ಕಾಲಮ್ಯಾಲ ಎತ್ತರೆತ್ತರ ಕುಣಿದ. ದೇವರ ಕಣ್ಣೊಳಗ ನಿಗಿನಿಗಿ ಕೆಂಡ ಪುಡಿ ಮಾಡಿ ತುಂಬಿದಂಗಿತ್ತು. ಕುಣಿದಾಡುತ್ತಲೇ ಮುಂದೆ ಬಂದ ದೇವರು, ತಮ್ಮನ ತೋಳು ಹಿಡಿದು ಮೇಲೆತ್ತಿ, ಸರಸರ ಸುತ್ತುತ್ತ, ಬಟ್ಟೆ ಒಗೆಯುವಂತೆ ಬೀಸಿ ಬಿಟ್ಟ. ಬಾಬಾ, ತಮ್ಮ ಗೋಡೆಗೆ ಬಡಿದು ಪುಟಿದು ಬಂದು ದೇವರ ಮುಂದೆ ಬಿದ್ದಾಗ ದೇವರ ಕಣ್ಣಲ್ಲಿದ್ದ ಕೆಂಪುಪುಡಿ ತಮ್ಮನ ಸುತ್ತ ಬಿದ್ದಂಗಿತ್ತು. ಅದಕ್ಕೇ ಬಾಬಾ, ಬರ್ತೀನಂದಿದ್ದ ತಮ್ಮ ಯಾಕ ಬರ್ಲಿಲ್ಲಂತ ನನಗೀಟು ಸಂಕಟ ಆಗಲತ್ತದ'', ಬಿಕ್ಕಿ ಬಿಕ್ಕಿ ಅಳುತ್ತ ಹೇಳಿದಳು. ಮಗಳ ಮಾತು ಕೇಳಿ ಅಪ್ಪನ ಕಣ್ಣು ತುಂಬಿಬಂದವು. ಮಗಳನ್ನು ಎದೆಗವುಚಿಕೊಂಡು ಸಮಾಧಾನಪಡಿಸುತ್ತಿದ್ದ. ಅಷ್ಟರಲ್ಲಿ ಜೊತೆಜೊತೆಯಾಗಿ ಬಂದ ಇಬ್ಬರು ತರುಣರು ಇವರಿಂದ ಸ್ವಲ್ಪವೇ ದೂರದಲ್ಲಿ ನಿಂತು; ''ನಿಮ್ಮಲ್ಲಿ ಗೌರಿ ಅಂದ್ರೆ, ಯಾರು? ಗೌರಮ್ಮನ ತಂದೆಯೂ ಇಲ್ಲಿದ್ದಾರಾ?'' ಅಂತ ಕೇಳಿದರು.

''ಯಾರಪ್ಪ ನೀವು? ಎಲ್ಲಿಂದ ಬಂದ್ರಿ? ನನ್ನ ಮಗಳು ಗೌರಿ ಇವಳೇ'', ನಡುಗುವ ದನಿಯಲ್ಲಿ ಹೇಳಿದರು.

''ಏನಿಲ್ಲ, ನಾವು ಊರಿಂದ ಬಂದೀವಿ. ನಿಮ್ಮ ಮಗನ ದೋಸ್ತರು. ಅರ್ಜೆಂಟಾಗಿ ನಮ್ಮನ್ನಿಲ್ಲಿಗಿ ಕಳಸ್ಯಾನ'', ಮತ್ತೊಬ್ಬ ಅಂದಾಗ ಇವರ ಕಾಲು ಕುಸಿಯುತ್ತಿದ್ದವು.

''ಯಾಕಪ್ಪ? ಅಂವ ಆರಾಮಿದ್ದಾನಲ್ಲ? ಅರ್ಜಂಟ್ ಯಾಕ ಬರಬೇಕಂತ?'', ದುಗುಡದಿಂದ ಮತ್ತೆ ಕೇಳಿದಾಗ, ''ಹೋದ ಮೇಲೆ ನಿಮಗೇ ಎಲ್ಲಾ ಗೊತ್ತಾಗ್ತದ'' ಅಂತ ಬಂದವರು ಹೇಳುತ್ತಿದ್ದಂತೆಯೇ ಗೌರಿ, ''ಏನಾಗಿಲ್ಲ ಧಾಡಿ ಅವಗ, ನಾನು ಕರಕೊಂಡು ಬರ್ತೀನಿ ಅವನ್ನ'' ಎಂದು ಹುಚ್ಚಿಯಂತೆ ಚೀರಿ ಕುಸಿದು ಬಿದ್ದಳು.



ಬರೆದ ಕಥೆ
ಕೆಲವರಾದರೂ ಜೀವಿ ಖುಷಿಪಟ್ಟರೆ
ನಾನೂ ಸಾರ್ಥಕವಾಯಿತೆಂದುಕೊಳ್ಳುತ್ತೇನೆ.
— ಚಿತ್ರಶೇಖರ ಕಂಠಿ





ರೇಖಾ ಕುಂದಾರು

# ಮಳೆ





'ಧಪ್... ಧಪ್... ಚರ್...', ನಾಗರಾಜ ಚೆಕ್ಕೆ ಸೀಳಿ ರಾಶಿ ಹಾಕುತ್ತಿದ್ದ. ಮಳೆಗಾಲ ಇಡೀ ಉರಿಸಲಿಕ್ಕೆ. ಮಳೆ ಬರಲಿ, ಬಿಡಲಿ ನಮ್ಮ ಸಿದ್ಧತೆ ನಾವು ಮಾಡಬೇಕಲ್ಲ. ಮತ್ತೆ ಮೋಡ ಕಪ್ಪುಗಟ್ಟಿದೆ. ಸಾತಮ್ಮ ಹಣೆಗೆ ಕೈ ಅಡ್ಡ ಹಿಡಿದು ಆಕಾಶ ನೋಡುತ್ತಾ, ''ಮಗಾ, ಮಳೆ ಬರುವ ಹಾಗಿದೆ. ಸೌದೆ ಒಳಗೆ ಹಾಕು, ಒದ್ದೆ ಆದರೆ ಕಷ್ಟ'' ಎಂದಳು. ನಾಗರಾಜ ಒಂದು ಕ್ಷಣ ಕೊಡಲಿ ನೆಲಕ್ಕೆ ಊರಿ ನಿಂತು, ''ಊಫ್'' ಎಂದು ಅಮ್ಮನ ಮಾತನ್ನು ಊದಿ ಬಿಡುವವನಂತೆ ನಿಟ್ಟುಸಿರು ಬಿಟ್ಟು, ಕೊಡಲಿ ಎತ್ತಿ ಎತ್ತಿ ಚೆಕ್ಕೆ ಸೀಳತೊಡಗಿದ. ಆಷಾಢ ಹತ್ತಿರ ಬಂತು. ಇನ್ನು ಯಾವಾಗ ಈ ಮಳೆ ಬರುವುದು? ಉರಿದು ಉರಿದು ಭೂಮಿ ಸೀದು ಹೋಗಿದೆ.

''ಮಗಾ, ಹನಿ ಹಾಕುತ್ತದೆ ಈಗ...'', ಐದು ನಿಮಿಷ ಬಾಯಿ ಮುಚ್ಚಿಕೊಂಡಿದ್ದ ಸಾತಮ್ಮ ಮತ್ತೆ ಹೇಳಿದಳು.

''ಯಾಕೆ ಕಿರಿಕಿರಿ ಮಾಡ್ತಿ? ಮೂರು ನಾಲ್ಕು ದಿನದಿಂದ ಕಪ್ಪು ಕಟ್ಟುತ್ತಾ ಇದೆ. ಒಂದು ದೆವ್ವ ಗಾಳಿ ಬಂದರೆ, ಮಳೆಯೂ ಇಲ್ಲ ಏನೂ ಇಲ್ಲ. ಮೋಡ ಹಾರಿಸಿಕೊಂಡು ಹೋಗುತ್ತದೆ. ಇದಿಷ್ಟು ಆಗಲಿ ಇವತ್ತಿಗೆ'', ನಾಗರಾಜ ಸಿಡಿಮಿಡಿಗುಟ್ಟಿದ.

ಎಂಥ ಕಾಲವೋ, ಯಾವುದೂ ಆಗಬೇಕಾದ ಸಮಯಕ್ಕೆ ಆಗುವುದಿಲ್ಲ. ಮಳೆ ಬಿದ್ದರೆ ತಾನೇ ಕೈಯಲ್ಲಿ ನಾಲ್ಕು ಕಾಸು? ನಿಮ್ಗೆ ಇಪ್ಪತ್ತ ಐದು. 'ನಿನ್ನ ಅಪ್ಪಯ್ಯ ಇದ್ದಿದ್ದರೆ ಹೀಗಾಗುತ್ತಿತ್ತೆ?' ಎಂದು ಕಣ್ಣೀರು ಹಾಕುತ್ತಾಳೆ ಅಮ್ಮ. ತಾನಾದರೂ ಏನು ಮಾಡಲಿ? ಜಾತಕ ಕೂಡಿ ಬರಬೇಕು. ವರದಕ್ಷಿಣೆ, ವರೋಪಚಾರ ಅಂತ ಕೈ ಉದ್ದ ಮಾಡದ ಜನರೇ ಆಗಬೇಕು. ತಾನೆಂದೂ ಅಷ್ಟಾಗಿ ಜನರೊಡನೆ ಬೆರೆತವನಲ್ಲ. ತಾನಾಯಿತು, ತೋಟವಾಯಿತು. ಈಗ ಒಮ್ಮೆಲೆ ಓಡಿಯಾಡಬೇಕು. ಆ ಜೋಯಿಸರು, ದಲ್ಲಾಳಿಗಳು... ಉಫ್! ಮನುಷ್ಯ ಎಷ್ಟು ವ್ಯವಹಾರಸ್ಥನಾಗಿದ್ದರೆ ಅಷ್ಟು ಒಳ್ಳೆಯದು! ತನಗೂ ಮದುವೆ ಪ್ರಾಯವಲ್ಲವೆ? ಮಳೆಗಾಲ

ಕಳೆದರೆ ಇಪ್ಪತ್ತೇಳು ಕಳೆದು ಇಪ್ಪತ್ತೆಂಟಕ್ಕೆ ಮೂಗಿಗೆ ಕವಡೆ ಕಟ್ಟಿಕೊಂಡು ಗೇಯುವ ಈ ಕತ್ತೆ ಬಾಳಿನಲ್ಲಿ ತನಗೂ ಒಂದಿಷ್ಟು ಕನಸುಗಳಿಲ್ಲವೆ? ಕಳೆದ ವರ್ಷ ವಿಜಯನ ಮದುವೆ. ಬಾಲ್ಯ ಸ್ನೇಹಿತ. ಒಟ್ಟಿಗೇ ಕಾಲೇಜು ಓದಿ, ಈಗ ಲೆಕ್ಚರರ್ ಆಗಿದ್ದಾನೆ. ಹಳ್ಳಿ ಎಂದರೆ ಮೊದಲಿನಿಂದಲೂ ಕಣ್ಣರಳಿಸುತ್ತಿದ್ದ. 'ಬಾರದಿದ್ದರೆ ನೋಡು, ಅಮ್ಮ, ಇವನು ಮನೆ ಬಿಟ್ಟು ಹೊರಡುವುದಿಲ್ಲ, ನೀವೇ ಹೇಳಿ ಕಳಿಸಿ ಅವನಿಗೆ', ಆಗ್ರಹದಿಂದ ಕರೆದದ್ದರಿಂದ ಹೋಗಿದ್ದೆ.

''ಅವಳಿಗೂ ಹಳ್ಳಿ ಎಂದರೆ ಇಷ್ಟವಂತೆ ನಾಗ್ರಾಜ, ಮದುವೆ ಆದ ಮೇಲೆ ನಾಲ್ಕು ದಿನ ನಿನ್ನ ಮನೆಗೆ ಬಂದು ಝುಂಡಾ ಹೂಡ್ತೇವೆ ಆಯ್ತಾ'' ಎಂದು ತುಂಬ ಆಸೆಯಿಂದ ಹೇಳಿದ್ದ. ಮದುವೆ ಆದಮೇಲೆ ಅವನಿಗೇ ಹೇಳಿದ್ದು ಮರೆತುಹೋಯಿತೋ-ಅಂತೂ ಬರಲಿಲ್ಲ. ಆಗಲೇ ಅವನಿಗೊಂದು ಮಗುವಂತೆ-ಛೇ! ಎಂಥ ಹುಚ್ಚು ಆಲೋಚನೆಯಲ್ಲಿ ಬಿದ್ದೆ ನಾನು? ನಿಮ್ಮಿಯ ವಯಸ್ಸಿನವರೆಲ್ಲ ಎರಡು, ಮೂರು ವರ್ಷದ ಮಕ್ಕಳನ್ನು ಎತ್ತಿಕೊಂಡು ಬರುತ್ತಾರೆ. ಒಬ್ಬಳ ಗಂಡ ಬ್ಯಾಂಕಿನಲ್ಲಿ, ಇನ್ನೊಬ್ಬಳ ಗಂಡ ಆರ್ಮಿಯಲ್ಲಿ, ಹೀಗೆ... ಅವರೊಂದಿಗೆ ಬಂದಾಗ ಅಮ್ಮ ಮನತುಂಬಿ ಮಾತಾಡುತ್ತಾಳಾದರೂ ಅವರು ಹೊರಟುಹೋದ ಮೇಲೆ ಮುಖ ಕಂದಿಹೋಗುತ್ತದೆ. ನಿಮ್ಮಿಗಾದರೂ ಏನನ್ನಿಸುತ್ತದೆಯೋ, ಒಂದು ಮಾತೂ ಹೊರಗೆ ತೋರಿಸಿಕೊಳ್ಳುವ ಹುಡುಗಿಯಲ್ಲ. ಅಂಥವರಿಗೇ ನೋವು ಹೆಚ್ಚು.

ಅಮ್ಮನ ನಿರಂತರ ಒತ್ತಡ, ಯಾಕೋ, ತನ್ನ ಸಂಕೋಚ ಸ್ವಭಾವದಿಂದಾಗಿಯೇ ಏನೋ, ತುಸು ದೂರವೇ ನಿಂತ ಊರವರು, ಕೈ ಜಾರಿ ಹೋಗುವ ಪ್ರಾಯ, ಇವೆಲ್ಲದರ ನಡುವೆ ತಂದೆ ಇಲ್ಲದ ಸಂಸಾರದ ಚುಕ್ಕಾಣಿ ಹಿಡಿದು ತಾನು ನಡು ನೀರಿನಲ್ಲಿ ನಿಂತ ಒಬ್ಬಂಟಿ ಎಂಬ ಭಾವನೆ ಬಂತು ನಾಗರಾಜನಿಗೆ.

''ಮೂಗೂರಿನದೊಂದು ಜಾತಕ ಆಗುತ್ತದಂತೆ. ಹುಡುಗ ತುಂಬ ಓದಿದಾನಂತೆ. ಆದರೂ ಕೆಲಸ ಇಲ್ಲ... ಬೇಸಾಯ. ಯೋಚನೆ ಮಾಡು'' ಎಂದಿದ್ದಳು ಅಮ್ಮ. ಜೋಯಿಸರು ಸಿಕ್ಕಿದ್ದರೇನೋ. ಬೇಸಾಯ ಆದರೆ ಏನಾಯಿತು? ತಾನೂ ಅದನ್ನೇ ಮಾಡುತ್ತಿಲ್ಲವೆ? ಮೊದಲಾದರೆ ಅಮ್ಮನೇ ಒಪ್ಪುತ್ತಿರಲಿಲ್ಲ. ಕೆಲಸದಲ್ಲಿದ್ದವನೇ ಆಗಬೇಕು. ಇರುವುದು ಒಂದೇ ಹುಡುಗಿ ಎನ್ನುತ್ತಿದ್ದಳು. ಈಗ... ನಿಮ್ಮಿಯೂ ಓದಿದವಳೇ. ಅವಳನ್ನೊಂದು ಮಾತು ಕೇಳಬೇಕು. ''ಅಮ್ಮ, ಯಾವುದಕ್ಕೂ ನಾನೊಮ್ಮೆ ವಿಚಾರಿಸಿಕೊಂಡು ಬರ್‍ತೇನೆ. ಅನುಕೂಲ ಅಂತ ಕಂಡರೆ ಮಾತಾಡಿದರಾಯಿತು. ಬೇಸಾಯ ಅಂದರೆ ಯಾಕೆ ತಾತ್ಸಾರ ಮಾಡುತ್ತೀ? ಅದರಷ್ಟು ನಿಯತ್ತಿನ ಕೆಲಸ ಯಾವುದೂ ಇಲ್ಲ''

ಅಮ್ಮನೆದುರು ಹೇಳಲು ಸುಲಭ. ಆದರೆ ಮಳೆ ಇಲ್ಲದಿದ್ದರೆ ಭೂಮಿ ಏನು ಕೊಟ್ಟೀತು ಮಣ್ಣು? ಸರಿಯಾದ ಕಾಲಕ್ಕೆ ಉತ್ತು, ಬಿತ್ತದೆ ಫಸಲು ಎಲ್ಲಿಂದ ಬರಬೇಕು? ಒಂದು ವೇಳೆ ಮದುವೆ ಗೊತ್ತಾದರೂ ಕೈಯಲ್ಲಿ ನಾಲ್ಕು ಕಾಸಿರಬೇಡವೆ?

''ಅಬ್ಬ! ಬಿಸಿಲು ನೋಡಿದರೆ ವೈಶಾಖದ ಬಿಸಿಲು. ಗರಿಕೆಗೂ ಜೀವ ಇದ್ದಂತಿಲ್ಲ. ಈ ರೀತಿ ಬೆವರುವಾಗ ಆಯಾಸವೂ ಹೆಚ್ಚು. ಒಡೆದಿದ್ದ ಚಕ್ಕೆಗಳನ್ನೆಲ್ಲ ಕೊಟ್ಟಿಗೆಗೆ ಕೂಡಿ, ಕೈಕಾಲು ತೊಳೆದು ಬಂದ ನಾಗರಾಜ. ಭರ್ರೋ ಎಂದು ಗಾಳಿ ಬೀಸಿಕೊಂಡು ಬಂತು. ಧೂಳು ತುಂಬಿದ ಗಾಳಿ. ಮಳೆ ಮೋಡ ಹಾರಿಸುವುದಕ್ಕಷ್ಟೇ ಪ್ರಯೋಜನ. ತಂಪು ತರಲಿಲ್ಲ.

ನಾಗರಾಜ ಮಾರುದಿನವೇ ಮೂಗೂರಿಗೆ ಹೋಗಿ ವಿಚಾರಿಸಿಕೊಂಡು ಬಂದ. ಹುಡುಗನದ್ದು ಡಿಗ್ರಿ ಆಗಿದೆ. ಲಕ್ಷಣವಾಗಿದ್ದಾನೆ. ಒಬ್ಬನೇ ಮಗ ಅಂತ ತೋಟ-ಗದ್ದೆ ನೋಡಿಕೊಂಡು ಮನೆಯಲ್ಲೇ ಇದ್ದಾನೆ. ತಂದೆ ತಾಯಿ ಇದ್ದಾರೆ. ಎಲ್ಲ ಸರಿ, ಆದರೆ ತೀರ ಸಂಪ್ರದಾಯಸ್ಥರು. ಮನೆಯಲ್ಲಿ ಒಬ್ಬರು

ಅಜ್ಜಮ್ಮ ಬೇರೆ. ವೃದ್ಧೆ ಅಂತ ಅವರ ಮಾತಿಗೇ ಮೊದಲ ಮಣೆ. ನಿಮ್ಮಿಗೆ ಆಗುತ್ತದೆಯೆ?

''ನಿಮ್ಮೀ, ನೋಡು, ನಿನಗೆ ಏನನ್ನಿಸುತ್ತೆ ಮುಚ್ಚಿಡದೆ ಹೇಳು. ಅಣ್ಣ ಯಾರಿಗೋ ಕೊಟ್ಟು ಕೈ ತೊಳೆದುಕೊಂಡ ಅಂತ ನಾಳೆ ನೀನು ಕೊರಗಬಾರದು. ನಿನಗೆ ಇಷ್ಟ ಇಲ್ಲದಿದ್ದರೆ ಒತ್ತಾಯ ಮಾಡುವುದಿಲ್ಲ'', ನಿಮ್ಮಿ ಒಬ್ಬಳೇ ಇದ್ದಾಗ, ಮನಬಿಚ್ಚಿ ಅವಳನ್ನೇ ಕೇಳಿದ.

''ಇಲ್ಲಣ್ಣ. ಬೇಡ ಎನ್ನುವುದಕ್ಕೆ ನನಗೆ ಏನೂ ಕಾಣುತ್ತಿಲ್ಲ. ನನಗೆ ಅದೃಷ್ಟವಿದ್ದರೆ ಒಳ್ಳೆಯವರೇ ಸಿಗುತ್ತಾರೆ''

''ಅಲ್ಲ, ಸಂಪ್ರದಾಯಸ್ಥರ ಮನೆ ನಿನಗೆ ರೂಢಿ ಇಲ್ಲವಲ್ಲ''

''ಪರವಾಗಿಲ್ಲ ಹೊಂದಿಕೊಳ್ಳುತ್ತೇನೆ. ನಿನಗೆ ಸರಿ ಅನ್ನಿಸಿದರೆ ಮಾತಾಡು''

ನಿಮ್ಮಿ ಇಷ್ಟು ಹೇಳಿದ್ದೇ ದೊಡ್ಡದು. ಮೊದಲೇ ಸಂಕೋಚದ ಹುಡುಗಿ. ಇತ್ತೀಚೆಗಂತೂ ಇನ್ನೂ ಮೌನಿಯಾಗಿದ್ದಾಳೆ. ಎಷ್ಟು ಕನಸುಗಳು ಅವಳೊಳಗೇ ಹುಟ್ಟಿ ಸಾಯುತ್ತವೋ! ಅಲ್ಲ; ತಾನು ಮಾತ್ರ ಇಷ್ಟು ಭಾವುಕನೆ? ತನ್ನದೂ ಎಲ್ಲ ಮನಸ್ಸಿನೊಳಗಿನ ವ್ಯಾಪಾರವಲ್ಲವೆ? ಯಾರಿಗೆ ತಿಳಿಯುತ್ತದೆ ತನ್ನ ಹೊಯ್ದಾಟ?

ನಿಮ್ಮಿ ಮದುವೆಗೆ ಒಪ್ಪಿದ ಮೇಲೆ ಅಮ್ಮನ ಮುಖದಲ್ಲಿ ಮತ್ತೆ ಕಳೆ ಕೂಡಿದೆ. ಹುಡುಗನ ಕಡೆಯವರದು ಯಾವ ಶರ್ತವೂ ಇಲ್ಲ. ಹುಡುಗಿಯನ್ನೂ ನೋಡಿ ಒಪ್ಪಿದ್ದಾರೆ. ನಿಮ್ಮಿ ರೂಪವಂತೆ, ನಿಧಾನಿ. ಒಪ್ಪಿದ್ದರೆ ಸಾಕು ಎಂದಿದ್ದಾರೆ. ಇನ್ನೂ ಎರಡು ತಿಂಗಳಿದೆ. ಈಗ ಆಷಾಢ ಹತ್ತಿರ ಬಂದಿದೆ. ಶ್ರಾವಣದಲ್ಲಿ ಬೇಡ. ಸಿಕ್ಕಾಪಟ್ಟೆ ಮಳೆ ಎಂದು.

ಆದರೆ ಈ ಸಾರಿ ಮಳೆ ಆಗುತ್ತದೆಯೆ? ಜೂನಿಗಾದರೂ ಮಳೆ ಹಿಡಿಯಬೇಡವೆ? ಈ ಹಾಳು ಬಿಸಿಯನ್ನು ಇನ್ನೆಷ್ಟು ದಿನ ಸಹಿಸುವುದು? ಮಳೆ ಬರುವ ಮೊದಲು ಕಾಯಿ ತೆಗೆಸಬೇಕು. ಈ ವರ್ಷದ ತೆಂಗಿನ ತೋಟದ ಆದಾಯ ಮದುವೆ ಖರ್ಚಿಗೇ ಸಾಕಾಗುವುದಿಲ್ಲ. ಮಳೆ ಬಾರದಿದ್ದರೆ ಮುಂದಿನ ವರ್ಷ ತಳ್ಳುವುದು ಹೇಗೆ? ಕೃಷಿಕರ ಹಣೆಬರಹವೇ ಇಷ್ಟು. ತಿಂಗಳು ತಿಂಗಳು ಹಣ ಎಣಿಸುವ ನೌಕರರದೇ ಒಂದು ರೀತಿಯ ಜೀವನ. ನಾಳೆಗೇನು? ಎಂಬ ಯೋಚನೆಯಿಲ್ಲ. ಇದ್ದಕ್ಕಿದ್ದಂತೆ, ತನ್ನ ಯೋಚನಾ ಸರಣಿಗೆ ತಾನೇ ನಾಚಿಕೆಪಟ್ಟುಕೊಂಡ ನಾಗರಾಜ. ಬದುಕಿನಲ್ಲಿ ನಾವು ಹೇಗೆ ಬದಲಾಗುತ್ತ ಹೋಗುತ್ತೇವೆ? ಡಿಗ್ರಿ ಮುಗಿಸಿದವನು ಹಳ್ಳಿಯ ಮಣ್ಣಿನ ಮೋಹದಿಂದ ತಾನಾಗಿಯೇ ಬಂದು ಅಂಟಿಕೊಂಡ ಬದುಕು ಇದು. ಅಪ್ಪ ತೀರಿಕೊಂಡು, ಮನೆ-ತೋಟ-ಗದ್ದೆ ನೋಡುವವರು ಯಾರಿರಲಿಲ್ಲ ಎನ್ನುವುದು ನಿಜವಾದರೂ, ಅಮ್ಮ ಕೈಲಾಗದ ಹೆಂಗಸೇನಲ್ಲ. ತಾನು ಓದಿ ಕೆಲಸಕ್ಕೆ ಸೇರುತ್ತೇನೆ ಎಂದಿದ್ದರೆ ಬೇಡ ಎನ್ನುತ್ತಿರಲಿಲ್ಲ. ತಾನೇ, ಯಾರ ಹಂಗಿಗೆ ಒಳಗಾಗದೆ, ಕೈಯಾರೆ ಫಸಲು ತೆಗೆದು ಇದ್ದುದರಲ್ಲೇ ತೃಪ್ತಿಯಿಂದ ಬಾಳಬೇಕು ಎಂದುಕೊಂಡು ಬಂದವನು. ಬರ, ನೆರೆ, ಸಮೃದ್ಧಿ, ನಾಶ-ಕೃಷಿಯಲ್ಲಿ ಯಾವುದೂ ತನಗೆ ಹೊಸತಲ್ಲ. ಎಳೆತನದಿಂದ ಕಂಡದ್ದೇ. ಎಲ್ಲವುದಕ್ಕೂ ಹೆಗಲು ಕೊಟ್ಟು ಬದುಕುವ ನಿಶ್ಚಯ ಮಾಡಿದ್ದೆ. ಇಷ್ಟು ಬೇಗನೆ ನಿರಾಶೆಯಾಯಿತೆ? ಛೇ, ಇದು ತಾತ್ಕಾಲಿಕ. ಏನೋ, ಸಮಸ್ಯೆಗಳಿಗೆ ಸಿಕ್ಕಿದಾಗ ಪೇಟೆಯವರದ್ದು ಸುಲಭದ ಜೀವನ ಅಂತ ಯೋಚನೆ ಬಂತು ಅಂತ ತನಗೆ ತಾನೇ ಸಮಾಧಾನ ಹೇಳಿಕೊಂಡ. ತನ್ನ ಯೋಚನೆಯ ಪೊಳ್ಳುತನಕ್ಕೆ ತನಗೇ ನಗು ಬಂತು. ಇಲ್ಲ, ಈ ಮಣ್ಣು ನೋವು ಕೊಡುವುದಿಲ್ಲ, ನೋವಿದ್ದರೂ, ಅದರ ಮಗ್ಗುಲಿಗೆ ಇರುವ ನಲಿವು ಅಷ್ಟೇ ಹಿರಿದು ಅನ್ನಿಸಿತು. ನಿಮ್ಮಿಯ ಮದುವೆಯೊಂದು ಮುಗಿದರೆ ನಮ್ಮಿಬ್ಬರದು ಹೇಗೋ ಆಗುತ್ತದೆ.

ಅದಕ್ಕೆ ಈಗಲೇ ಯಾಕೆ ಚಿಂತೆ? ಈಗ ಬಾರದ ಮಳೆ ಶ್ರಾವಣಕ್ಕೂ ಬಾರದೇ ಇದ್ದೀತೆ? ಇದ್ದಕ್ಕಿದ್ದಂತೆ ತಟಪಟ ಸದ್ದು. ಆಗಸದಿಂದ ಉದುರಿದ ಮುತ್ತುಗಳು. 'ಅರೆ, ಹನಿ ಹಾಕಿತೆ?', ನಾಗರಾಜ ತಲೆ ಎತ್ತಿ ನೋಡಿದ. ಹೌದು. ಅವನ ಮುಖದ ಮೇಲೂ ಒಂದೆರಡು ಹನಿ ಬಿದ್ದವು.

'ಇಷ್ಟು ಹೊತ್ತಿನ ಸೆಕೆ ಸುಮ್ಮನೇ ಅಲ್ಲ ಹಾಗಾದರೆ', ಅಪ್ರಯತ್ನವಾಗಿ ಅವನ ಮುಖದಲ್ಲಿ ನಗು ಮೂಡಿತು. ತಟಪಟ ಹನಿ ಜೋರಾಯಿತು.

"ಅಮ್ಮಾ", ಉತ್ಸಾಹದಿಂದ ಒಳಗಿದ್ದ ಅಮ್ಮನನ್ನು ಕರೆದ. "ಅಂತೂ, ಇವತ್ತು ಮಳೆ ಬಂದರೆ ಬರಬೇಕು ನೋಡು", ಸಾತಮ್ಮನೂ ಗೆಲುವಾಗಿ ಹೊರಬಂದು ಜಗಲಿಯಲ್ಲಿ ಕೂತಳು.

"ನಿಮ್ಮಿ ಎಲ್ಲಿ?"

"ನೀರಿಗೆ ಹೋದಳು ಅಂತ ಕಾಣತ್ತೆ"

"ಗಿಡಕ್ಕಾ? ಸುಮ್ಮನೆ ನೆನೆಯುವುದು ಬೇಡ. ಶೀತ ಗೀತ ಆದೀತು. ಒಂದು ಮಳೆ ಚೆನ್ನಾಗಿ ಬಂದರೆ ಗಿಡಕ್ಕೆ ನಾಲ್ಕು ದಿನ ನೀರು ಬೇಡ" ಅಂಗಳದ ಅಂಚಿಗೆ ಹೋಗಿ, ತೋಟದ ಬಾವಿಯಿಂದ ನೀರು ಸೇದುತ್ತಿದ್ದ ತಂಗಿಗೆ ಕೂಗಿ ಹೇಳಿದ.

"ನಿರ್ಮಲಾ, ಸಾಕು ಬಾ. ಮಳೆ ನಿಂತರೆ ನಾನೇ ತರ್ತೇನೆ"

"ಬಂದೇ" ಎನ್ನುತ್ತಲೇ ನಿರ್ಮಲ ಎರಡೂ ಕೈಯ ಕೊಡಪಾನ ಬಚ್ಚಲಿಗೆ ಒಯ್ದು, ತಲೆ ಒರೆಸಿಕೊಳ್ಳುತ್ತಾ ಜಗಲಿಗೆ ಬಂದಳು. ಹಸಿಮಣ್ಣಿನ ಹಿತವಾದ ಕಂಪು 'ಘಂ' ಎನ್ನುತ್ತಿತ್ತು. ಕಾದ ನೆಲಕ್ಕೆ ನೀರು ಬಿದ್ದಾಗ, ಅದೇ ಒಂದು ರೀತಿ ಸುಖವಾದ ಬಿಸಿ... ಮೈ ಒಳಗೆ, ಬಟ್ಟೆ ಒಳಗೆಲ್ಲ ಆ ಬಿಸಿ ತುಂಬಿಕೊಂಡಂತಾಗಿ ಖುಷಿಯಿಂದ ಕಂಪಿಸಿದ ನಾಗರಾಜ. ಎಷ್ಟು ಸಮಯವಾಗಿತ್ತು ಈ ಹಿತ ಅನುಭವಿಸಿ! ದಪ್ಪ ದಪ್ಪ ಹನಿಗಳು ನೆಲಕ್ಕೆ ಅಪ್ಪಳಿಸುತ್ತಿದ್ದವು. ನೆಲಕ್ಕೋ ಎಂದೆಂದಿನ ದಾಹ. ಪಸೆಯೂ ಉಳಿಯದಂತೆ ಗಬಕ್ಕನೆ ಹೀರಿಬಿಡುತ್ತಿತ್ತು. ಮತ್ತೆ ಮತ್ತೊಂದು ಹನಿ, ಮತ್ತೊಂದು ಹನಿ... ಇಂಗುವುದು ನಿಂತು ನೀರು ಹರಿದ ಮೇಲೆ ನೆಲಕ್ಕೆ ತೃಪ್ತಿ.

"ಅಣ್ಣಾ, ಮಳೆ ಹಿಡಿಯುತ್ತದೇನೋ ಅಲ್ವ?"

"ಹೂಂ. ನಿನ್ನ ಮದುವೆಗೆ ಭಾರೀ ಮಳೆ"



"ನಿನ್ನ ತಲೆ!"

ನಿಮ್ಮಿ ಹೀಗೆ ನಾಚಿಕೊಂಡದ್ದೇ ಅಪರೂಪ. ಯಾವ ಮಾತು ಕೇಳಿದರೂ ನಿರ್ಲಿಪ್ತಳಾಗಿ ಬಿಡುತ್ತಿದ್ದಳು. ಅಮ್ಮನ ಮುಖದಲ್ಲೂ ನಸುನಗೆ. ಏಕೋ, ಮದುವೆಯ ಶುಭ ಸುದ್ದಿ, ಮತ್ತೆ ಈಗ ಈ ಮಳೆ ತಮ್ಮ ಮೂವರನ್ನು ಇನ್ನಷ್ಟು ಹತ್ತಿರಕ್ಕೆ ತಂದಿದೆ ಎನ್ನಿಸಿ, ಆ ಆತ್ಮೀಯ ಭಾವವನ್ನು ಅನುಭವಕ್ಕೆ ತಂದುಕೊಂಡ ನಾಗರಾಜ.

ಮಳೆ ಜೋರಾಗುವ ಎಲ್ಲ ಲಕ್ಷಣ ತೋರಿಸುತ್ತಿತ್ತು. ಗಾಳಿಗೆ ಸಿಬರು ಬೀಸಿ, ಜಗಲಿಯೆಲ್ಲ ಒದ್ದೆಯಾಯಿತು. ಹೆಪ್ಪುಗಟ್ಟಿದ ಕರಿಮೋಡ, ದೈತ್ಯಗಾಳಿಗೆ ಒಂದಿಷ್ಟೂ ಸೊಪ್ಪು ಹಾಕದೆ, ಕಣ್ಣು ಮುಚ್ಚಿಕೊಂಡು ಮಳೆ ಸುರಿಸುತ್ತಿತ್ತು. ಮಾಡಿನ ನೀರು, ಕಸ, ಕೊಳೆ ತೊಳೆದುಕೊಂಡು ಕಪ್ಪುಧಾರೆಯಾಗಿ ಧುಮುಕುತ್ತಿತ್ತು.

"ಮಳೆ ನೋಡ್ತಾ ಕೂತರೆ ಕೆಲಸ ಆದ ಹಾಗೇ. ಕೊಟ್ಟಿಗೆಗೆ ದನ ಬಂದವೇನೋ ನೋಡು ಮಗಾ" ಎಂದು ಸಾತಮ್ಮ ಎಚ್ಚರಿಸದಿದ್ದರೆ ಇನ್ನೂ ಎಷ್ಟು ಹೊತ್ತು ಕುಳಿತಿರುತ್ತಿದ್ದನೋ. ನಿಮ್ಮಿ ಮಾತ್ರ, ಮಳೆಯನ್ನೇ ದಿಟ್ಟಿಸುತ್ತ ಸೀರೆ ನಿರಿಗೆ ಮುದುಡಿಕೊಂಡು ಕೂತಿದ್ದಳು.

ತಡವಾಗಿ ಬಂದರೂ ಮಳೆಯ ಆರ್ಭಟ ಜೋರಾಗಿಯೇ ಇತ್ತು. ಮೊದಲಲ್ಲಿ ಬಿಟ್ಟು ಬಿಟ್ಟು ಬಂದ ಮಳೆ, ಹತ್ತು ಹನ್ನೆರಡು ದಿನಗಳಲ್ಲಿಯೇ ಕಣ್ಣು ಮುಚ್ಚಿಕೊಂಡು ಹುಯ್ಯಲು ಆರಂಭವಾಯಿತು. ಕೆರೆ, ಹಳ್ಳ ತುಂಬಿದವು. ನೀರೋ ನೀರು. ಸಾಕು ಸಾಕೆನಿಸುವಷ್ಟು ಆದರೂ, ಮಳೆ ಮಲೆನಾಡಿನ ಮಕ್ಕಳಿಗೆ ರೇಜಿಗೆ ಎನಿಸುವುದಿಲ್ಲ. ಈ ಸಲ ನಾಲ್ಕಾಳು ಹೆಚ್ಚಿಗೆ ಕರೆದರೂ ಅಡ್ಡಿಯಿಲ್ಲ. ಬೇಸಾಯದ ಕೆಲಸ ಬೇಗ ಮುಗಿಸಿಬಿಡಬೇಕು. ಅವರ ಮನೆಯದ್ದಾಯಿತೆ? ಇವರ ಮನೆಯದ್ದಾಯಿತೆ? ಎಂದು ಕುತ್ತಿಗೆ ಉದ್ದ ಮಾಡಿ ನೋಡುವುದಲ್ಲ ಎಂದು ನಿಶ್ಚಯಿಸಿಯೇ ಗದ್ದೆಗಿಳಿದ ನಾಗರಾಜ. ಹಸಿರಿಗೂ ಸಂಭ್ರಮ. ಹಸಿರಿನ ಮಕ್ಕಳಿಗೂ ಸಂಭ್ರಮ.



ಶ್ರಾವಣದ ಜಡಿ ಮಳೆಯಂತೆ ಹನಿ ಕಡಿಯದೆ ಹುಯ್ಯುತ್ತಿತ್ತು ಮಳೆ. ಆಗಲೇ, ಮಳೆಗೆ ಸಿಕ್ಕ ಅರೆ ಬರೆ ತೊಯ್ದುಕೊಂಡು ಬಂದ ಜೋಯಿಸರು ಕಹಿ ಸುದ್ದಿ ತಂದರು.

"ಮೂಗೂರಿನಲ್ಲಿ ಒಂದು ಅಜ್ಜಮ್ಮ ಇತ್ತಲ್ಲ, ಯಾಕೋ ಮೇಲೆ ಕೆಳಗೆ ಆಗುವ ಹಾಗಿದೆ. ಮಳೆಗಾಲ ದಾಟುವುದು ಕಷ್ಟ ಅಂತ ಕಾಣುತ್ತೆ."

ಬಳುಕಿ ಬಳಕಿ ಮನೆಯೊಳಗೆ ಹೆಜ್ಜೆ ಇಡುತ್ತಿದ್ದ ಸಂಭ್ರಮ ಸರ್ರನೆ ಹಿಂದೆ ಸರಿಯಿತು.

"ಮದುವೆಗೆ ಏನಾದ್ರೂ ತೊಂದ್ರೆ ಆದೀತಾ ಜೋಯಿಸರೆ?", ಸಾತಮ್ಮ ಆತಂಕದಿಂದ ಕೇಳಿದಳು.

"ಏನೂ ಹೇಳ್ಳಿಕ್ಕಾಗುವುದಿಲ್ಲ ತಾಯಿ. ಮೊದಲೇ ತೀರ ಸಂಪ್ರದಾಯಸ್ಥ ಕುಟುಂಬ. ಏನಾದರೂ ಹೆಚ್ಚು ಕಡಿಮೆ ಆದರೆ ಅಪಶಕುನ"

"ಏನಾಗಿದ್ದಂತೆ?"

"ಆಗಿದ್ದು ವಯಸ್ಸು. ಬಚ್ಚಲಿಗೆ ಹೋಗುವಾಗ ಜಾರಿ ಬಿದ್ದದ್ದೊಂದು ನೆವ. ಎಲ್ಲ ಮಲಗಿದಲ್ಲೇ ಈಗ. ಯಾವುದಕ್ಕೂ ನಾಗ್ರಾಜ ಹೋಗಿ ಒಮ್ಮೆ ನೋಡಿಕೊಂಡು ಬರಲಿ", ಅಡ್ಡ ಗೋಡೆಯ ಮೇಲೆ ದೀಪ ಇಟ್ಟಂತೆ ಮಾತಾಡಿದರು ಜೋಯಿಸರು. ಅವರು ಹೊರಟುಹೋದ ಮೇಲೆ ಕೈಕಾಲು ಕಟ್ಟಿ ಬಿಟ್ಟಂಥ ಅನುಭವ. ಶ್ರಾವಣ ಕಳೆದ ಮೇಲೆ ಮದುವೆಗೆ ದಿನ ಇಡುವಾ ಎಂದಿದ್ದರು. ಇನ್ನೊಂದು ಹದಿನೈದು-ಇಪ್ಪತ್ತು ದಿನಕ್ಕೆ ಆಷಾಢ. ಮದುವೆಯು ಮಾತತ್ತುವಂತಿಲ್ಲ. ಈಗೇನು ಮಾಡುವುದು? ಮದುವೆಯ ಸಿದ್ಧತೆ ಮಾಡುವುದೋ ಬಿಡುವುದೋ. ಮೂಗೂರಿನಿಂದ ಏನಾದರೂ ಸುದ್ದಿ ಬಂದೀತೇನೋ ಎಂದು ದಿನವೆಲ್ಲ ಕಾದರು. ಏನೂ ಸುದ್ದಿಯಿಲ್ಲ.

"ನಾನೇ ಹೋಗಿ ನೋಡಿಕೊಂಡು ಬರ್ತೇನಮ್ಮ, ಸುಮ್ಮನೆ ಕೈಕಾಲು ಬಿಟ್ಟರೆ ಏನು ಬಂತು?"

"ಅಷ್ಟು ಮಾಡು ಮಗಾ. ದೇವರು ಕೈ ಬಿಡದಿದ್ದರೆ ಸಾಕು." ಸಾತಪ್ಪನ ಹಣೆ ಆತಂಕದಿಂದ ನೆರಿಗೆಗಟ್ಟಿತ್ತು. ಸಿಕ್ಕಾಪಟ್ಟೆ ರಾಚುತ್ತಿದ್ದ ಮಳೆ, ಸುಯ್ಯೋ ಎಂದು ಸುಳಿ ಸುಳಿದು ಮೊರೆಯುತ್ತಿದ್ದ ಗಾಳಿ, ಸಂತಸದ ಬದಲು ದುಗುಡ ತಂದು ತುಂಬಿದವು. ಅಂಗಿ ಹಾಕಿ, ಹೆಗಲಿಗೊಂದು ಶಾಲು ಹೊದ್ದು, ಕೊಡೆ ಹಿಡಿದು ಅಂಗಳಕ್ಕಿಳಿದ ನಾಗರಾಜ. "ಜಾಗ್ರತೆ ಮಗಾ, ಮರದಡಿ ನಿಲ್ಬೇಡ" ಎಂದ ಸಾತಪ್ಪನ ಮಾತುಗಳು ಗಾಳಿಯ ಸದ್ದಿನಲ್ಲಿ ಸೇರಿಹೋಯಿತು.

ಟಪ್...ಟಪ್... · ಸದ್ದು ಮಾಡುತ್ತ, ಅಂಗಳದ ಕೆಸರಲ್ಲಿ ಚಪ್ಪಲಿಯ ಗುರುತು ಮೂಡಿಸುತ್ತ ಹೋದ ಮಗನನ್ನೇ ನೋಡುತ್ತ ನಿಂತಿದ್ದಳು ಸಾತಮ್ಮ, ಸುಮಾರು ಹೊತ್ತು. ಪಕ್ಕದಲ್ಲಿ ನಿಮ್ಮಿ ಬಂದು ನಿಂತದ್ದೂ ಗಮನಕ್ಕೆ ಬರಲಿಲ್ಲ. ನಿಮ್ಮಿ, 'ಅಮ್ಮಾ' ಎಂದಾಗಲೇ ಇತ್ತಲಿನ ತಿಳಿವು. "ಥಂಡಿಗಾಳಿಯಲ್ಲಿ ನಿಂತಿದ್ದೀಯಲ್ಲ." "ಬೆಳಗ್ಗೆ ಬರುತ್ತಾನೋ, ಇಲ್ಲ ನಾಳೆ ಸಂಜೆ ಆಗ್ತದೋ. ಮಳೆಗಾಲದಲ್ಲಿ ನಡೆಯುವುದೆಂದರೆ ತಾಪತ್ರಯ." ಮನಸ್ಸಿನೊಳಗೆ ಹುಟ್ಟುತ್ತಿದ್ದ ಭಯವನ್ನು ಮುಚ್ಚಿಹಾಕಲು ಹುಡುಕಿದ ಮಾತುಗಳು.

"ಏನೋ, ನೋಡಿಕೊಂಡು ಬರುತ್ತಾನಲ್ಲ, ನೀನ್ಯಾಕೆ ತಲೆಬಿಸಿ ಮಾಡುತ್ತಿ? ನಡಿ, ಬಾಗಿಲು ಹಾಕದಿದ್ದರೆ ಗಾಳಿ ಒಳಗೆ ನುಗ್ಗದೆ." ಮಗಳ ಮಾತಿಗೆ

ಪ್ರತಿ ಹೇಳದೆ ಒಳಗೆ ಬಂದಳು ಸಾತಮ್ಮ. 'ನಾನ್ಯಾಕೆ ತಲಬಿಸಿ ಮಾಡುತ್ತಿದ್ದೆ ಅವರಿದ್ದಿದ್ದರೆ? ನಿಮ್ಮಿಗೆ ಮದುವೆ ಆಗಿ, ಇಷ್ಟು ಹೊತ್ತಿಗೆ ನಾಗ್ರಾಜನಿಗೂ ಹೆಣ್ಣು ನೋಡ್ತಿದ್ದರು. ಅವರಿಗೆ ಇದ್ದ ಹಾಗೆ ಜನ ಬಳಕೆ ಇವನಿಗಿಲ್ಲ. ಓದಿ ಕೆಲಸ ಹಿಡಿದಿದ್ದರೆ ಅದೇ ಒಂದು ರೀತಿ ಬೇರೆ. ನಾಳೆ ಸೊಸೆ ತರಬೇಕಾದರೂ ಇಷ್ಟೇ ಕಷ್ಟಪಡಬೇಕಾದೀತೇನೋ.' ಸಾತಮ್ಮ ಉತ್ಸಾಹ ಬತ್ತಿದವಳಂತೆ ಗೋಡೆಗೊರಗಿ ಕೂತಳು. ಹೊರಗೆ ಗವ್ವನೆ ಕವುಚಿಕೊಂಡ ಕತ್ತಲು, ಧೋ ಎಂದು ಸುರಿಯುವ ಮಳೆ ಶಬ್ದದ ನಡುವೆ ಇಬ್ಬರಿಗೂ ಮಾತಾಡಬೇಕೆನ್ನಿಸದೆ, ನಾಗರಾಜನ ಬಗ್ಗೆ, ಮದುವೆಯ ಬಗ್ಗೆ, ಅವನು ತರುವ ಸುದ್ದಿಯ ಬಗ್ಗೆ, ಮಳೆಯ ಬಗ್ಗೆ ಯೋಚಿಸುತ್ತ ತಾಯಿ, ಮಗಳು ಎಷ್ಟೋ ಹೊತ್ತು ಹಾಗೇ ಕುಳಿತಿದ್ದರು.

ರಾತ್ರಿಯೆಲ್ಲ ಸುರಿದ ಮಳೆ, ಬೆಳಗಾಗುವಾಗ ನೆಲದ ಇಂಚು ಇಂಚನ್ನೂ ತೊಳೆದು ಇಟ್ಟಿತ್ತು. ಹುಲ್ಲು, ಗರಿಕೆ, ಗಿಡ, ಬಳ್ಳಿಯ ಎಲೆ ಎಲೆಗಳಲ್ಲೂ ಮುತ್ತಿನ ಗೊಂಚಲು ಅರಳಿ, ಎಳೆ ಬಿಸಿಲಿಗೆ ಬೆಳ್ಳಿಯ ಕಾಂತಿ ಬಂದಿತ್ತು. ಅಂಗಳದಲ್ಲಿ ನಾಗ್ರಾಜ "ಅಮ್ಮಾ" ಎಂದ ಸದ್ದಿಗೆ ಕೊಟ್ಟಿಗೆಯಲ್ಲಿದ್ದ ಸಾತಮ್ಮ, ಅರ್ಧ ಕರೆದ ಹಾಲನ್ನು ಅಲ್ಲೇ ಕುಕ್ಕಿ ಓಡಿಬಂದಳು. ಅವನ ಕರೆಯಲ್ಲಿ ಉತ್ಸಾಹ, ಸಂಭ್ರಮ, ಆತಂಕ ಎಲ್ಲ ಬೆರೆತಿತ್ತು.

"ಏನಾಯ್ತೋ...?"

"ಏನೂ ಇಲ್ಲಮ್ಮ, ಅರ್ಜೆಂಟ್ ವಾಲಗ ಊದಿಸುವುದೇ. ಅಜ್ಜ ಮಲಗಿದಲ್ಲೇ ಇದೆ. ಅದು ಸಾಯವುದರೊಳಗೆ ಮೊಮ್ಮಗನ ಮದುವೆ ನೋಡಬೇಕಂತೆ. ಎಷ್ಟು ಸಾಧ್ಯವೋ ಅಷ್ಟೇ ಖರ್ಚಿನಲ್ಲಿ ಮದುವೆ ಮಾಡಿಕೊಡಿ ಎಂದರಮ್ಮ. ನಾನು ಹೋಗದಿದ್ದರೆ, ಅವರೇ ಇವತ್ತು ಹೊರಟಿದ್ದರು."

"ಬಿಡೋ, ದೇವರು ನನ್ನ ತಲೆ ಮೇಲಿನ ಭಾರ ಇಳಿಸಿದ", ಸಾತಮ್ಮನ ಮುಖ ಬೆಳ್ಳಿ ಬೆಳಗಿಗೆ ಮಿನುಗಿತು. ರಂಗೋಲಿ ಬಟ್ಟಲು ಹಿಡಿದು ಮೆಟ್ಟಲಿಳಿದು ಬಂದ ನಿಮ್ಮಿಯ ನಡಿಗೆಯಲ್ಲಿ ಲಾಸ್ಯವಿತ್ತು.

"ದಾರಿ ಉದ್ದಕ್ಕೂ ಒಳ್ಳೆ ಮಳೆಗೇ ಸಿಕ್ಕಾಕ್ಕೊಂಡೆ ನೀನು"

"ಇರ್ಲಿ ಬಿಡಮ್ಮ. ನಮಗಿವೆಲ್ಲ ಹೊಸ್ದೇನು ಅಲ್ವಲ್ಲ. ತಡವಾಗಿ ಬಂದ್ರೂ ಭರ್ಜರಿಯಾಗೇ ಹೊಡೀತು ಮಳೆ ಈ ಸಲ"

ಅಣ್ಣನ ಮಾತು ತನಗೇ ಹೇಳಿದಂತಾಗಿ ಪುಳಕಗೊಂಡ ನಿಮ್ಮಿ, ಮಂಡಿಯೊಳಗೆ ಮುಖ ಹುದುಗಿಸಿ, ಇಷ್ಟಗಲ ರಂಗೋಲಿ ಚುಕ್ಕಿ ಇಡತೊಡಗಿದಳು.



ಅಬ್ಬ! ಬಿಸಿಲು ನೋಡಿದರೆ ವೈಶಾಖದ ಬಿಸಿಲು. ಗರಿಕೆಗೂ ಜೀವ ಇದ್ದಂತಿಲ್ಲ. ಈ ರೀತಿ ಬೆವರುವಾಗ [illegible]

ರೇಖಾ ಕುಂದಾರು



ಮಗಳು ಶರಧಿಯೊಡನೆ ಲೇಖಕಿ






# ಅಮ್ಮ ಎಂಬ ದೀಪ

ನಾನೊಬ್ಬ ಮಧ್ಯಮ ವರ್ಗದ ಮೇಷ್ಟ್ರ ಮಗ. ತಂದೆ ಯಾವಾಗಲೂ ಸೀದಾ-ಸಾದಾ ವ್ಯಕ್ತಿತ್ವವುಳ್ಳವರು. ನನಗೆ ತಿಳಿವು ಬಂದಾಗಿನಿಂದ, ಅವರು ಯಾವುದೇ ತಪ್ಪು ಕೆಲಸಗಳನ್ನು ಮಾಡಿಲ್ಲ. ತಾಯಿಯೂ ಕೂಡ ಅಷ್ಟೇ, ಅವರು ನನ್ನ ಪಾಲಿಗೆ ಸಾಕ್ಷಾತ್ ದೇವರಿಗಿಂತಲೂ ಮೇಲು. ನಮ್ಮ ಕುಟುಂಬದಲ್ಲಿ ಕೇವಲ ಐದು ಜನ ಸದಸ್ಯರು, ನಮ್ಮ ತಂದೆ, ತಾಯಿ, ಅಣ್ಣ ಹಾಗೂ ತಂಗಿ. ನಾನು ಅಣ್ಣ ಹಾಗೂ ತಂಗಿಯ ನಡುವೆ ಜನಿಸಿದ್ದರಿಂದ, ಮಧ್ಯಮ ಪಾಂಡವನಂತಾಗಿದ್ದ. ಮನೆಯಲ್ಲಿ ತಾಯಿ ನನ್ನ ಅತೀ ಮುದ್ದಿನಿಂದ ನೋಡಿಕೊಳ್ಳುತ್ತಿದ್ದರು. ದಿನಾಲು ಬೆಳಗ್ಗ 5 ಗಂಟೆಗೆ ಏಳುವದು. ಕಸ-ಮುಸುರೆ, ಮನೆ ಗುಡಿಸುವದು, ಸ್ನಾನಕ್ಕಾಗಿ ನೀರು ಕಾಯಿಸುವದು, ದೇವರ ಪೂಜೆ, ಇದಲ್ಲದೇ ಎಲ್ಲರಿಗೂ ಬೆಳಗಿನ ಉಪಹಾರ ತಯಾರಿಸುವದು... ನಾವೆಲ್ಲ ಅಮ್ಮ ಪಡುವ ಕಷ್ಟ ಕಂಡು ಮಮ್ಮಲ ಮರುಗುತ್ತಿದ್ದೆವು. ಇದು ಬರೀ ಬೆಳಗಿನ ಕೆಲಸವಾಯಿತು. ಅಮ್ಮ ದಿನವಿಡೀ ಏನಾದರೂ ಕೆಲಸ ಮಾಡುತ್ತಲೇ ಇರುತ್ತಿದ್ದರು. ನಾವು ಆಗ ಇನ್ನೂ ಚಿಕ್ಕವರಿದ್ದೆವು. ಆದರೂ, ಆಗಾಗ ಅಮ್ಮನಿಗೆ ಸಹಾಯ ಮಾಡುತ್ತಿದ್ದೆವು. ಹೀಗೆ ನಾನು ನಾಲ್ಕನೆಯ ತರಗತಿಯವರಿಗೆ ನಮ್ಮ ಹಳ್ಳಿಯಲ್ಲಿಯೇ ಓದಿದೆ. ಆದರೆ, ನಮ್ಮ ತಂದೆಯವರಿಗೆ, ತಮ್ಮ ಮಕ್ಕಳು ತಮಗಿಂತಲೂ ಎತ್ತರಕ್ಕೆ ಬೆಳೆಯಬೇಕೆಂಬ ಮಹದಾಸೆಯಿತ್ತು. ಅವರ ದೂರದೃಷ್ಟಿಯ ಫಲವಾಗಿ ನಾವು ಕುಟಂಬ ಸಮೇತ ಬಿಜಾಪುರಕ್ಕೆ ಬರುವಂತಾಯಿತು.

ಬಿಜಾಪುರದಲ್ಲಿ, ನನಗೆ 5ನೇ ತರಗತಿಗೆ ಇಂಗ್ಲಿಷ್ ಮೀಡಿಯಮ್‌ಗೆ ಸೇರಿಸಿದರು. ನಮ್ಮಣ್ಣ, ಆಗಲೇ ಏಳನೆಯ ತರಗತಿಯನ್ನು, ಬಿಜಾಪುರದಲ್ಲಿ ಕಲಿಯುತ್ತಿದ್ದ. ತಂಗಿಯೂ ಕೂಡ ನಮ್ಮ ಜತೆ ಸೇರಿಕೊಂಡಳು. ಪಟ್ಟಣಕ್ಕೆ ಬಂದ ಮೇಲೆ ಅಮ್ಮನ ಮೇಲಿನ ಕೆಲಸದ ಭಾರ, ಇನ್ನೂ ಜಾಸ್ತಿಯಾಯಿತು. ದಿನ ನಿತ್ಯದ ಕೆಲಸವನ್ನಲ್ಲದೇ, ನಮಗೆ ಇಂಗ್ಲಿಷ್ ಹೇಳಿಕೊಡುವದು, ಹೋಮ್‌ವರ್ಕ ಮಾಡಿಸುವದು. ಟ್ಯೂಶನ್ ಟೈಮಿಗ ಸರಿಯಾಗಿ, ನಮ್ಮನ್ನು ಹುಡುಕಿ ತಂದು ಟ್ಯೂಶನ್ ಕ್ಲಾಸಿಗೆ ಕಳುಹಿಸುತ್ತಿದ್ದರು. ನಮಗೆಲ್ಲ ಆವಾಗ ಅಮ್ಮನ ಮೇಲೆ ಕೋಪ ಬರುತ್ತಿತ್ತು. ಹೀಗೆಯೇ ಹತ್ತನೆಯ ತರಗತಿವರೆಗೆ ಅಮ್ಮ ನಮ್ಮ ಜೊತೆ ಇರಬೇಕಾಯಿತು. ಆಮೇಲೆ, ನಾನು ಮತ್ತು ಅಣ್ಣ, ಬಾಡಿಗೆ ರೂಮು ಮಾಡಿ ಮುಂದಿನ ವಿದ್ಯಾಭ್ಯಾಸ ಕೈಗೊಂಡೆವು.

ಪಿಯುಸಿಯ ನಂತರ, ಅಣ್ಣ ಬಿಎ ಎಮ್‌ಎಸ್ ಮಾಡಿದರು. ನಾನು ಬಿಜಾಪುರದಲ್ಲಿಯೇ ಬಿಎಸ್ಸಿ (ಕೃಷಿ) ಪದವಿ ಸೇರಿಕೊಂಡೆ. ಇಂದು ಅಣ್ಣ ಊರಲ್ಲಿ ಒಳ್ಳೆಯ ಡಾಕ್ಟರರೆಂಬ ಹೆಸರು ಪಡೆದುಕೊಂಡಿದ್ದಾರೆ. ನಾನು ಈಗ ಧಾರವಾಡದಲ್ಲಿ ಎಮ್‌ಎಸ್ಸಿ (ಕೃಷಿ) ಪದವಿ ಪಡೆಯುವ ಹಂತದಲ್ಲಿರುವೆ.

ನಮ್ಮ ವಿದ್ಯಾಭ್ಯಾಸದ ಸಲುವಾಗಿ, ಹಗಲು-ಇರುಳು ದುಡಿದ ಅಮ್ಮನ ವಾತ್ಸಲ್ಯವೇ ನಮಗೆ ದಾರಿದೀಪವಾಗಿದೆ.

**ಧಾರವಾಡ** **ಸುಮನ್**

## ಕವಿ ಸಮಯ



ಸುರೇಶ ಕೆ.ಪಿ.

# ದಂಡೆ

ಯಾರ ಹಜ್ಜೆ ಗುರುತುಗಳಿವು
ಈ ಕಡಲ ದಂಡೆಯಲ್ಲಿ?
ಬೇರಾವ ಕುರುಹೂ ಇಲ್ಲ
ಏಕಾಂತಕೂ ಭಯದ ಹಂಗೇ?
ಬೆರಳೇನೋ ಗೀರಿದಂತಿದೆ
ಯಾರಿಗೀ ಕ್ಷಣಿಕ ಜೀವ ಸಂದೇಶ?
ತೆರೆತೆರೆ ಪಟಲ ಗುಮ್ಮಿ ದಡವ ತಡವಿ
ನೊರೆನೊರೆ ಗುಳ್ಳೆ ದಡವ ತೊರೆದು ಮರಳಿ
ಒಂದು ಸ್ಪಷ್ಟ ದುಃಖ ಒತ್ತರಿಸಿದೆ.
ಕಡಲು ಉತ್ತರಿಸದೆ.

# ಕೊಂಚ ನೆನೆದು

ಈ ರಥವ ಕಂಡರೆ
ದುಃಖವಾಗುವುದು.

ಕಾಲೆತ್ತಿ ಕೆನೆವ ಕುದುರೆ, ಪುಟ್ಟ ಸವಾರ,
ಘೀಳಿಡುವ ಆನೆ, ಅದರ ಸುತ್ತ ಪುಟ್ಟ ಯೋಧರು
ಬಟ್ಟೆ ಸರಿಸಿ ವೈಯಾರದಲ್ಲಿ ಬೆಡಗಿಯರು
ಪುಟ್ಟ ಕೈ, ಪುಟ್ಟ ಬಳೆ, ಇಷ್ಟೇ ಪುಟ್ಟ ಪುಷ್ಟ ಮೊಲೆ
ಕೆತ್ತಿದ್ದರೆ ರಥದ ಸುತ್ತ ಸತತ ಸುರತ ನಿರತರು.
ಪುಟ್ಟ ಗಂಡು, ಪುಟ್ಟ ಹೆಣ್ಣು
ಶಿಶ್ನವೂ ಕಿರಿಬೆರಳ ಉಗುರಷ್ಟು
ಹೇಗೆ ಕಾಲ ಉರುಳಿದರೂ ಬೆದೆ
ಘನವಾಗಿ ಉಳಿದಿದೆ;
ನಾಚಿಕೊಳ್ಳದೇ
ಮೇಲೆ ಕುಳಿತ ದೇವ
ಎಂಥ ತಳವ



ಅದೊ ಅದೋ ಅಲ್ಲಿ ಒಂದು ಜೇಡ,
ಮರಿಗಳವಿತು ಕೂತಿರುವ ಬ್ರಹ್ಮಾಂಡ ಮೊಟ್ಟೆ
ಹೊತ್ತು,
ಹೊಟ್ಟೆ, ಕಿಬ್ಬೊಟ್ಟೆ, ಪುಟ್ಟ ಮೊಲೆ, ಕಿರು ತುಟಿ,
ಶಿಶ್ನದ ಮೇಲೆಲ್ಲ
ಕಾಲೂರಿ ಚಲಿಸಿ ಮಾಯವಾಗಿದೆ.

## ನದಿಯ ದಾರಿಯಲ್ಲಿ

ಯಾರ ಸ್ಮರಣೆಗೆ ಈ ಹೂಗುಚ್ಛ
ಈ ನದಿ ದಂಡೆಯಲ್ಲಿ?
ಉಸುಕಿನುದ್ದಕೂ ಎಂಥ
ಮೃದು ಹೆಜ್ಜೆಗಳ ಪಯಣ

ಒಂದು ಪುಟ್ಟ ಹಣತೆಯದೆ
ಹೂ ಬತ್ತಿ, ಎಣ್ಣೆಗೆ ಕಾಯುತ್ತಿದೆ
ನದಿಯೂ ಎಂಥ ಮಂದ್ರಸ್ಥಾಯಿಯಲಿ
ಹರಿಯುತಿದೆ
ಎಂಥ ಸಾಂದ್ರ ಮಮತೆ
ದಡಗಳನು ತಬ್ಬುತಿದೆ

ಮರಗಳ ಮರೆಯಲ್ಲಿ ದಂಡೆ ಹೂವು
ದುಃಖದ ಹೆಣ್ಣು ಇಲ್ಲಿ ಬಟ್ಟೆ ಒಗೆಯಲಿ
ಒಂದಷ್ಟು ದುಃಖ ಮರೆಯಲಿ
ಮಕ್ಕಳಲ್ಲಿ, ಶಾಲೆಯ ಭಾರ ಕಳೆಯಲಿ
ಪ್ರೇಮಿಗಳು ಅಂತರಂಗವ ಹಂಚಿಕೊಳ್ಳಲಿ
ಕೊಂಚ ಎಚ್ಚರದಲ್ಲಿ ದೇಹ ಕೌತುಕವನ್ನೂ

ಗುರಿ ಸಮುದ್ರವೆ ಇರಲಿ.
ನದಿಯ ದಾರಿಯಲ್ಲಿ
ಕುತ್ಸಿತದ ಕೊಳೆ ಅಳಿಯಲಿ

## ಕ್ಷಣ ತಲ್ಲಣದ...

ಜನ ಜಂಗುಳಿಯ ರಸ್ತೆಯಂಚಲ್ಲಿ
ಸುಮ್ಮನೆ ಕುಳಿತಿದ್ದಾನೆ,
ಧ್ಯಾನದಲ್ಲೋ, ಇಹದ ಮರವೆಯಲ್ಲೋ
ನಿಯಮ ಜಾಗದಲೆಲ್ಲೂ ಬಸ್ಸು ನಿಲ್ಲದು
ಎಂದೇ ಜನ ಓಡುವರು,
ಇವನ ಗಮನಿಸದೇ
ತುಳಿದಿಲ್ಲವೆಂಬುದೇ ಕಾಳಜಿಗೆ ಕುರುಹು

ಕೂತು ಮಾತಾಡಿಸಲು ಗೆಣೆಯಲ್ಲ
ಕವಡೆ ಕಾರ್ಡುಗಳಿಲ್ಲ
ಶೀಘ್ರ ಸ್ಖಲನಕೂ,
ಬದೆಯಿರದ ಕಳವಳಕೂ
ಬೇರು ನಾರುಗಳಿಲ್ಲ

ಜೀವ ಜಾತಕವ ಅಳೆಯಲೆಂದೇ
ಕೂತಿದ್ದಾನೆ?
ಇದು ವೃದ್ಧಿಯಂಚೇ ಇರಬೇಕು
ಇವನ ದೃಷ್ಟಿಗೆ ಬೀಳದಂತೆ
ನಾಜೂಕು, ದಾಟಿ ಬಿಡಬೇಕು

ಸುರೇಶ ಕೆ. ಪಿ.







ಸಾ. ದಯಾ

# ರೆಪ್ಪೆಯಡಿಯಲ್ಲಿ ಒಂದು ದೀಪ

ಚೆನ್ನೆ ಆಡುವ ಬಾರೆ ಚೆನ್ನಿ
ಚೆನ್ನೆ ಆಡುವ ಬಾ

ನದಿಯ ಆ ದಂಡೆಯಲಿರುವುದು ಚೆನ್ನೆ ಮರ
ಹೋಗಿ ಬರುವಾಗ ಜೋಕೆ
ಮರದಡಿಯಲಿ ಹಾವಿನ ಹುತ್ತ; ಇರುವುದು
ಅತ್ತ ಮಗ್ಗುಲಲಿ ಕುಂಟಲದ ಪಾಡು.
ಜೋಕೆ ಬರುವಾಗ ಇಂದು ಜಾರುವುದು
ಅಂದು ಕೈಕೈ ಕೂಡಿ ಆಡಿದ
ಹಸಿ ಮಣ್ಣ ಕಂಬಳದ ಕಟ್ಟೆ

ಬೀಡಿಯ ಮೊರ ಅಲ್ಲಿ ಕೆಳಗಿರಲಿ
ಆನೆ ಬಾಗಿಲಲಿ ಕರಡಿ ಕುಣಿತವ ನೋಡು
ಕೇರಿ ಬದಿಯಲಿ ನಗುವ ಮುಂಗುಸಿ
ಏಕೆ ನಗುತಿದೆ ಕಾವು ಕೊಡುವ ಹೇಂಟೆ?
ತೆರೆದು ಬಿಡು ಕದ, ಬಾ ಅಂಗಳಕೆ
ಸಗಣಿ ಸಾರಿಸಿದ ಆಗಸ ತುಂಬ ಮುಗುಳು ನಗು

ಏಕೆ ಮೌನ!
ನಾನೂ ನೀನೂ ಸೇರಿ ಕಟ್ಟಿದ ತೊಟ್ಟಿಲಲಿ
ದೀಪ ಹಚ್ಚಿದ ಅಜ್ಜನೆಲ್ಲಿ?
ಹುಡುಕಿ ತಾ ಅಟ್ಟದಲ್ಲಿರುವ ಮಣೆಯನು
ಕಣ್ಣು ತುಂಬಲಿ ಮನೆಯಿಂದ ಮನೆಗೆ ದಿಗಿಣ
ಮತ್ತೆ ಅಣಿ ಏರಲಿ ದುಡಿಯ ಕರೆಗೆ

# ಬೆಳ್ಳಿ ಗೆರೆ

ಅಜ್ಜ ನೆಟ್ಟ ಗಿಡ
ಅವಳಷ್ಟೆ ಎತ್ತರಕೆ ಬೆಳೆದು
ಹೂ ನಕ್ಕಿತು.
ಅವಳು ಆಡಿದ ಗೊಂಬೆಗಳ
ಕರೆದು ಕ್ಷೇಮ ವಿಚಾರಿಸಿತು
ನಿದ್ದೆಗೆ ಹೋದ ಕನಸುಗಳ ಮೈಸವರಿ
ಚಿಲಿಪಿಲಿ ಕದ ತೆರೆದಾಗ
ಸವಾರಿಗೆ ಹೋದ ಸೂರ್ಯನ ಕುದುರೆಯ
ಖುರಪುಟದ ಸದ್ದು ಮನೆ ತುಂಬ.

ಅವಳುಟ್ಟು ಆಡಿದ ಲಂಗಕ್ಕೆ
ಅಂಟಿದ ಒಣ ಧೂಳು
ಚಾಕಲೇಟಿನ ಸಿಹಿ
ನಮ ನಡುವೆ ಚುಚ್ಚಿದ ಮುಳ್ಳು
ಕೆಂಪು ನೆತ್ತರು
ಬೆಳ್ಳಿ ಗೆರೆಗಳ ಜೊತೆ ಹಾಡಿತು,
ಪುಟ್ಟ ಸಸಿ ನಗುತ್ತಿತ್ತು.

# ಇದೆಂಥ...

ಇದೆಂಥ ಊರು...!
ಎಲ್ಲಿಯೋ ಉದಿಸಿ, ಎಲ್ಲಿಯೋ
ಬೆಳಗಿ, ಮತ್ತೆಲ್ಲಿಯೋ ಮುಳುಗುವ
ಸೂರ್ಯ ಕೂಡ ಇಲ್ಲಿಯವನೇ
ಆಗಿ ಬಿಡುತ್ತಾನಲ್ಲ!

ಇದೆಂಥ ನಾಡು...!
ಎಲ್ಲಿಯೋ ಹುಟ್ಟಿ, ಎಲ್ಲಿಯೋ
ಹರಿದು, ಮತ್ತೆಲ್ಲಿಯೋ ಹೋಗಿ ಸೇರುವ
ನದಿ ಕೂಡ ಇಲ್ಲಿಯದೆ
ಆಗಿ ಬಿಡುತ್ತದಲ್ಲ!

ಇದೆಂಥ ಭೂಮಿ...!
ಯಾರದೋ ಬೀಜ, ಯಾರದೊ
ಬೆಳಕು, ಮತ್ಯಾರದೊ ಆರೈಕೆಯಲಿ
ಮೈ ತುಂಬಿಕೊಂಡು
ಎಲ್ಲರ ತಾಯಿ ಆಗಿಬಿಡುತ್ತದಲ್ಲ!

ಇದೆಂಥ ಮನಸು...!
ಯಾರದೋ ರೀತಿ, ಯಾರದೊ
ನೀತಿ, ಮತ್ತಾರದೊ ಪ್ರೀತಿಯಲಿ ಅರಳಿ
ಬಯಸಿದ್ದನ್ನು ಯಾರಿಗೂ
ಹೇಳದೆ ಹೋಗುತ್ತದಲ್ಲ!!



**ವೀಣಾ ಅ. ತಿರಕಪಡಿ**



# ನೀಲಿ ಶೂನ್ಯ

ಅದ್ಯಾಕೆ ಹೀಗೆ ಮಾತುಗಳ
ಕಳಕೊಂಡವರ ಹಾಗೆ ಕುಳಿತಿದ್ದಿ?
ಮಾತುಗಳೊಳಗೆ ಹುದುಗಿ
ಮೌನದ ಹುದಲೇನೆಂದ
ತಿಳಿಯದವಳು ನೀನು!
ನಿನಗೆ
ಗೊತ್ತಿರುವುದೆಲ್ಲ ಮಾತು, ಮಾತು,
ಬರೀ ಮಾತು!
ಆದರೂ-
ಮಾತೊಳಗೆ ಮೌನದ ಕುಡಿಯೊಡಿಸಿದಾಕೆ
ಯಾಕೆ ಮಾತುಗಳ ಕಳಕೊಂಡಿ?!
ಇಂದು ಆಕಾಶ ಬಿಳಿಯಾಗಿ,
ಕಪ್ಪಾಗಿ, ಮತ್ತೆ ಸುರಿದು,
ಖಾಲಿಯಾಗಿ, ನೀಲಿಯಾದಂತೆ
ನಿನ್ನೊಳಗೆ ಎಂಥ ಮಳೆ ಸುರಿಯಿತೊ
ನೀ ಮೌನಿಯಾದೆ!
ನೀನೀಗ ಆಕಾಶದ ಬಯಲು
ನೀಲಿ ಶೂನ್ಯ!!

ವೀಣಾ ಅ. ತಿರಕಪಡಿ





ಮಹೇಶ್ವರಿ .ಯು

## ಹೋಗು ತಂಗಾಳಿಯೇ

ಹೋಗು ತಂಗಾಳಿಯೇ
ಬೇಲಿ ಮೇಲೆ ಮುದ್ದಾಗಿ ಮಲಗಿದೆ
ಯಾವ ಚಿಣ್ಣನದೊ ಮುದ್ದು ಸುರಿಯುವ
ಪುಟ್ಟ ಬನಿಯನು
ಆಲಿಂಗಿಸೊಮ್ಮೆ ಹೂಮುತ್ತ ನೊತ್ತಿಬಿಡು

ಹೋಗು ತಂಗಾಳಿಯೇ, ಅಗೊಅಲ್ಲೆ
ಪುಟು ಪುಟು ಓಡಾಡಿದ ಪುಟ್ಟ ಹೆಜ್ಜೆಗಳಗುರುತು
ಬಿ-ಸು-ಪು ಆರಿಲ್ಲ-ಕಂದನೆಲ್ಲೋ ಕಾಣೆ
ಜೋಪಾನ ಎತ್ತಿ ಎದೆಗವಚಿಕೋ ಬಿಸುಪ

ಮೊಲೆಯುಂಡ ಎಳೆಗರುವ ಕಡೆಬಾಯ
ನೊರೆಯ ಪರಿಮಳಕೆ
ಕಚಗುಳಿಯಿಕ್ಕಿ ದೋಚಿಬಿಡು ಸೊದೆ ಸವಿಯ
ಹೋಗು ತಂಗಾಳಿಯೇ

ಜಗಮರೆತು ಚೋಕಾಲಿಯಾಡುವ
ಬಾಲೆಯರ ಮೃದು ಅಂಗಾಲ ಕೆಂಪು
ಪೂಸಿ ಹೊದ್ದುಕೊ ಸೊಬಗ

ಹೋಗು ತಂಗಾಳಿಯೇ, ಅಲ್ಲೆಲ್ಲ ಸುತ್ತಾಡಿ
ಬಂದೊಮ್ಮೆ ಮಾತಾಡು



## ಹಾ ಸೋರುಗಲ್ಲದ ಚಂದ್ರಮ!

ರಕ್ತಲಸಿತ ಬೆಳದಿಂಗಳೆ ಈ ನಭದಲ್ಲಿ!
ಎಷ್ಟು ಮುದ್ದಾಗಿದ್ದಾನೆ ಈ ಸೋರುಗಲ್ಲದ ಚಂದ್ರಮ!
ಬಿಮ್ಮಗೆ ಬಿಗಿವ ಕಡಲ ಮುಸುಡಿಗೆ
ಮಂಗಳಾರತಿ ಬೆಳಗತಕ್ಕವನೆ ಈತ!
ಅರೆಯುತಿದ್ದಾರೆ ಯಾರು, ಯಾವ ಮೂಲೆಯಲ್ಲಿ
ಪಾಪ ತಾಯಿ! ಕಂದನ ಸೋರುಗಲ್ಲಕೆ
ಯಾವ ಕರುಳ ಮದ್ದು?

## ಕರೆ

ದುಡು ದುಡು ಹುಳಿ ಮರವ ದಾಟಿ
ಬಂದ ನೆಂಟನ ಹಾಗೆ
ಅಷ್ಟೊಂದು ಸಲೀಸು ಮನೆಯೊಳಗೆ
ಮೊಮ್ಮ ಕೂಸಿನ ಮೊದಲ ಹುಟ್ಟುಹಬ್ಬದ ಕನಸು
ಕಾಣುತ್ತ ಮೈ ಮರೆತ ಅಜ್ಜನ ಎದೆಗೆ
ಹೀಗೆ ಏಕಾಏಕಿ ಡಿಕ್ಕಿ
ಹಾರಿ ಹೋಯಿತು ಹಕ್ಕಿ!

ಹಸಿಮಡಲಶಯ್ಯೆಯಲಿ
ಸುರಳೀತ ಚಟ್ಟವೇರುವ ಘಟದ
ಹೆಸರು ಹಿಂದುಳಿದಿತ್ತು
ಮೊಮ್ಮಕೂಸಿನ ಹೆಸರು
ಹಿಡಿದು ಲೊಚಗುಡುತಿತ್ತು
ಅಜ್ಜಿಯ್ನ ಬಿಕ್ಕು ಬಾಯಿ

ಅವಳ ಒಂದು ಕಿವಿ
ಹುಳಿ ಮರದ ಅಡಿಯಲ್ಲೆ
ಧುತ್ತೆಂದು ಬರುವ ನೆಂಟನ ಕರೆಗೆ
ಇನ್ನೊಂದು, ಮೊಮ್ಮಕೂಸಿನ
ಸೆರಗ ಮರೆಯ ನಗೆಗೆ!





## ಆ ಮೀನಾಕ್ಷಿಯ ಕಟ್ಟಿಬಿಡಿ

ಕಾಲ್ದಾರಿಯಲ್ಲಿ ಬೆನ್ನುಬಾಗಿದ ಮುದುಕಿ
ಹೆಜ್ಜೆ ಹೆಜ್ಜೆಗಳನೆಣಿಸಿ
ಕಳೆಯುತ್ತ ಸಾಗುತ್ತಾಳೆ
ಎದುರಿಗೆ ಬಂತೇ ತುಡುಗುದನ ಮೀನಾಕ್ಷಿ?
ತನ್ನಿ ಹಗ್ಗವ ಕಟ್ಟಿಬಿಡಿ ಒಮ್ಮೆ
ಬಡಪಾಯಿ ಅಜ್ಜಿ-ಇಳಿದ
ಹೆಜ್ಜೆಗಳನೆಣಿಸುತ್ತ ಸಾಗಲಿ
ತುಸುವಿಶ್ರಾಂತಿಗೆ
ಮೀನಾಕ್ಷಿ ಹಾಯ್ದೀತೆ
ಧೂಳೀಪಟ ಮಾಡೀತೆ
ಅದಕೆ ಮುನ್ನವೆ
ಆ ಮೀನಾಕ್ಷಿಯ ಕಟ್ಟಿಬಿಡಿ

ಮಹೇಶ್ವರಿ.ಯು

ವಿಶ್ವ ಭಾರತಿ - 24



## ಚಂದ್ರಕಾಂತ ಬಕ್ಷಿ

# ನೇತಿಹಾಸ

ಕನ್ನಡಕ್ಕೆ: ಶಿಮುಂಜೆ ಪರಾರಿ

ಸರಕಾರೀ ಕಂಟ್ರಾಕ್ಟರನಂತೆ ಕಾಣಿಸುತ್ತಿದ್ದ ಆ ಮುದಿಯ ವಿಚಾರಿಸಿದ, ''ಏನು ಮಾಡುತ್ತಿದ್ದೀರಿ ನೀವು?''

ಪಯಣಿಸುತ್ತಿದ್ದ ಮಿಡ್ಲ್‌ಗೇಜ್ ರೈಲಿನ ಖಡ ಖಡ ಶಬ್ದಕ್ಕಿಂತ ತುಸು ದನಿ ಏರಿಸಿಯೇ ಇವರು ಉತ್ತರಿಸಿದರು, ''ನಾನು ಪ್ರೊಫೆಸರ್.''

''ಯಾವ ವಿಷಯದ ಪ್ರೊಫೆಸರ್?''

''ಇತಿಹಾಸ''

''ಅಹಮದಾಬಾದಿನಲ್ಲೇನು?'', ಆ ಮಹಾ ಪುರುಷನ ಮುಖದಲ್ಲಿ ತುಚ್ಛ ಆನಂದ ಕಾಣಿಸಿತು. ಅಯಶಸ್ವೀ ಮನುಷ್ಯನನ್ನು ಕಂಡಾಗ ಯಶಸ್ವೀ ಮನುಷ್ಯನಿಗೆ ಲಭಿಸುವ ಆನಂದ. ಪ್ರಾಥಮಿಕ ಶಾಲಾ ಮಾಸ್ತರನನ್ನು ಕಂಡಾಗ ಸಾಮಾನ್ಯ ಜನರಿಗೂ ಉಂಟಾಗುವಂತಹ ಆನಂದ.

''ಅಲ್ಲ'', ಸುಳ್ಳು ಹೇಳುವ ಪೂರ್ವ ತಯಾರಿಯೊಂದಿಗೇ ಅವರು ಮಂದಹಾಸ ಬೀರಿದರು. ''ಮೊದಲು ಆಕ್ಸ್‌ಫರ್ಡಿನಲ್ಲಿದ್ದೆ.''

ಆ ಮಹಾಪುರುಷ ಜಗತ್ತು ಕಂಡವ. ಕೂಡಲೇ ತಪ್ಪೊಪ್ಪಿಕೊಳ್ಳಲಾರದ ಯಶಸ್ವೀ ಮಂದಿಯಲ್ಲಿ ಅವನೂ ಒಬ್ಬ. ''ಆಕ್ಸ್‌ಫರ್ಡ್ ಎಂದರೆ ಎಲ್ಲಿ, ಇಂಗ್ಲೆಂಡಿನಲ್ಲೇನು?''

ಅವರ ಕಣ್ಣ ಕೊನೆಯಲ್ಲಿ ತುಸು ಹೊಳಪು ಕಾಣಿಸಿಕೊಂಡಿತು. ''ಇಂಗ್ಲೆಂಡ್ ದೇಶದಲ್ಲಿ ಲಂಡನ್ ಅಂತ ಒಂದು ನಗರವಿದೆ. ಅಲ್ಲಿಂದ ಸುಮಾರು ಐವತ್ತು ಮೈಲು ದೂರದಲ್ಲಿದೆ ಆಕ್ಸ್‌ಫರ್ಡ್. ಆ ಯೂನಿವರ್ಸಿಟಿಯಲ್ಲಿ ನಾನು ಭಾರತದ ಪ್ರಾಚೀನ ಇತಿಹಾಸ...''

''ಅಲ್ಲಿ ಒಳ್ಳೇ ಸಂಪಾದನೆ ಇರುತ್ತಲ್ಲಾ?''

''ಹೌದು. ಅಲ್ಲಿಯ ವ್ಯವಹಾರ ಪೌಂಡಿನಲ್ಲಿ. ಒಂದು ಪೌಂಡ್ ಅಂದರೆ ಸುಮಾರು ಮೂವತ್ತೆರಡು ರೂಪಾಯಿಗಳು.''

ಶ್ರೀಪಾದ

''ನಮ್ಮ ಊರಿನ ಒಬ್ಬ ದರ್ಜಿ ಕೂಡಾ ಈಗ ಅಲ್ಲೇ ಇರೋದು. ಅವನು ಮೊದಲು ಆಫ್ರಿಕಾಕ್ಕೆ ಹೋಗಿದ್ದ. ಅಲ್ಲಿಂದ ಇಂಗ್ಲೆಂಡಿಗೆ ಹೋದನಂತೆ. ಅವನೀಗ ಅಲ್ಲೊಂದು ಬಂಗ್ಲೆ ಕೂಡ ಕಟ್ಟಿಸಿ ಕೊಂಡಿದ್ದಾನಂತೆ.''

''ನಾನು ಕೂಡಾ ಮನೆ ಹುಡುಕುತ್ತಿದ್ದೇನೆ. ಪಾಲನ್‌ಪುರ್‌ದಲ್ಲಿ ಒಂದು ಬಂಗ್ಲೆ ಖರೀದಿಸುತ್ತಿದ್ದೇನೆ. ಮೌಂಟ್ ಆಬೂನಲ್ಲೂ ಒಂದು ಬಂಗ್ಲೆ ಇದ್ದರೆ ಅನುಕೂಲ ಅಂದುಕೊಂಡಿದ್ದೇನೆ.'' (ಇಸ್ಪೀಟಿನ ಎಕ್ಕಾನೇ ಎಸೆದುಬಿಟ್ಟರು.)

ಆ ಮಹಾಪುರುಷನ ಕಣ್ಣುಗಳಲ್ಲಿ ವ್ಯಾಪಾರೀ ಹೊಳಪು ಕಾಣಿಸಿಕೊಂಡಿತು. ''ವ್ಹಾ ಸರ್, ನಿಮಗೆ ಇಂಗ್ಲೆಂಡ್ ಒಲಿದಿರೋ ಹಾಗೆ ಕಾಣಿಸುತ್ತದೆ. ಒಳ್ಳೆಯದಾಯಿತು. ನಿಮ್ಮದು ಒಂದು ಹೊಸ ಪರಿಚಯವಾಯಿತು. ಎಂದಾದರೊಮ್ಮೆ ಆ ಕಡೆ ಬಂದಾಗ, ಹೋಟೆಲಲ್ಲಿ ಜಾಗ ಸಿಗದಿದ್ದರೆ ಖಂಡಿತ ನಿಮ್ಮಲ್ಲಿಗೆ ಬರುತ್ತೇನೆ...'' (ಆಟ ತಿರುವು ಮುರುವಾಯಿತು.)

''ಖಂಡಿತ ಬನ್ನಿ. ಸರ್ವೆಂಟ್ ಕ್ವಾರ್ಟರ್ಸ್ ಅಂತೂ ಇದ್ದೇ ಇರುತ್ತದೆ. ಅಂತಹದೇ ಬಂಗಲೆ ಖರೀದಿಸಬೇಕೂಂತ ನಿಶ್ಚಯಿಸಿದ್ದೇನೆ. ಆದುದರಿಂದ ಸ್ಥಳದ ತೊಂದರೆಯಾಗಲಿಕ್ಕಿಲ್ಲ.'' (ಒಂದು ಬ್ಲೈಂಡ್ ನಡೆ.)

''ಈಗ ಆಬೂಗೆ ಹೋಗುತ್ತಿದ್ದೀರೇನು?''



"ಇಲ್ಲ, ಮೊದಲು ಪಾಲನ್‌ಪುರ್‌ಗೆ ಹೋಗಬೇಕು. ಅಲ್ಲಿಯ ಬಂಗಲೆ ಖರೀದಿಯ ಕೆಲಸ ಮುಗಿಸಿ, ಅನಂತರ ಆಬೂ." (ಗೇಮ್ ಆಯಿತು.)

ವೇಟರ್ ಬಂದ. "ಸರ್, ಪಾಲನ್‌ಪುರ್‌ನಲ್ಲಿ ಊಟ ತರಲೇನು?"

"ಬೇಡ. ನಾನು ಪಾಲನ್‌ಪುರ್‌ದಲ್ಲಿಯೇ ಇಳಿಯೋದು."

ಇತಿಹಾಸದ ಪ್ರೊಫೆಸರ್, ಕಿಸೆಯಿಂದ ಪರ್ಸ್ ತೆಗೆದು, ಗರಿಗರಿಯಾದ ಹೊಸ ನೋಟನ್ನು ನಿರ್ಲಕ್ಷ್ಯದಿಂದಲೇ ವೇಟರನಿಗೆ ನೀಡಿದರು. ಅವರು ಚಿಲ್ಲರೆ ಹಿಂತಿರುಗಿಸಿದ. ಇವರು ಭಕ್ಷೀಸು ಕೊಟ್ಟರು. ಅವನು ಸಮ್ರವಾಗಿ ಸಲಾಮು ಮಾಡಿದ. ಮಹಾಪುರುಷನ ಕಣ್ಣುಗಳಲ್ಲಿ ಆದರ-ಗೌರವಗಳು ತುಂಬಿದ್ದುವು. ರೈಲು ನಿಲ್ದಾಣದಿಂದ ಮತ್ತೆ ಹೊರಟಿತು.

ಎದುರಿಗೇ ಕುಳಿತಿದ್ದ ಮಹಾಪುರುಷ ತನ್ನ ಟಿಫಿನ್ ಬಾಕ್ಸ್ ತೆರೆದ. "ಸರ್, ಸ್ವಲ್ಪ ತಗೊಳ್ಳಬಹುದಲ್ಲಾ..."

"ಬೇಡ-ಕ್ಷಮಿಸಿ, ನಾನು ಪ್ರವಾಸದ ಹಾಗೆಲ್ಲಾ ತಿಂಡಿ ತಿನ್ನೋದಿಲ್ಲ. ತಿನ್ನೋದಿದ್ದರು ರೆಸ್ಟಾರೆಂಟಿನಿಂದ ಮಾತ್ರ ಖರೀದಿಸುತ್ತೇನೆ. (ಕೈಯಾಡಿಸಿ ನೊಣಗಳನ್ನು ಜಾಡಿಸುತ್ತಾ ಮಹಾಪುರುಷ, ಊಟದ ಡಬ್ಬೆ, ನೀರಿನ ಬಾ ತೆರೆಯತೊಡಗಿದನು.)

"ಪ್ರೊಫೆಸರ್ ಸರ್, ಇಂಗ್ಲೆಂಡಿನಲ್ಲಿ ಕೂಡ ನೊಣಗಳು ಇರುತ್ತವೇನು?"

ಇತಿಹಾಸದ ಪ್ರೊಫೆಸರ್ ನಕ್ಕರು. "ಹೌದು ನೊಣಗಳು ಎಲ್ಲಾ ಕಡೆ ಇರುತ್ತವೆ. ಆದ ಅಲ್ಲಿಯ ನೊಣಗಳು ಇಲ್ಲಿನವಂತಲ್ಲ, ಒಂದ ಸಲ ಝಾಡಿಸಿ ದೂರ ಸರಿಸಿದರೆ, ಅನಂತರ ಮ ನಮ್ಮ ಬಳಿ ಸುಳಿಯೋದಿಲ್ಲ." ವಿಲಾಯತಿ ನೊಣಗಳ ಚಿಂತೆಯನ್ನು ಮಹಾಪುರುಷನ ತಲೆ ವರ್ಗಾಯಿಸಿ ಪ್ರೊಫೆಸರ್ ಬಾತ್‌ರೂಮ್ ಕ ಹೊರಟರು.





"ನಾನು ಒಂದು ಶಬ್ದ ಬರೆಯುತ್ತೇನೆ, ಮತ್ತು ಸಾವಿರಾರು ಓದುಗರ ಮನಸ್ಸಿನಲ್ಲಿ ಸಾವಿರಾರು ಪ್ರತಿಮೆಗಳು ನಿರ್ಮಾಣಗೊಳ್ಳುತ್ತವೆ. ಎಷ್ಟು ವಾಚಕರೋ ಅಷ್ಟು ಪ್ರತಿಮೆಗಳು. ಈ ಸಾಮರ್ಥ್ಯ ಕೇವಲ ಶಬ್ದಗಳದೇ ಆಗಿರಲು ಸಾಧ್ಯ. ಈ ಕಲೆಯು ನನ್ನನ್ನು ಸೌಮ್ಯ ಮತ್ತು ತಿಳಿವಳಿಕೆಯವನನ್ನಾಗಿ ಮಾಡಿತು" ಎನ್ನುವ ಗುಜರಾಥಿ ಕಥನಕಾರ ಚಂದ್ರಕಾಂತ ಬಕ್ಷಿ ಚಿತ್ರಮಯ ಬರವಣಿಗೆಗೆ ಪ್ರಸಿದ್ಧರು. 25 ಕಾದಂಬರಿ, 12 ಕಥಾಸಂಗ್ರಹ, ಅಂಕಣ, ಆತ್ಮಕಥೆ ಹೀಗೆ ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ನಶಿಸುತ್ತಿರುವ ನಂಟು ಅವರನ್ನು ಕಾಡುವ ವಸ್ತು.



ಈ ಕತೆಯನ್ನು ಕನ್ನಡಕ್ಕೆ ತಂದಿರುವ ಶಿಮುಂಜೆ ಪರಾರಿ, (ಕೆ.ಜೆ. ಶೆಟ್ಟಿ) ಮುಂಬಯಿಯಲ್ಲಿ ಕಳೆದ ನಾಲ್ಕು ದಶಕಗಳಿಂದ ಸಾಹಿತ್ಯ, ರಂಗಭೂಮಿ, ಸಿನಿಮಾ ಈ ಎಲ್ಲ ಕ್ಷೇತ್ರಗಳಲ್ಲಿ ಕ್ರಿಯಾಶೀಲರಾಗಿದ್ದಾರೆ. ಬಕ್ಷಿಯವರ ಒಂದು ಕಥಾ ಸಂಕಲನವನ್ನು (ನಾನು, ನೀನು ಮತ್ತು...) ಕನ್ನಡಕ್ಕೆ ತಂದಿದ್ದಾರೆ.

ಪಾಲನ್‌ಪುರ್ ಸ್ಟೇಶನ್ ಬಂತು.

ಟಾಂಗಾ: "ಎಲ್ಲಿಗೆಹೋಗೋದಿದೆಸಾಹೇಬ್ರೇ?"

ಎಷ್ಟು ವರ್ಷಗಳು ಕಳೆದುಹೋದುವು! ಬಾಲ್ಯ ಕಳೆದುದು ಇಲ್ಲೇ. ಭೂತಕಾಲ ಹರಿಯಿತು. ಇತಿಹಾಸ ಸರಿಯಿತು. ಹತ್ತು ಗಂಟೆಯ 'ಮೇಲ್'ನ (Mail) ಸಿಳ್ಳನ್ನು ತಾರಸಿಯ ಮೇಲೆ ನಿಂತು ಕೇಳುತ್ತಿದ್ದ, ಆ ಬಾಲ್ಯ. ಅಹಮದ್ ಬಿ ತನ್ನ ಬಡಕಲು ಮುದಿ ಎತ್ತಿನ ಮೇಲೆ ಚರ್ಮದ ಚೀಲ ಹೊರಿಸಿಕೊಂಡು ಹೋಗಲು ಬರುತ್ತಿದ್ದ. ಅವನು ಓಡೋಡಿ ಎರಡು ಬಾಲ್ದಿ ನೀರು ತಗೊಳ್ಳುತ್ತಿದ್ದ, ಅದು ಭೂತಕಾಲ. ಶಾಲೆಯಿಂದ ಹಿಂತಿರುಗಿ ಬರುವಾಗ ಅವನು ಜೋರಾಗಿ ಕಿರುಚುತ್ತಿರುತ್ತಿದ್ದ. ತನ್ನದೇ ಸ್ವರ ಮತ್ತು ಪ್ರತಿಧ್ವನಿಗಳ ಅಮಲಿನಲ್ಲಿದ್ದಂತೆ! ಅದು ಇತಿಹಾಸ!

ದಾರಿಯಲ್ಲಿ 'ದಿಲ್ಲೀ ದರ್ವಾಜ'ದ ಬಳಿ ಹಳ್ಳಿಯ ಹೆಂಗಸೊಬ್ಬಳು ಹುಲ್ಲು ಮಾರಲು ಕುಳಿತುಕೊಂಡಿದ್ದಳು. ಪ್ರೊಫೆಸರರ ಅನುಮತಿ ಪಡೆದು ಟಾಂಗಾದವನು ಬಂಡಿ ನಿಲ್ಲಿಸಿ, ಅವಳ ಜೊತೆ ವ್ಯಾಪಾರ ಕುದುರಿಸಲು ಚರ್ಚೆ ಮಾಡ ತೊಡಗಿದನು.

ಅವರು ಮೈಯೆಲ್ಲಾ ಕಿವಿ ಮಾಡಿಕೊಂಡು ಕೇಳುತ್ತಿದ್ದರು. ಕಣ್ಣವೆಯಿಕ್ಕದೇ ಅವರಿಬ್ಬರನ್ನೂ ನೋಡುತ್ತಿದ್ದರು.

ಅನೇಕ ವರ್ಷಗಳ ನಂತರ ಅವರು ಆ ಗ್ರಾಮ್ಯ ಭಾಷೆಯ ಸೊಗಸನ್ನು ಆನಂದಿಸುತ್ತಿದ್ದರು. ಅವರೊಳಗೆ ಇತಿಹಾಸವಾಗಿ ಸೇರಿಕೊಂಡಿದ್ದ ಭಾಷೆ. ಭೂತಕಾಲದ ಭಾಷೆ. ಬಾಲ್ಯದಲ್ಲಿ ಆಡುತ್ತಿದ್ದ ಭಾಷೆ. ಸುಸಂಸ್ಕೃತರಾಗಲಿಕ್ಕಾಗಿ ಪ್ರಯತ್ನಪೂರ್ವಕವಾಗಿ ಮರೆತಿದ್ದ ಭಾಷೆ. ತನ್ನ ಭಾಷೆ-ತನ್ನ ಪಿತೃಭಾಷೆ!

ಭಾಷೆ, ಲೇಡೀಜ್ ಎಂಡ್ ಜಂಟಲ್‌ಮೆನ್, ಭಾಷೆಯ ಉತ್ಪತ್ತಿಯ ಇತಿಹಾಸ ತುಂಬ ರೋಚಕವಾದುದು. ಫಿನಿಶಿಯನ್ ಪ್ರವಾಸಿಗಳು ಈಜಿಪ್ಟಿನ ಚಿತ್ರಲಿಪಿಯಿಂದ ಪ್ರತೀಕಗಳನ್ನು



ನಿರ್ಮಿಸಿದರು. ಅದರಿಂದಲೇ ಉದಿಸಿತು ಲಿಪಿ. ಇದೇ ಫಿನಿಶಿಯನ್ ಜನ ಮೊತ್ತಮೊದಲು ಭಾರತಕ್ಕೆ ಲಿಪಿಯನ್ನು ತಂದರು ಎಂದೂ ಇತಿಹಾಸವಿದೆ. ಈಜಿಪ್ಟಿನಲ್ಲಿ ಹಾರೋಲಿಫಿಕ್ ಚಿತ್ರಲಿಪಿ ಇತ್ತು. ಮೆಸೊಪೊಟೋಮಿಯಾದಲ್ಲಿ ಕ್ಯೂನಿಫಾರ್ಮ್ ಲಿಪಿ ಪ್ರಚಲಿತವಿತ್ತು. ಚೀನದಲ್ಲಿ ಮೊದಲು ಇದ್ದುದೇ ಚಿತ್ರಲಿಪಿ. ಅವುಗಳಲ್ಲಿ

ಸುಮಾರು ನಲ್ವತ್ತು ಸಾವಿರಕ್ಕೂ ಹೆಚ್ಚು ಪ್ರತೀಕಗಳಿದ್ದುವಂತೆ. ಆದರೂ ಆಗ ಲಿಪಿಗಳು ಜನ್ಮ ತಳೆದಿರಲಿಲ್ಲ. ವರ್ತುಲಾಕಾರದ ನಾಣ್ಯಗಳನ್ನು ಮೊತ್ತಮೊದಲು ಚಲಾವಣೆಗೆ ತಂದವರು ಸುಮೇರಿಯನ್ ಜನರು. ಅಲ್ಲಿಂದಲೇ ಲೇಖನ ಕಲೆ ಹುಟ್ಟು ಪಡೆಯಿತಂತೆ. ಭಾರತದಲ್ಲಿ ಕ್ರಿ.ಪೂ. ಎಂಟನೇ ಶತಕದಲ್ಲಿ ಲೇಖನದ ಪ್ರಾಥಮಿಕ ಪುರಾವೆ ದೊರಕುತ್ತದೆ. ನಾಲ್ಕನೆಯ ಶತಮಾನದ ಹೊತ್ತಿಗೆ ಬ್ರಾಹ್ಮೀ ಅಕ್ಷರಗಳು ಲಿಪಿಬದ್ಧವಾಗಿದ್ದುವು.

ಟಾಂಗಾ ನಿಂತಿತು.

ಎದುರಿಗೆ ಕಹಿಬೇವಿನ ಬೋಳುಮರ ನಿಂತಿತ್ತು. ಇತಿಹಾಸದ ಪ್ರೊಫೆಸರ್ ಹಣ ತೆತ್ತು, ಟಾಂಗಾದಿಂದ ಇಳಿದರು. ಪಿತೃಭೂಮಿ!



ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ. ಇದು ಪೂರ್ವ, ಅದು ಪಶ್ಚಿಮ. ಪಿತೃಭೂಮಿಯನ್ನು ಚುಂಬಿಸುವ ಬಯಕೆ ಮೂಡಿ ಮಾಯವಾಯಿತು. ಮರೆಯಿಂದ ಮುದುಕಿಯೊಬ್ಬಳು ಉಚ್ಚೆ ಹೊಯಿದು ಹೊರಬಂದಳು. ಅವರನ್ನೇ ನೋಡುತ್ತಾ ಮುಂದುವರಿದುಹೋದಳು. ಅವಳಿಗೆ ಗುರುತು ಸಿಗಲಿಲ್ಲ. ಮೇನಾಕಾಕೀ ಬಹುಶಃ ಇನ್ನೂ ಬದುಕಿದ್ದಾಳೆ. ಇತಿಹಾಸದ ಪ್ರೊಫೆಸರ್ ಮನೆಯ ಆವರಣ ಪ್ರವೇಶಿಸಿದರು.

ಮನೆಯನ್ನು ಒಳಹೊಕ್ಕು, ಕಿಟಕಿ ತೆರೆದು, 'ಲಂಗ್ಡಾ' ಕಹಿಬೇವಿನ ಮರವನ್ನು ದಿಟ್ಟಿಸಿದರು. ಹಮೀದ್‌ಖಾನ್‌ಗೆ ಕುದುರೆಯ ಲಗಾಮನ್ನು ಕೊಟ್ಟು, ತಲೆಯ ಮೇಲಿನ 'ಪಗಡಿ' ತೆಗೆದಿರಿಸಿ, ಕಿಟಕಿ ತೆರೆದು, ಹೀಗೇ ಆ ಬೇವಿನ ಮರವನ್ನು ದಿಟ್ಟಿಸಿರಬಹುದು, ಮದ್ರಾಸಿನಿಂದ ಹಿಂತಿರುಗಿ ಬಂದಾಗ ಅಪ್ಪಾಜಿ ಕೂಡ ಹೀಗೇ ಕಿಟಕಿ ತೆರೆದು, ಆ ಕಹಿಬೇವಿನ ಮರವನ್ನು ನೋಡಿರಬಹುದು. ಆಕ್ಸ್‌ಫರ್ಡಿಗೆ ಹೋಗಿ ಹಿಂತಿರುಗಿ ಬಂದಿದ್ದಾಗಲೂ ಅವರು, ಹೀಗೇ ಬಂದು, ಕಿಟಕಿ ತೆರೆದು, ಲಂಗ್ಡಾ ಕಹಿಬೇವಿನ ಮರವನ್ನು ನೋಡುತ್ತಾ ನಿಂತಿದ್ದರು. ಪುರಾತನ ಕಹಿಬೇವಿನ ಮರ ಹಲವು ತಲೆಮಾರುಗಳಿಂದ ಹಾಗೇ ನಿಂತಿತ್ತು. ನೂರು-ನೂರೈವತ್ತು ವರ್ಷ ಹಳೆಯ ವೃಕ್ಷ! ಮುತ್ತಜ್ಜನ ಕಾಲದಲ್ಲೊಮ್ಮೆ ಸಿಡಿಲು ಬಡಿದಿತ್ತಂತೆ. ಅರ್ಧ ವೃಕ್ಷ ಸುಟ್ಟು ಕರಕಲಾಗಿತ್ತು. ಅದರಡಿ ಮಲಗಿದ್ದ ಎರಡು ಒಂಟೆಗಳು ಸತ್ತಿದ್ದುವಂತೆ. ಅಂದಿನಿಂದಲೇ ಬಹುಶಃ ಆ ಮರವನ್ನು 'ಲಂಗ್ಡಾ' (ಕುಂಟ) ಎಂದು ಕರೆಯಲು ಆರಂಭವಾಗಿರಬೇಕು. ಅವರ ದೃಷ್ಟಿ ಕಬ್ಬಿಣದ ಕಂಬದ ಮೇಲೆ ಸ್ಥಿರವಾಯಿತು. ಯುದ್ಧಕಾಲದಲ್ಲಿ ಯಾರೂ ದೀಪ ಹಚ್ಚುತ್ತಿರಲಿಲ್ಲ. ಊರಲ್ಲಿ ಬರೇ ನಾಲ್ಕಾರು ಮೋಟಾರು ಕಾರುಗಳಿದ್ದುವು. ಅವುಗಳಲ್ಲಿ ಒಂದರ ಹಿಂದೆ ಅವರು ಕೂಡಾ ಓಡುತ್ತಾ ಆ ಕಂಬಕ್ಕೆ ಡಿಕ್ಕಿ ಹೊಡೆಯುತ್ತಿದ್ದರು. ಅವರಿಗರಿವಿಲ್ಲದೇ ಅವರ ಕೈ ಹಣೆಯನ್ನೊಮ್ಮೆ ನೇವರಿಸಿಕೊಂಡಿತು. ಆಗ ಮುಂದಲೆ ತುಂಬ ಕೂದಲಿತ್ತು. ಈಗ ಅದು ಹಿಂದಕ್ಕೆ ಸರಿದಿದೆ. ಮುಂದಲೆ ಬಟ್ಟ ಬಯಲಾಗಿತ್ತು.

ಸ್ಮೃತಿ ಪಟಲದಲ್ಲಿ ಸುಂಟರಗಾಳಿಯಂತೆ ಎದ್ದ ಹಳೆಯ ನೆನಪುಗಳ ಸರಮಾಲೆ, ಮತ್ತೆ ಮತ್ತೆ ಸುತ್ತತೊಡಗಿತು. ಮೊದಲು ಗಚ್ಚಿ (ತಾರಸಿ)ಯ ಮೇಲೆ ನಿಂತಾಗ ಟಾವರ್ ಕಾಣಸುತ್ತಿತ್ತು. ಈಗ ನಡುವೆ ಒಂದು ಆಲದಮರ ಬೆಳೆದು ನಿಂತಿದೆ. ಟಾವರಿನಿಂದ ಬರುತ್ತಿದ್ದ ಗಂಟೆಯ ಸದ್ದು ಬಹುಶಃ ಈಗಲೂ ಕೇಳಿಸುತ್ತಿರಬಹುದು. ಅಥವಾ ಹಂಚಿನ ಮೇಲಿಂದ ಒಣಗಲು ಹಾಕಿದ ಬಟ್ಟೆ ತೆಗೆಯುವುದು ಅವರ ಕೆಲಸವಾಗಿದ್ದ ಆ ದಿನಗಳು. ಆ ಲಂಗ್ಡಾ ಬೇವಿನ ಮರದ ಕೆಳಗೆ ಕುಳಿತು, ತೋಟಗಾರನ ಮೊಂಡು ಮೂಗಿನ ಮಗಳು ಬೋರೆಹಣ್ಣು ಮಾರುತ್ತಿದ್ದಳು. ಅಮ್ಮ ಅದನ್ನು ಖರೀದಿಸಲು ಬಿಡುತ್ತಿರಲಿಲ್ಲ. ಕೆಲವು

ಬಾರಿ ಅದರೊಳಗೆ ಹುಳುವಿರುತ್ತಿತ್ತು. ಕಾಲಿಗೆ ಸಂಕೋಲೆ ತೊಟ್ಟ ಕೈದಿಗಳು, ಹಳೆಯ ಜೈಲಿನ ಕಡೆ ಕಾಲೆಳೆಯುತ್ತಾ ಸಾಗುತ್ತಿದ್ದರು. ಸಾಯಂ ಕಾಲದ ನಾಲ್ಕು ಗಂಟೆಗೆ ಕಿಲ್ಲೆಯ ಬುರುಜಿನಿಂದ ತೋಫಿನ ಸದ್ದು ಕೇಳಿಸುತ್ತಿತ್ತು. ಸಂತೆಯಲ್ಲಿ ಸಾಮಾನಿನ ಮಾರಾಟದ ನಂತರ, ಕಣ್ಣು ಮುಚ್ಚಿಕೊಂಡು ಬಿದ್ದಿರುವ ಒಂಟೆಗಳನ್ನು ಎದ್ದು ನಿಲ್ಲಿಸಲು ಕುಟ್ಟುತ್ತಿದ್ದ ವ್ಯಾಪಾರಿಗಳು, ಹಿಂಗಾ ಲನ್ನು ಊರಿ ನಿಧಾನವಾಗಿ ಎದ್ದು ನಿಲ್ಲುವ ಒಂಟೆಯ ದೃಶ್ಯ... ಟ್ಯೂಬ್‌ಲೈಟ್ ಬರುವುದಕ್ಕೆ ಹಿಂದಿನ ಜಗತ್ತು...

ಸಾಯಂಕಾಲ ಬಿಸಿ ಬಿಸಿ .ಬೂದಿಯಿಂದ ಕಂದೀಲನ್ನು ತಿಕ್ಕಿ ತೊಳೆಯಲಾಗುತ್ತಿದ್ದ ಜಗತ್ತು. ರಾತ್ರಿಯ ಕತ್ತಲೆಯಲ್ಲಿ ಗೋಡೆಯ ಮೇಲೆ ಬೆಳಕು ನೆರಳುಗಳು ಕುಣಿದಾಡುತ್ತಿದ್ದ ಜಗತ್ತು. ಬೆಳ್ಳಂ ಬೆಳಗ್ಗೆ ಕೋಳಿಗಳ ಕಲೆತ ಸಾಯಂಕಾಲ ತೋಟಗಾತಿಯ ಬೈಗಳ ಸುರಿಮಳೆ. ಮಲಗು ವಾಗ ಕಣ್ಣ ಮುಂದೆ ತೇಲುತ್ತಿದ್ದ ನಕ್ಷತ್ರ ರಾಜಿ, ಮುಂಜಾವದ ಮಂದ ಪ್ರಕಾಶದಲ್ಲಿ ನಿಸ್ತೇಜ ವಾಗಿ, ಎತ್ತರದ ಕಟ್ಟಡಗಳ ಹಿಂದೆ ಕರಗಿ ಬಿಡುತ್ತಿದ್ದುವು. ಕಣ್ಣಿಗೆ ಕನ್ನಡಕ, ಬುದ್ಧಿಗೆ ಪಟ್ಟಿ ಕಟ್ಟಿರದ ಆ ದಿನಗಳು. ಮನಸ್ಸು ಪಾರದರ್ಶಕ ವಾಗಿದ್ದು, ಯಾವುದೇ ಕೊಂಕು ಕೊಸರು ಗಳಿಲ್ಲದೇ ನಿರ್ಮಲವಾಗಿ ನಗಬಹುದಾಗಿದ್ದ ದಿನಗಳು. ವರ್ಗದ ಹುಡುಗಿಯನ್ನು ಹಿಂಬದಿ ಯಿಂದ ಕಂಡಾಗ, ಬಿಗಿಯಾಗಿ ಕಟ್ಟಿದ ತಲೆ ಕೂದಲ ಜೋಲುವ ಜಡೆಗಳ ಬಗ್ಗೆ ಮಾತ್ರ ವಿಚಾರ ಮಾಡುತ್ತಿದ್ದ ಆ ದಿನಗಳು.

ಇತಿಹಾಸದ ಪ್ರೊಫೆಸರ್ ಬಾಲ್ಕನಿಯ ರೇಲಿಂಗಿಗೆ ಒರಗಿ ನಿಂತುಕೊಂಡು ಇತಿಹಾಸ ದಿಂದ ಇತಿಹಾಸವನ್ನು ಗುಣಿಸಿ, ಭಾಗಿಸ ತೊಡಗಿದ್ದರು.

ಸಾಯಂಕಾಲ ಕಚ್ಛದ ಮರುಭೂಮಿಯಿಂದ ಬೀಸುವ ಬಿರುಗಾಳಿಯೊಂದಿಗೆ ಮರಳು ತೂರಿ ಬರುವುದಿತ್ತು. ಈಗ ಸುತ್ತುಮುತ್ತೆಲ್ಲ ಮರು ಭೂಮಿಯೇ ಆಗಿದೆ. ಈಗ ಮಳೆ ಕೂಡ ಕಡಿಮೆ ಆಗಿದೆ. ಮೊದಲು ತುಂಬ ಮಳೆ ಬೀಳುತ್ತಿತ್ತು- ಶಾಲೆಗೆ ರಜೆ ಸಿಗುವಷ್ಟು ಮಳೆ. ಲಂಗ್ಡಾ ಕಹಿಬೇವಿನ ಮುಖದಡಿಯಿಂದ ಜಿಗಿದು ಹರಿ ಯುವ ನೀರಿನ ಝರಿ, ನೇರ ಶಾಲೆಯ ಮೆಟ್ಟಲುಗಳ ತನಕ ರಭಸದಿಂದ ಹರಿಯು ತ್ತಿತ್ತು... ಅವರು ಝರಿಯ ನೀರಿನಲ್ಲಿ ಕುಣಿ ಯುತ್ತಾ, ಜಿಗಿಯುತ್ತಾ, ಕಿರಿಚುತ್ತಾ ಗೆಳೆಯ ರೊಂದಿಗೆ ಶಾಲೆಗೆ ಹೋಗುತ್ತಿದ್ದರು, ಹಿಂತಿರುಗಿ ಬರುವಾಗ ಹುರಿದ ತಾಜಾ 'ಬಡೇಸೋಪ'ನ್ನು ಮೆಲುಕಾಡುತ್ತಿದ್ದರು. ಶಾಲೆಯಲ್ಲಿ ಟೆಲಿಫೋನು ಇರದ ಆ ದಿನಗಳು. 'ಜಾರ್ಜ್ ಫಿಫ್ತ್ ಕ್ಲಬ್' ಮೇಲೆ ಬೀಳುವ ಧೋಧೋ ಮಳೆಯನ್ನು ಅವರು ಕ್ಲಾಸಿನಲ್ಲಿ ಕುಳಿತುಕೊಂಡೇ ನೋಡುತ್ತಿದ್ದರು. ಟೈಫಾಯ್ಡ್ ಆಗಿದ್ದಾಗ ಮಾತ್ರವೇ ಇಪ್ಪತ್ತೊಂದು, ಇಪ್ಪತ್ತೆಂಟು, ಅಲ್ಲ ಬಹುಶಃ ಮೂವತ್ತೈದು ದಿನ ಮನೆಯೊಳಗೇ ಇರಬೇಕಾಯಿತು. ಹೊಟ್ಟೆ ಸ್ವಚ್ಛವಾಗಿರಬೇಕೆಂದು ಜುಲಾಬು ಕೊಟ್ಟಿದ್ದ ದಿನಗಳು. ಜುಲಾಬಿಗೆ ಹರಳೆಣ್ಣೆ, ಜ್ವರಕ್ಕೆ 'ಕಿರಾತ ಕಡ್ಡಿ'ಯ ಕಷಾಯವೇ ಮದ್ದಾಗಿದ್ದ ದಿನಗಳು. ಬಿದ್ದು ಎಲುಬು ಮುರಿದರೆ, ಅಥವಾ ಟ್ಯೂಬ್‌ಲೈಟ್ ತರಬೇಕಿದ್ದರೆ, ಮಧ್ಯಾಹ್ನ ಎರಡೂ ವರೆಯ ರೈಲು ಹಿಡಿದು ಅಹಮದಾಬಾದಿಗೇ ಹೋಗಬೇಕಿದ್ದ ದಿನಗಳು. ಅಹಮದಾಬಾದ್ ದೊಡ್ಡ ಪೇಟೆ. ಅಲ್ಲಿ ಒಳ್ಳೆಯ ಡಾಕ್ಟರರೂ ಇದ್ದರು, ಒಳ್ಳೆಯ ಟ್ಯೂಬ್‌ಲೈಟ್ ಕೂಡ ಕಡಿಮೆ ದರದಲ್ಲಿ ದೊರಕುತ್ತಿತ್ತು.

ಶಾಲೆಯ ರಜೆಯಲ್ಲಿ, ಹಳೆಯ ಜೈಲಿನ ಪಕ್ಕದ ಮೈದಾನದಲ್ಲಿ, ಒಂದು ಇನ್ನಿಂಗ್ಸಿನ ಮ್ಯಾಚ್ ನಡೆಯುತ್ತಿತ್ತು. ಗೆದ್ದವರು ಮೂರು ಬಾರಿ 'ಹಿಪ್ ಹಿಪ್ ಹುರ್ರೇಽಽಽ' ಎಂದು ಜಯಘೋಷ ಮಾಡುತ್ತಿದ್ದ ದಿನಗಳು. ಇದೇ ಜೈಲಿನಲ್ಲಿ ಪಂಡಿತ್ ನೆಹರೂ ಅವರು ರಕ್ತ ವಾಂತಿ



ಮಾಡಿದರೆಂದು ಸುಳ್ಳು ಸುದ್ದಿ ಹರಡಿದಾಗ, ಬಹು ದೊಡ್ಡ ಸಭೆ ಸೇರಿದ್ದ ದಿನಗಳು. ನವಾಬರ ಹುಟ್ಟುಹಬ್ಬದೆಂದು ಶಾಲೆಯ ಮಕ್ಕಳಿಗೆ ಬತ್ತಾಸು ಹಂಚಲಾಗುತ್ತಿತ್ತು. ಅಂದು ನಾನು ನನ್ನ ಕಿರಿಯ ತಮ್ಮನನ್ನೂ ಶಾಲೆಗೆ ಕರೆದುಕೊಂಡು ಹೋಗುತ್ತಿದ್ದ ದಿನಗಳು. ಹೊಸ ಬಟ್ಟೆ, ಎರಡೆರಡು ರುಮಾಲುಗಳ ಅಂದಿನ ದಿನಗಳು. ಕದ್ದು ಬರ್ಫಿನ ತುಂಡನ್ನು ಚೀಪುವಾಗ, ಕಡಿದು ಬಿದ್ದ ಗಾಳೀ ಪಟವನ್ನು ಲಪಟಾಯಿಸುವಾಗ, ಚಂಗೇಜ ಖಾನನಿಗೂ ದಿಗ್ವಿಜಯ ದೊರಕಿದಾಗ ಸಿಕ್ಕಿದ ಸುಖ ಅನುಭವಿಸುತ್ತಿದ್ದ ಆ ದಿನಗಳು.

ಬಾಲ್ಯದ ಇತಿಹಾಸದ ಕೆಲವು ಪಳೆಯುಳಿಕೆಗಳು-ಬೇವಿನ ಮರದ ಬಳಿ ಮುನೀರ್ ಭೇಟಿಯಾಗಿದ್ದ. ಕೆಂಪು ಲುಂಗಿ ತೊಟ್ಟಿದ್ದ. ಅಂದು ಅವನಿಗೆ 'ಸುಂತಿ' ಮಾಡಲಾಗಿತ್ತು.... ಮೀರಾಸಾ ದರ್ವಾಜದ ಬಳಿ ಅವನ ಚಿಕ್ಕಮ್ಮನ ಬೀಡಾ-ಬೀಡಿಯ ಅಂಗಡಿಯಿತ್ತು. ಅಂಗಡಿಯ ಮಹಡಿಯಲ್ಲಿ ಮೂರು ಮಂದಿಯ ಜೊತೆಯಲ್ಲಿ ಅವನು ಬೀಡಿ ಸೇದುತ್ತಿದ್ದ. ಧಾನ್ಯ ಹೆಕ್ಕುವ ಪಾರಿವಾಳದಂತೆ ಅವರು ನಾಲ್ಕೂ ಕಡೆ ಕಣ್ಣಾಡಿಸುತ್ತಿದ್ದರು. ಅದರಲ್ಲಿ ಒಂದು ತಲೆ ಶಂಕರನದು. ಇಂಗ್ಲಿಷ್ ಮೂರನೇ ಕ್ಲಾಸಿನವರೆಗೆ ಅವನು ನಮ್ಮ ಜೊತೆಯಲ್ಲಿದ್ದ. ಅನಂತರದ ಶಾಲಾರಜೆಯಲ್ಲಿ ಟಾಯ್‌ಫೋಯ್ಡ್ ಆಗಿ ಅವನು ತೀರಿಕೊಂಡ. ಪ್ಯಾರೆಲಾಲ್ ಆರನೇ ಕ್ಲಾಸಿಗೇ ಶಾಲೆ ಬಿಟ್ಟುಬಿಟ್ಟ. ಅವನ ತಂದೆ ಬಹಳ ಬಡವರೂಂತ ಮಕ್ಕಳು ಹೇಳುತ್ತಿದ್ದರು. ಒಂದು ದಿನ ಪೋಸ್ಟ್‌ಮ್ಯಾನ್‌ನ ಯೂನಿಫಾರ್ಮಿನಲ್ಲಿ ಅವನು ಕಾಗದ ಕೊಡಲೆಂದು ಮನೆಗೆ ಬಂದಿದ್ದ. ಆಗ...

ಇತಿಹಾಸದ ಪ್ರೊಫೆಸರ್ ಬಾಲ್ಕನಿಯಿಂದ ಒಳಗೆ ಬಂದರು.

ವರ್ಷ ಉರುಳಿತು. ಉರುಳುತ್ತಿರುವ ವರ್ಷಗಳೊಂದಿಗೇ ಜನ ಸಣ್ಣವರಾಗುತ್ತಾ ಹೋಗುತ್ತಿದ್ದರು.



ಹಳೆಯ ಪ್ರೀತಿ, ಹಳೆಯ ಆನಂದಗಳ ಹುಡುಕಾಟದಲ್ಲಿ ಅವರು ಹೊರಟಿದ್ದರು.

''ಏನಂತೀರಿ ಮಾಸ್ತರ್?''

ಮಾಸ್ತರ್ ದಾರಿಯಲ್ಲಿ ಸಿಕ್ಕಿದ್ದರೆ, ಬಹುಶಃ ಅವರಿಂದ ಗುರುತಿಸಲಾಗುತ್ತಿರಲಿಲ್ಲ. ಆದರೆ ಅದು ಅವರದೇ ಅಂಗಡಿ. ನೂಲಿನ ಮೇಲೆ ಹೊಲಿದ ನಾಲ್ಕಾರು ಶರ್ಟುಗಳು ಜೋತಾಡುತ್ತಿದ್ದುವು. ಕಾಲರ್, ಬಟನ್, ಅಸ್ತರ್ ಎಲ್ಲವೂ ಇದ್ದುವು. ಆದರೂ ಅಂಗಡಿಯೇಕೋ ಬರಿದಾಗಿದ್ದಂತೆ ಅನಿಸಿತು.

ಮಾಸ್ತರ್ ಒಂದರೆಕ್ಷಣ ಅವರನ್ನೇ ದಿಟ್ಟಿಸಿ ನೋಡಿ, ''ಅರೇ ಸೂರ್ಯಕಾಂತ್!'' ಎನ್ನುತ್ತಾ ನಕ್ಕರು. ಮುಖದ ಮೇಲೆ ಎರಡು-ಮೂರು ದಿನಗಳ ಗಡ್ಡ ಬೆಳೆದಿತ್ತು. ಮೈಯ ಚರ್ಮದಲ್ಲಿ ನೆರಿಗೆ ಬಿದ್ದಿತ್ತು. ಮುಖ ಸುಕ್ಕುಗಟ್ಟಿತ್ತು. ನೀರಸ ಹಾಸ್ಯ. ಕೂದಲು ಉದುರಿದ್ದ ಬೋಳುತಲೆ. ಬಟ್ಟೆ ಹೊಲಿದೂ ಹೊಲಿದೂ ಮಂದವಾದ ದೃಷ್ಟಿ. ನೆರಿಗೆ ಬಿದ್ದು ಜೋಲುತ್ತಿರುವ ಗಲ್ಲದ ಕಪ್ಪು ಚರ್ಮ. ಎರಡೂ ಕಿವಿಗಳಲ್ಲಿ ದಟ್ಟವಾಗಿ ಬೆಳೆದಿದ್ದ ರೋಮರಾಶಿ. ಮಾಸ್ತರ್ ಲಕ್ಷ್ಮಣ ರಾವ್- ಅವರು ಶಾಲೆಗೆ ಹೋಗುತ್ತಿದ್ದಾಗ, ಅವರಿಗೆ ಹಾಫ್‌ಶರ್ಟ್ ಹೊಲಿದು ಕೊಡುತ್ತಿದ್ದ ಮಾಸ್ತರ್. ಆಗ ಶಾಲೆಗಳಲ್ಲಿ ಗಣವೇಷ ಇರಲಿಲ್ಲ. ಹೈಸ್ಕೂಲಿಗೆ ಹೋದ ನಂತರ ಫುಲ್‌ಶರ್ಟ್ ಹಾಕುವ ಅಧಿಕಾರ ಪ್ರಾಪ್ತವಾಗಿತ್ತು.

ಇಡೀ ಊರಲ್ಲಿ ಲಕ್ಷ್ಮಣರಾವ್ ಒಬ್ಬರೇ ಮರಾಠಿಗರು. ಆಗ ಮರಾಠೀ ಮಂದಿಯನ್ನು ಮರಾಠೀ ಅಂತಲ್ಲ, 'ದಕ್ಷಿಣೀ' ಅಂತ ಕರೆಯಲಾಗುತ್ತಿತ್ತು.

''ಯಾವಾಗ ಬಂದೆ?''

''ಇವತ್ತೇ.''

''ಒಬ್ಬನೇ ಬಂದಿಯೇನು?''

''ಒಬ್ಬನೇ ಇರೋದು ನಾನು.''

ಮಾಸ್ತರರಿಗೆ ಇಬ್ಬರು ಹೆಣ್ಣು ಮಕ್ಕಳು ಎಂದು ಅವರಿಗೆ ತಿಳಿದಿತ್ತು. ಮಾಸ್ತರರ ಮುಖ ನಿಸ್ತೇಜವಾಯಿತು. ತನ್ನಿಂದ ಏನೋ ಅಪರಾಧವಾದಂತೆ ಅವರಿಗೆ ಅನಿಸಿತು. ಹೊಲಿಗೆ ಯಂತ್ರದ ಡ್ರಾವರಿನಿಂದ ಮಾಸ್ತರ್ ನಿಧಾನವಾಗಿ ಒಂದು ಫೋಟೋ ತೆಗೆದರು. ಮಾಸ್ತರರ ತಾರುಣ್ಯದ ಗ್ರೂಪ್‌ಫೋಟೋ. ಮಾಸ್ತರ್ ಕೋಟು ತೊಟ್ಟುಕೊಂಡಿದ್ದರು. ಒಳಗಿನ ಶರ್ಟಿನ ಕಾಲರ್ ಹೊರಬಂದಿತ್ತು. ಜೊತೆಯಲ್ಲಿ ಹೆಂಡತಿ, ಇಬ್ಬರು ಹುಡುಗಿಯರು ಮತ್ತು ಒಂದು ಗಂಡು ಮಗು. ಎಲ್ಲರ ಮುಖದಲ್ಲೂ ಫೋಟೋ ತೆಗೆಯಿಸಿಕೊಳ್ಳುವ ಭಯಾನಕ ಉತ್ಕಟತೆಯಿತ್ತು. ಪುಟ್ಟ ಗಂಡು ಮಗುವಿನ ಮುಖದ ಮೇಲೆ ಮಾತ್ರ ಕುತೂಹಲವಿತ್ತು. ಅವನು ಎಲ್ಲರಿಗಿಂತ ಚಿಕ್ಕವ.

''ಸೂರ್ಯಕಾಂತ್, ನೀನು ಈ ಅಂಗಡಿಯನ್ನು ಮೊದಲು ಕೂಡ ನೋಡಿದವ. ಹೇಗೆ ನಡೆಯುತ್ತಿತ್ತು ಅಂಗಡಿ! ರಾತ್ರಿಯ ಹನ್ನೆರಡು-ಹನ್ನೆರಡು ಗಂಟೆಯವರೆಗೆ ಆರು ಮಂದಿ ಎಡೆಬಿಡದೆ ದುಡಿಯುತ್ತಿದ್ದರು.'' ಮಾಸ್ತರ್ ಆಯಾಸದ ನಿಟ್ಟುಸಿರು ಬಿಟ್ಟರು. ''ಈಗ ಎಲ್ಲ... ಹಾಳಾಯಿತು. ಏನೇನೋ ಮಾಡಿ ಹೊಟ್ಟೆ ಹೊರೆಯುತ್ತಿದ್ದೇನೆ ಅಷ್ಟೇ. ಈಗ ಕೆಲಸ ಕೂಡ ಆಗೋದಿಲ್ಲ. ಕಾಲವೇ ಬದಲಾಯಿತು. ಅಲ್ಲ ಸೂರ್ಯಕಾಂತಾ, ನಾನು ನಿನ್ನನ್ನು ಕೇಳೋದು, ನಾನು ಪಾಪ ಮಾಡಿರಬಹುದು. ನನ್ನ ಹೆಂಡತಿ ಪಾಪ ಮಾಡಿರಬಹುದು. ಆದರೆ ಈ ಮಕ್ಕಳು... ಏನು ಪಾಪ ಮಾಡಿದ್ದುವು? ಅವರು ಈ ದಿನಗಳನ್ನು ಯಾಕೆ ನೋಡಬೇಕಾಯಿತು?'' ಮಾಸ್ತರರ ಕಣ್ಣುಗಳಿಂದ ಕಣ್ಣೀರ ಧಾರೆ ಹರಿಯಿತು.

"ಹುಡುಗಿಯರು ಈಗ ಬೆಳೆದು ನಿಂತಿರಬೇಕಲ್ಲಾ?"

"ಛೇ ಏನು ಮಾತು ಬಿಡು. ಇದು ಮೂರು ವರ್ಷದ ಹಿಂದಿನ ಫೋಟೋ. ಶಾರದಳಿಗೆ ಈಗ ಹನ್ನೆರಡು ವರ್ಷ. ಸಂಧ್ಯಾಗೆ ಹತ್ತು. ಕಳೆದ ವರ್ಷ ಮಗ ತೀರಿಕೊಂಡ. ಶಾಲೆಯಿಂದ ಕುಣಿದಾಡುತ್ತಾ ಬಂದ ಹುಡುಗ ಆರೋಗ್ಯದಿಂದಿದ್ದ. ಎರಡು ದಿನಗಳ ಕಾಲರಾ ಜ್ವರದಲ್ಲಿ ದೇವರು ಅವನನ್ನು ಕೊಂಡುಹೋದ. ಈಗ ಎಲ್ಲ ಮುಗಿಯಿತು. ಹೆಂಡತಿಯ ಆರೋಗ್ಯ ಇತ್ತೀಚೆಗೆ ಚೆನ್ನಾಗಿರೋದೇ ಇಲ್ಲ. ಹುಡುಗಿಯರು ಉದ್ದಕ್ಕೆ ಬೆಳೆಯುತ್ತಿದ್ದಾರೆ. ನಾನು ಕಂಗಾಲಾಗಿದ್ದೇನೆ. ಅವರೆಲ್ಲರನ್ನು ಮುಖಕೊಟ್ಟು ಮಾತಾಡಿಸಲೂ ಧೈರ್ಯವಾಗೋದಿಲ್ಲ."

ಮಾಸ್ತರರಿಂದ ಹೆಚ್ಚು ಮಾತಾಡಲಾಗಲಿಲ್ಲ. ಕುಸಿದು ಕುಳಿತರು. ಅಳುವಾಗಿನ ಅವರ ಮುಖ, ನಗುವಾಗ ಆದಂತೆಯೇ ವಿಸ್ತರಿತವಾಯಿತು. ಆದರೆ ಕಣ್ಣುಗಳಲ್ಲಿ ಧಾರಾಕಾರ ಅಶ್ರು. ಪುರುಷನ ಅಶ್ರು!

ತನ್ನಿಂದೇನೋ ಬಹು ದೊಡ್ಡ ತಪ್ಪು ನಡೆದಂತೆ ಅವರಿಗೆ ಅನಿಸತೊಡಗಿತ್ತು. ಅವರ ನಾಗರಿಕ ಸೌಜನ್ಯದಿಂದಾಗಿ ಮಾಸ್ತರರ ದುಃಖದ ಕಟ್ಟೆ ಒಡೆದಿತ್ತು. ಈ ಮನುಷ್ಯ ದುಃಖದ ಪ್ರಪಾತಕ್ಕೆ ಬೆನ್ನುಕೊಟ್ಟು ನಿಂತಿದ್ದ. ಆದರೆ ಎಷ್ಟು ದಿನ?

ನಿಧಾನವಾಗಿ, ಸಮಾಧಾನದ ಗಂಭೀರ ಸ್ವರದಲ್ಲಿ ಅವರು, "ಮಾಸ್ತರ್, ನೀವು ತುಸು ಧೈರ್ಯಮಾಡಿಕೊಳ್ಳಿರಿ. ದೇವರು ಎಲ್ಲಾ ಕಡೆ ನೋಡುತ್ತಾನೆ. ಒಳ್ಳೆಯವರಿಗೆ ಅವನೆಂದೂ ಕೆಟ್ಟದು ಮಾಡಲಾರ" ಎಂದರು.

"ಇಲ್ಲ. ಅದೆಲ್ಲ ಬರೀ ಸುಳ್ಳು. ನನಗೀಗ ಯಾವ ದೇವರ ಮೇಲೂ ವಿಶ್ವಾಸ ಉಳಿದಿಲ್ಲ. ನಾನು ಎಂದೂ ಯಾವ ಪಾಪವನ್ನೂ ಮಾಡಿಲ್ಲ. ಆದರೂ ಈ ಎಲ್ಲ ದುಃಖ ನನ್ನ ಪಾಲಿಗೇ ಏಕೆ ಬಂತು ಸೂರ್ಯಕಾಂತಾ? ಒಂದು ವೇಳೆ, ನಾನೇನಾದರೂ ತಪ್ಪು ಮಾಡಿದ್ದರೂ ಇರಬಹುದು. ಆದರೆ ಈ ಪುಟ್ಟ ಮಕ್ಕಳೇನು ತಪ್ಪ ಮಾಡಿವೆ? ಅವುಗಳಿಗೇಕೆ ಈ ಶಿಕ್ಷೆ? ನೀನು ಹೇಳು. ನೀನು ತುಂಬ ಓದಿದವ, ಕಲಿತವ ಹೇಳು... ನೀನು ಹೇಳಲ್ಲಾ..."

ಇದ್ದಕ್ಕಿದ್ದಂತೆ ಮಾಸ್ತರ್ ಗದಗುಟ್ಟಿ ನಡುಗ ಲಾರಂಭಿಸಿದರು. ಅವರಿಗೇನಾದರೂ ಹುಚ್ಚ ಹಿಡಿದಿರಬಹುದೇ?

ಸಮಾಧಾನದಿಂದ, ಶಾಂತವಾಗಿ ನಾಲ್ಕು ಸಾಂತ್ವನದ ಮಾತು ಆಡಿ, ಹೆಚ್ಚು ಕಡಿಮೆ ಅವರು ಅಲ್ಲಿಂದ ಓಡಿದಂತೆಯೇ ಹೊರಟರು. ಮ ಮನೆಯ ಕಡೆಗೆ. ನವಾಬರ ರಾಜ್ಯ ಹೋಯಿತು ಲೋಕರಾಜ್ಯ ಬಂತು. ಆದರೆ ಏನಾಯಿತು ಈ ಸ್ವತಂತ್ರ ಪ್ರಜಾಪ್ರಭುತ್ವದಲ್ಲಿ!

ದೇವರ ಪೂಜೆ ಮಾಡುವ, ಭಕ್ತಿ ಮಾಡುವ ಪಾಪಭೀರು ಮತ್ತು ಅಚಲ ಶ್ರದ್ಧೆಯ ಸಾಧಾ ಸರಳ, ಬಡವ, ದುಡಿದು ತುತ್ತು ಗಳಿಸುವ ಈ ಮಾಸ್ತರನ ಹೃದಯದೊಳಗಿಂದ ದೇವರ ಅಸ್ತಿತ್ವವೇ ಕುಸಿದುಹೋಯಿತು. ಅದು ಕೂ ಆದುದು ಯಾವಾಗ, ವೃದ್ಧಾಪ್ಯದಲ್ಲಿ, ಆಯು ಷ್ಯದ ಕೊನೆಯಲ್ಲಿ. ಇದಕ್ಕಿಂತ ಕ್ರೂರ ಕಠಿಣವಾದ ಒಂದು ಉಡುಗೊರೆ ಪ್ರಜಾ ಪ್ರಭುತ್ವದಿಂದ ದೊರಕುವುದು ಸಾಧ್ಯವಿದೆಯೇ

ಹಳೆಯ ಪ್ರೀತಿ ಮತ್ತು ಹಳೆಯ ಹಾಸ್ಯ ಹುಡುಕಾಟ ತೊರೆದು ಅವರು, ಹೊಸ ಹೊ ವಿಚಾರಗಳಲ್ಲಿ ತನ್ಮಯರಾಗುತ್ತಾ ಮನೆಯ ದಾರಿಯಲ್ಲಿ ಸಾಗಿದರು.

-ವೆಲ್, ಲೇಡೀಜ್ ಎಂಡ್ ಜಂಟಲ್‌ಮೆನ್ ಬೈಬಲಿನ ಓಲ್ಡ್ ಟೆಸ್ಟಾಮೆಂಟಿನಲ್ಲಿ ಒಂದು ಪಾತ್ರವಿದೆ. ಅದರ ಹೆಸರು ಜಾಬ್. ಜಾಬ ಬಹಳ ಒಳ್ಳೆಯವ, ಸರಳ ಹಾಗೂ ಕುಲೀನ ಸಜ್ಜನ. ಆದರೆ ಪ್ರಭು ಅವನ ಮೇಲೆ ಸಂಕಟಗ ಪರ್ವತವನ್ನೇ ಇರಿಸಿದ್ದನು. ಅವನ ಮಕ್ಕಳನ್ನ ಕೊಂದನು. ಸಂಪತ್ತನ್ನು ನಾಶಗೊಳಿಸಿದನು

ಅವನನ್ನು ಹಿಂಡಿ ಹಿಪ್ಪೆ ಮಾಡಿದನು. ಜಾಬ್ ಒಂದು ದಿನ ವಿಚಾರಿಸಿದ, 'ಹೇ ಪ್ರಭೂ, ನನ್ನಂತಹ ನಿರ್ದೋಷಿಯನ್ನು ಈ ದುಃಖದ ಕಡಲಿಗೆ ಏಕೆ ದೂಡಿದೆ? ನಾನು ಪರಿಪೂರ್ಣನಲ್ಲದಿರಬಹುದು. ಆದರೆ ಈ ಅಪಾರ ದುಃಖವನ್ನು ಅನುಭವಿಸಬೇಕಾದಂತಹ ಘೋರ ಪಾಪ ನಾನೇನು ಮಾಡಿದ್ದೇನೆ ಪ್ರಭೂ?'

ಗೆಳೆಯರು ಬಂದರು. ಎಲಿಫಾಜ್, ಬಿಲ್ದಾದ್ ಮತ್ತು ಜಾಫರ್. 'ನೀನು ಏನಾದರೂ ಪಾಪ ಮಾಡಿರೋದು ಖಂಡಿತ. ನೀನು ನಿನ್ನ ದುಷ್ಟತನ ಬಿಡಲೇಬೇಕು.' ಎಂದು ಉಪದೇಶಿಸಿದರು.

ಕೆಟ್ಟ ಮಂದಿಗೇ ದೇವರು ಸಹಾಯ ಮಾಡುತ್ತಾನೆ. ಅವರಿಗೇ ವರ ಕೊಡುತ್ತಾನೆ. ಸುಖ ಕೊಡುತ್ತಾನೆ. ಸಕಲ ಸಂಪತ್ತನ್ನು ಕೊಡುತ್ತಾನೆ. ಅವರಿಗೆ ಎಂದೂ ಶಿಕ್ಷೆ ಆಗಲಿಕ್ಕೇ ಇಲ್ಲವೇನು? ಎಂದಿದ್ದರು ಮಾಸ್ತರ್.

ಅನ್ಯಾಯ. ಇದು ಜಗತ್ತಿನ ಎಲ್ಲಕ್ಕಿಂತ ದೊಡ್ಡ ಮಹದಾಶ್ಚರ್ಯವಾಗಿದೆ. ಜಾಬ್‌ನ ರೂಪದಲ್ಲಿ ಕಳೆದ ಎರಡು ಸಾವಿರ ವರ್ಷಗಳಿಂದ ಮನುಷ್ಯ ಈ ಪ್ರಶ್ನೆಯನ್ನು ದೇವರಿಗೆ ಕೇಳುತ್ತಲೇ ಬಂದಿದ್ದಾನೆ.

ಜಾಬ್‌ನ ಪ್ರಶ್ನೆಗಳಿಗೆ ದೇವರು ಇಂದಿನ ತನಕವೂ ಉತ್ತರ ಕೊಟ್ಟಿಲ್ಲ.

ಜಾಬ್ ವಿದ್ರೋಹಿಯಾಗಲಿಲ್ಲ. ಏಕೆಂದರೆ ಜಾಬ್ ಅತ್ಯಂತ ಉತ್ತಮ ಮತ್ತು ಚಾರಿತ್ರ್ಯ ಸಂಪನ್ನ ಮನುಷ್ಯನಾಗಿದ್ದಾನೆ.

ಅವರು ಮನೆಗೆ ಹಿಂತಿರುಗಿ ಬಂದರು.

ಬರೇ ಮೂರು ವರ್ಷಗಳಲ್ಲಿ ಮಾಸ್ತರ್ ತೀರಾ ಮುದುಕನಾಗಿಬಿಟ್ಟದ್ದಾರೆ. ನಿರಾಶೆಯ ವಾರ್ಧಕ್ಯ ಮತ್ತು ಅಂಧಃಕಾರದ ನೇತಿಹಾಸ...



ಇನ್ನು ಬೇರೆ ಯಾರನ್ನಾದರೂ ಭೇಟಿಯಾಗಬೇಕು ಅನಿಸಲಿಲ್ಲ. ಹಳೆಯ ಮಂದಿ ಭೇಟಿಯಾದರೆ ಸಿಗುವುದು ಒಂದೇ ಸುದ್ದಿ- ಸಾವಿನದು. ಹೊಸಬರಿಗೆ ಇವರ ಗುರುತು ಇರಲಿಲ್ಲ. ಇಡೀ ಊರಿಗೇ ಒಂದು ಹೊಸ ಆಕಾರ ಬಂದಿತ್ತು. ಕಿಲ್ಲೆಯ ಗೋಡೆ ಮತ್ತು ಬಾಗಿಲನ್ನು ಕೆಡವಲಾಗಿತ್ತು. ರೈಲ್ವೇ ಸ್ಟೇಶನಿನಲ್ಲಿ ಓವರ್‌ಬ್ರಿಜ್ ಮತ್ತು ಗೂಡ್ಸ್ ರೈಲುಗಳಿಗೆ ಪ್ರತ್ಯೇಕ ಹಳಿ ಹಾಕಲಾಗಿತ್ತು. ಶಾಲೆಗೆ ಫೋನು ಬಂದಿತ್ತು. ಸ್ಟೇಶನ್ ರೋಡಿನಲ್ಲಿ ಸಿಂಧಿಗಳ ತರತರದ ಅಂಗಡಿಗಳಿದ್ದುವು. ನಿರ್ವಾಸಿತ ಸಿಂಧಿಗಳ ಒಂದು ಪೀಳಿಗೆ ಮುದಿಯಾಗಿತ್ತು. ರೈಲ್ವೇ ಕಾಲನಿಯ ರಾಜಸ್ಥಾನೀ ಕರ್ಮಚಾರಿಗಳು ತುಸು ದಪ್ಪವಾಗಿದ್ದರು. ಮಿಲಿಟರೀ ಕ್ಯಾಂಪಿನ ಕಾವಲುಗಾರ, ಕೀರ್ತಿ ಸ್ಥಂಭದ ಪಕ್ಕದ ಬಿಸಿಲು ಹರಡಿದ್ದ ಕೈದೋಟದಲ್ಲಿ ಅಡ್ಡಾಡುತ್ತಿದ್ದ. ಊರಲ್ಲೀಗ ಬ್ಯಾಂಕುಗಳು ಮತ್ತು ವೇಶ್ಯೆಯರದೂ ಆಗಮನವಾಗಿತ್ತು. ಊರು ಒಂದು ನಗರವಾಗುವ ಸಿದ್ಧತೆಯಲ್ಲಿತ್ತು.

ಸಾಯಂಕಾಲದ ಮೈಲ್. ಹಿಂದೆ ಐದೂವರೆಗೆ ಬರುತ್ತಿದ್ದ ಮೈಲ್ ,ಈಗ ಎಂಟೂವರೆಗೆ ಬರುತ್ತಿದೆ.

ರೈಲು ಮುಂದುವರಿಯಿತು. ದೂರದಿಂದ ಕೀರ್ತಿ ಸ್ಥಂಭದ ತುದಿ ಕಾಣುತ್ತಿತ್ತು. ಮೊದಲ ಗುಮ್ಮಟ, ಎಕ್ಸ್ಚೈಜ್ ಆಫೀಸು, ನವಾಬರ ಅರಮನೆಯ ಶಿಥಿಲ ಬಾಗಿಲುಗಳು, ಸಿಗ್ನಲ್, ಎರಡನೆಯ ಗುಮ್ಮಟ, ಫುಟ್‌ಬಾಲ್ ಆಟದ ಮೈದಾನ, ಮಹಸಾಣದ ಕಡೆ ಹೋಗುವ ರಸ್ತೆ, ತೊಗರಿ ಬೇಳೆಯ ಹೊಲವನ್ನು ಆವರಿಸುತ್ತಿದ್ದ ಇರುಳಿನ ಕಾಡಿಗೆ, ಪಿತೃಭೂಮಿಯ ಆಕಾಶದಲ್ಲಿ ಬಾಡಿದ ಹೂಗಳ ಮಾಲೆಯಂತೆ ತೂಗುವ ಮಸುಕಾದ ಆಕಾಶಗಂಗೆ, ಅಂಧಕಾರದ ಪಟಲದಲ್ಲಿ ವಿಲೀನವಾಗುತ್ತಿರುವ ನೇತಿಹಾಸ...!





ವಾಸುದೇವ ನಾಡಿಗ್

# ಚಿದೂ






ಇಡೀ ಪರಿಸ್ಥಿತಿಯೇ ಇವನನ್ನು ಹೀಗಾಡಿಸುತ್ತೋ
ಅಥವಾ ಇಂತಹ ಪರಿಸ್ಥಿತೀನ ಇವನೇ ಕ್ರಿಯೇಟ್
ಮಾಡಿಕೊಳ್ತಾನೋ ಎಂದು ಕೈ ಕೈ ಹಿಸುಕಿಕೊಂಡೆ. ಇವನ
ಪತ್ರ ಬಂದಾಗಿನಿಂದ ತಲೆ ಗಿರ್ ಎನ್ನುವುದು ನಿಂತಿಲ್ಲ. ನನ
ಮಾಮೂಲೀ ಸ್ಟೈಲ್‌ನಲ್ಲಿಯೇ, ''...ಲೇ... ಮಗನೇ,...
ತಗೊಂಡು ಹೊಡೀತೀನಿ! ಪ್ರೀತಿ ಪ್ರೇಮ ಅಂತ ಯಾ
ನೀನೂ ಸತ್ತು ಇನ್ನೊಬ್ಬನ್ನೂ ಸಾಯಿಸ್ತಿಯೋ... ಹಾಗೇ
ಹೀಗೆ'' ಅಂತ ಬರೆಯುತ್ತಾ, ''ಬೇಗ ಬಾ, ನಾಲ್ಕಾರು ದಿನ
ಇಲ್ಲಿದ್ದು ಹೋದರೆ, ಮತ್ತೆ ಮನುಷ್ಯನಾಗುತ್ತಿ'' ಅಂತ ಕೊನೆ
ಎಳೆದು, ಪತ್ರವನ್ನು ಡಬ್ಬಿಗೆ ಇರುಕಿ ಬಂದು ಕೂತೆ. ಅವನ
ಬರುವಿಕೆಗೆ ಕಾದು ಕೂಡುವ ಸರದಿ ಈಗ. ಅವನನ್ನು ಹೇ
ಒಳಗು ಮಾಡಿಕೊಳ್ಳಬೇಕು ಎಂಬ ಭಾರೀ ಯೋಜನೆ
ಕುಳಿತೆ. ಏಕೆಂದರೆ ಇವನು ನನ್ನ ಪಾಲಿಗೆ ಸಾಮಾನ್ಯನಲ್ಲ
ಭಾರೀ ಮನುಷ್ಯನೇ! ಇವಳು, ಅಂದ್ರೆ ನನ್ನಾಕೆಗೂ

ತುಂಬಾ ಅಚ್ಚುಕಟ್ಟಾಗಿಯೇ, ಸಮಯ ಸಿಕ್ಕಾಗಲೆಲ್ಲಾ ಅವನ ಬಗ್ಗೆ ಪರಿಚಯಿಸುತ್ತಲೇ ಇದ್ದೆ. ಎಷ್ಟೋ ಬಾರಿ ಇವಳು ತನ್ನ ಹುಬ್ಬೇರಿಸಿ ಕತೆ ಕೇಳಿದ್ದಿದೆ. ''ಒಮ್ಮೆ ನಿಮ್ಮ ಗೆಳೆಯನನ್ನ ಇಲ್ಲಿಗೆ ಕರೆಸ್ರಿ'' ಎಂದು ರಾಗ ಎಳೆವ ಮಟ್ಟಕ್ಕೆ ತಲುಪಿದ್ದಾಳೆ. ಆದರೆ ಈ ಕರೆಸುವ ದಿನ, ಹೀಗೆ ಧುತ್ತೆಂದು ಬೇಗ ಎದುರು ಬಂದು ನಿಲ್ಲುತ್ತದೆಂದು ಬಲ್ಲವರಾರು?



ಈ ಇವನು ಎಂಬ ಚಿದಾನಂದನ ಕತೆಯೇ ಹೀಗೆ. ಜಗತ್ತಿನ ಎಲ್ಲರ ನೋವಿಗೆ ತನ್ನಲ್ಲಿ ಸಾಂತ್ವನ-ಸಲಹೆ-ಸಹಾನುಭೂತಿ ದೊರಕುತ್ತದೆ ಎಂದು ಬೋರ್ಡ್ ಹಾಕಿಕೊಂಡು ಕೂತವನು. ಇನ್ನೊಬ್ಬರ ದುಃಖವನ್ನ ತನ್ನದನ್ನಾಗಿ ಮಾಡಿಕೊಂಡು ಜೀಗುಡುವ ಜಾತಿಯವನು. ತರಕಾರಿ ತರಲೆಂದು ಹೋದಾಗ, ತರಕಾರಿಯವಳ ಬಾಯಿಂದ ಅವಳ ಕತೆಯನ್ನೆ ಹೊರಡಿಸಿ, ಕೇಳಿ, ಕೊನೆಗೆ ಲೊಚಗುಟ್ಟಿ, ಅದೇನನ್ನೋ ವಿಶ್ಲೇಷಿಸಿ, ಒಂದಕ್ಕೆ ಎರಡು ಪಟ್ಟು ದುಡ್ಡು ಕೊಟ್ಟು ಬಂದು, ಅವಳ ಸಮಸ್ಯೆಯನ್ನು ಬಗೆಹರಿಸಿದೆ ಎಂದು ನಿಟ್ಟುಸಿರಿಟ್ಟು ಬೀಗುವವನು. ಹೀಗೆ ಇನ್ನೆಷ್ಟೋ. ಈ ಚಿದಾನಂದ ಯಾಕೆ ಹೀಗೆ ಆಡ್ತಾನೆ ಅನ್ನಿಸ್ತದೆ.

ಹೊಸದಾಗಿ ಯಾರನ್ನೇ ಸಂಪರ್ಕಿಸಿದರೂ, ಕ್ಷಣ ಮಾತುಗಾರಿಕೆಯಲ್ಲಿ ಎದುರಿನವನ ಸಾರಿ ಒಳತೋಟಿಗಳನ್ನು ಬಿಡಿಸಿಕೊಂಡು ಗ್ರಹಿಸಿ, ಕೊನೆಗೆ, ''ಎಂಥ ಒಳ್ಳೆ ಮನುಷ್ಯಾರಿ, ಎಷ್ಟು ಚೆನ್ನಾಗಿ ಮಾತಾಡ್ತಾನೆ...'' ಎಂಬ ಹೊಗಳಿಕೆಗೆ ಪಾತ್ರನಾಗಿಬಿಡುತ್ತಾನೆ. ದುರಂತವೋ ಅಥವಾ ತಮಾಷೆಯೋ, ಎಲ್ಲರಿಗೂ ಸಾಂತ್ವನ, ಸಮಾಧಾನ ಹೇಳುತ್ತ, ಯಾವ ಯಾವುದೋ ರೂಪದಲ್ಲಿ ಸ್ಪಂದಿಸುತ್ತ, 'ಧನ್ಯನಾದೆ' ಎಂದೇ ಪುಳಕಿತನಾಗುವ ಚಿದಾನಂದನೇ, ಸ್ವತಃ ಇಂದು ಇಂಥ ಬಿಕ್ಕಟ್ಟನ್ನು ಎದುರಿಸಬೇಕಾದದ್ದು ಸೋಜಿಗವೇ. ಹಾಗೆ ನೋಡಿದರೆ ಅವನಂಥವನಿಗೆ ಇಂತಹ ಪರಿಸ್ಥಿತಿ ಹೊಸದಲ್ಲ. ಎದುರಿನ ಹುಡುಗಿಯೊಂದು ಸುಮ್ಮನೆ ಹೀಗೆ ನೋಡಿ ಕಿಸಕ್ಕನೆ ನಕ್ಕರೂ ಕೂಡಾ 'ಓಹೋ ಏನೋ ಪ್ರೇಮವಿದೆ' ಎಂದು ನಂಬುವ ಪುಣ್ಯಾತ್ಮನಿವನು. ಅದೇ ಕತೆ, ಅದೇ ಆಘಾತ, ರೂಪ ಮಾತ್ರ ಬೇರೆಯಷ್ಟೇ.

ವಯಸ್ಸು ಮೂವತ್ತರಲ್ಲಿ, ಕೆಲಸಕ್ಕೆ ಬಾರದ ಸಮಾಜ ಸಿದ್ಧಾಂತ ಎಂಬ ಡಿಗ್ರಿ ಪಡೆದುಕೊಂಡು, ಇದ್ದ ಹಳ್ಳಿಮನೆಯ ಬಳಿಯೇ ಕಾಲೇಜಿನಲ್ಲಿ ಲೆಕ್ಚರರ್ ಆಗಬೇಕೆಂಬ ಕನಸನ್ನು ಕಂಡು, ನಾನೂರು ರೂಪಾಯಿ ಸಂಬಳಕ್ಕೆ ಅದೂ ಆಗಿ, ಸೊಗಸಾದ ಆರೆಂಟು ಎಕರೆ ಜಮೀನನ್ನು ಮತ್ತೊಬ್ಬರ ಕೈಗೆ ಗುತ್ತಿಗೆ ಕೊಟ್ಟು, ಈ ಕಡೆ ರೈತನಾಗದೆ, ಆ ಕಡೆ ಲೆಕ್ಚರರಾಗದೇ, ಸೆಮಿನಾರು, ಸಮಾಜ, ಕ್ರಾಂತಿ, ಭಾಷಣ ಬರಹ ಅಂತ

ಅಲೆದಂತಹವನು. ತಂಗಿಗೆ ವರ ಹುಡುಕುವ ಭರಾಟೆಯಲ್ಲಿ, ತಾನೇ ತನ್ನ ತಂಗಿಯಾಗಿ ಕುಳಿತು, ಬರುವ ವರಗಳನ್ನೆಲ್ಲ ತನ್ನ ಮೂಗಿನ ನೇರಕ್ಕೇ ವಿಶ್ಲೇಷಿಸುತ್ತ, ತಿರಸ್ಕರಿಸುತ್ತ, ಇದ್ದ ಅಮ್ಮನ ಡಯಾಬಿಟೀಸ್ ಸಿಟ್ಟಿಗೆ ಬಲಿಯಾಗುತ್ತ ಹೊರಟವನು. 'ಲೇ ಕತ್ತೆ, ಜಮೀನು ಮಾಡೋ, ಯಾಕೋ ಉಪನ್ಯಾಸ-ಸೆಮಿನಾರು ಅಂತ ಹಳವಂಡ ಕಾಣ್ತೆ' ಎಂದು ತುಂಬಾ ಆಗಿ ಬೈದಿದ್ದೆ.



ಪತ್ರ ತಲುಪಿರಬೇಕು. ಚಿದಾನಂದ ಬಾಗಿಲಲ್ಲಿ ಬಂದು ನಿಂತುಬಿಟ್ಟಿದ್ದ! ಈಕೆ ಮೊದಲ ಬಾರಿ ನೋಡುತ್ತಿರುವುದರಿಂದ, 'ವಿಚಿತ್ರ ಪ್ರಾಣಿ'ಯನ್ನು ನೋಡುತ್ತಿರುವಂತೆ ನೋಡಿ, ಬಲಭಾಗದ ಗಲ್ಲವನ್ನಷ್ಟೇ ಸಡಿಲಿಸಿ ನಕ್ಕಳು. ಚಿದಾನಂದನೂ ಅಷ್ಟಾಗಿ ಮುಖ ಕೊಡದೇ, 'ನಮಸ್ತೆ' ಎಂದ. ಕೈ ಹಿಡಿದು ಎಳೆದುಕೊಂಡೇ ಬಂದು ಕುರ್ಚಿಯಲ್ಲಿ ಕೂರಿಸಿದೆ. ''ಹೇಗಿದ್ದೀಯೋ ಚಿದೂ! ಪತ್ರ ತಲುಪ್ತಾ? ಏನ್ ಕತೆ ಮಾರಾಯ ನಿಂದೂ...'' ಅಂತ ಕೇಳುತ್ತಲೇ ನೋಡಿದೆ. ರೆಪ್ಪೆ ಈಚೆ ನೀರು ತುಳುಕಲು ಕೂತಂಥ ಅವನ ಕಣ್ಣು. ''ದಿನೂ ಬಾತ್‌ರೂಂ ತೋರಿಸೋ...'' ಎಂದು ನನ್ನನ್ನು ಎಳೆದು ಕೊಂಡು ಹೊರಟ. ಅಲ್ಲಿ ಖಾಲಿ ಬಕೆಟ್‌ನಲ್ಲಿ ನಲ್ಲಿ ನೀರನ್ನು ಜೋರಾಗಿ ಸುರಿಸುತ್ತಲೇ, ನನ್ನನ್ನೂ ಒಳಗೊಂಡಂತೆ, ಬಾತ್‌ರೂಂ ಬಾಗಿಲನ್ನು ಹಾಕಿಕೊಂಡು, ಪುಟ್ಟ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟ. ನೀರು ಸುರಿವ ಶಬ್ದದಲ್ಲಿ ಹೊರಗೆ ಈಕೆಗೆ ಏನೊಂದೂ ಕೇಳಿಸಿರಲಿಕ್ಕಿಲ್ಲ! ಅಳುವನ್ನು ಕಣ್ಣು ಮುಚ್ಚಿಕೊಂಡಿತು. ಮೂಗು? ಸೊರಸೊರ ಎನ್ನುತ್ತಲೇ ಮತ್ತೆ ಕುರ್ಚೀಲಿ ಬಂದು ಕೂತ.



ರಾತ್ರಿ, ಚಿದೂ ಬಂದಿಳಿದ ಇಡೀ ರಾತ್ರಿ ನಿದ್ದೆ ಇಲ್ಲ. ಈಕೆ ಮಗ್ಗುಲಲ್ಲಿ ಏನೇನೋ ಹೇಳ್ತಿದ್ದಳು. ''ರೀ ನೋಡ್ರಿ, ನಿಮ್ಮ ಫ್ರೆಂಡು ಮೊದಲೇ ತುಂಬಾ ಸೆಂಟಿಮೆಂಟಲ್, ಈ ವಠಾರದ ಯಾರನ್ನೂ ಹೊಸದಾಗಿ ಪರಿಚಯ ಮಾಡಿಕೊಡಬೇಡಿ. ಮತ್ತೆ ಯಾರನ್ನೋ ಹಚ್ಚಿಕೊಂಡು ಒದ್ದಾಡೋದು ಬೇಡ. ಮೊದಲೇ ದುಃಖದಲ್ಲಿದ್ದಾರೆ...'' ಅಂತ ನನ್ನ ಗೆಳೆಯನನ್ನ ನನಗಿಂತಲೂ ತುಂಬಾ ಕರಾರುವಾಕ್ಕಾಗಿ ಅರ್ಥಮಾಡಿಕೊಂಡಂತೆ ಮಾತಾಡಿದ್ದಳು. ನಿಜ, ಯಾರಾದರೂ ಒಂದಿಷ್ಟು ಪ್ರೀತಿ ತೋರಿ ಮಾತಾಡಿದರೇ ಸಾಕು, ಅದು ಜನ್ಮಜನ್ಮದ ಅನುಬಂಧವೆಂದೇ ನಂಬಿ ಒಳಹೋಗುವ ಪ್ರಾಣಿ ಇದು. ಈಗೇನೋ ಚಿದಾನಂದ ಹಾಜರಾಗಿಬಿಟ್ಟಿದ್ದಾನೆ. ಆದರೆ ಈ ಹಿಂದೆ ಅವನಲ್ಲಿ ನಡೆದ ಘಟನೆ ಮತ್ತೆ ಮತ್ತೆ ನನ್ನನ್ನು ಕಾಡಿಸುತ್ತದೆ. ''ಎಂಥ ಕೆಲಸ ಮಾಡಿಕೊಂಡೆಯೋ, ದರಿದ್ರದವನೇ...'' ಎಂದು ಈ ರಾತ್ರಿಯಲ್ಲೇ ಅವನನ್ನು ಎಬ್ಬಿಸಿ, ತದಕಿಬರಲೇ ಎನ್ನಿಸಿತು. ಅದಾವುದೋ Social workshopನಲ್ಲಿ ಸಿಕ್ಕ ಮಾಧವಿಯ ಬಗ್ಗೆ ಒಂದು ವರ್ಷದಿಂದ ಪತ್ರದ ಮೂಲಕ ಕೊರೆಯುತ್ತಲೇ ಇದ್ದ. ''ಇಲ್ಲೇ ಪಕ್ಕದ ಹಳ್ಳಿಯವಳು ಕಣೋ, ತುಂಬಾ ಹಚ್ಚಿಕೊಂಡುಬಿಟ್ಟಿದ್ದೇವೆ, ಹಾಗೇ ಹೀಗೇ, ಮದುವೆಯಾಗಲೂ ಕೂಡಾ ನಿರ್ಧರಿಸಿದ್ದೇವೆ ಎಂದೆಲ್ಲ ಮಾತುಗಳನ್ನು ಬರೆದಿದ್ದ. ನಾನು ಬರೆದಿದ್ದೆ. ಈ ಹಿಂದಿನ ರೀತಿ ಹೆದರಬೇಡ, ಪ್ರೀತೀನ ಉಳಿಸಿಕೋ, ಮತ್ತೆ ನಿನಗೆ ಮೋಸ ಮಾಡಿಕೋಬೇಡ ಎಂದೆಲ್ಲ ತುಂಬಾ philosophical ಆಗಿ ಬರೆದಿದ್ದೆ. ಆದದ್ದಾದರೂ ಏನು? ಪುಕ್ಕಲುತನದವು ಪ್ರೀತಿ, ಪ್ರೇಮ ಅಂತ ಧಾವಿಸಿದರೆ ಆಗಬಹುದಾದ ಅನಾಹುತ ಆಗಿಹೋಗಿತ್ತು. ಇವನೂ ಪೆಕರ! ಒಂದಿಷ್ಟು ಹೆಚ್ಚಾಗಿಯೇ ವಾಸ್ತವವನ್ನು ಭಾವುಕ ನೆಲೆಯಲ್ಲಿ ವಿಶ್ಲೇಷಿಸಿರಬೇಕು. 'ಎರಡೂ ಮನೆಯವರೂ ಒಪ್ಪುತ್ತಿಲ್ಲ ಕಣೋ' ಎಂದು ಈ ಮೊದಲು ಬರೆದ ಪತ್ರದಿಂದಲೇ ಅರ್ಥವಾಗಿತ್ತು

ನನಗೆ. ಇದರ ನಂತರ ಬಂದ ಪತ್ರವೇ ಮಾಧವಿಯ ಆತ್ಮಹತ್ಯೆಯದು. "ಲೋ ದಿನೂ, ನನ್ನ ಮಾಧವಿ ನೇಣಿಗೆ ಶರಣಾಗಿಬಿಟ್ಟಳು ಕಣೋ" ಎಂದು ಕಾವ್ಯಾತ್ಮಕವಾಗಿ ಬರೆದು ಕೊಂಡಿದ್ದಾನೆ. ಅವಳ ಆತ್ಮ ಅಲ್ಲೇ ಸುಳಿದಾಡುತ್ತಿರುವ, ಅವಳ ಗೋರಿಯ ಮೇಲೆ ಗುಲಾಬಿ ಚಿಗುರುವ, ಅಮರತ್ವದ ಅನು ಭಾವ...ದ ಬಗ್ಗೆ, ಹೀಗೆಲ್ಲಾ ಅಳುತ್ತಲೇ ಬರೆದು ಕೊಂಡಿದ್ದ. ಏನಾದರೂ ಅನಾಹುತ ಮಾಡಿ ಕೊಂಡಾನು ಪೆದ್ದ ಎಂದು, ಇಲ್ಲಿಗೆ ಕರೆಸಿಕೊಳ್ಳುವ ನಿರ್ಧಾರ ಮಾಡಿದ್ದೆ.



ಮಗಳು, ಹೀಗೊಬ್ಬ ಹುಡುಗನನ್ನು ಪ್ರೀತಿಸುವ ವಿಷಯ ಕೇಳಿಯೇ, 'ತಲೆ ಎತ್ತಿ ಹೇಗೆ ನಡೆಯಲಿ? ಎಂಬ ರೋಗಕ್ಕೆ ಬಲಿಯಾಗಿ ಅಪ್ಪ ಹಾಸಿಗೆ ಹಿಡಿದಿದ್ದನಂತೆ! ನೀನೇನಾದರೂ ನಮ್ಮ ಮಾತು ಕೇಳದಿದ್ದರೆ, ನಾನು ವಿಷ ಕುಡಿದು ಸಾಯ್ತೀನಿ ಎಂದು ಅಮ್ಮ ನಿರ್ಧರಿಸಿದ್ದಳಂತೆ, ತಂಗಿ ಮಾಡಬಾರದ ಅಪರಾಧ ಮಾಡಿದ್ದಾಳೆ ಎಂದೇ ನಂಬಿ, ಅಣ್ಣ ಎದುರಿಸಲಾರದೆ ನಾಪತ್ತೆ ಯಾಗಿದ್ದನಂತೆ. ಇಂಥವೇ ಎಲ್ಲ ಮಾಮೂಲಾಗಿ ನಡೆದ ಪ್ರೇಮ ರಾದ್ಧಾಂತಗಳೆದುರು, ಈ ಇವನು, ಚಿದಾನಂದ, ಅಧೀರನಾಗಿ, "ಹೋಗ್ಲಿ ಬಿಡು ಮಾಧು, ನಮ್ಮಿಬ್ಬರ ಸುಖ-ಸ್ವಾರ್ಥಕ್ಕಾಗಿ ಇಷ್ಟೊಂದು ಮನಸ್ಸುಗಳಿಗೆ ನೋವು-ದುಃಖವೇಕೆ ಕೊಡಬೇಕು" ಅಂತ ಸಂತನ ಸ್ಟೈಲ್‌ನಲ್ಲಿ ಮಾಧವಿಗೆ ಸಮಾಧಾನ ಮಾಡಿದ್ದನಂತೆ. ಈ ಸಂತನ ಮಾತನ್ನು ಸಹಿಸದ ಅವಳು ಆತ್ಮಹತ್ಯೆ ಮಾಡಿಕೊಂಡಳಂತೆ. ಇದು ನಡೆದ ಕತೆ. ಚಿದಾನಂದನ ಮಾತು, ನಿರ್ಧಾರಗಳನ್ನು ಕೇಳಿ ನಗಲೋ ಅಳಲೋ ಎನ್ನಿಸಿತು. ಜಗತ್ತಿನ ಎಲ್ಲ ಪ್ರೇಮ ಪ್ರಸಂಗದ ಧಾಟಿಯೇ ಇದು ಕಣಯ್ಯ! ಪಾಪ ನಿನ್ನನ್ನೇ ನಂಬಿ, ಹೊರಟುಬರಲು ಸಿದ್ಧವಿದ್ದ ಹುಡುಗಿಗೆ ಎಂಥ ಪಾತ ಮಾಡಿದೆ ಮಾರಾಯ! ಎಂದೆ. ಒಳಗೇ ತುಂಬಾ ಸಂಕಟವಾಯಿತು. "ಚಿದೂ, ಏ ಚಿದೂ, ಇಲ್ಲಿ ನೋಡು, ನೀನು ನಿಜವಾಗಿಯೂ ಈಗಲೂ ಮಾಧವಿಯನ್ನು ಪ್ರೀತಿಸ್ತಿ ತಾನೆ? ಒಂದು ಕೆಲಸ ಮಾಡು. ಗುತ್ತಿಗೆ ಕೊಟ್ಟ ಜಮೀನನ್ನು ಬಿಡಿಸಿಕೋ, ಬೇಸಾಯ ಮಾಡು, ಬೆಳೆ, ಭುವಿಯನ್ನು ಪ್ರೀತಿಸು, ಹಸಿರು, ಹೂ, ಪ್ರೀತಿ, ಪ್ರೇಮ, ಬದುಕು, ಭಾವ ಎಲ್ಲ ಅರ್ಥವಾಗುತ್ತೆ" ಎಂದು ಎದ್ದೆ.



ಚಿದಾನಂದ ಬಂದು ಹತ್ತು ದಿನಗಳಾಗಿವೆ. "ಕ್ಷೇಮ,. ಇಷ್ಟರಲ್ಲೇ ಬರುತ್ತೇನೆ" ಅಂತ ಊರಿಗೂ ಕಾಗದ ಬರೆದಿದ್ದಾನೆ. ಜೊತೆಗೆ ತುಂಬಾ ಬದಲಾಗಿದ್ದಾನೆ. ಪಕ್ಕಾ ಹಳ್ಳಿ ಭಾಷೆಯಲ್ಲಿ, 'ಅತ್ತೆಮ್ಮ' ಅಂತ ಕೂಗಿ ಕರೆಯುತ್ತ,





ಇವಳ ಹಿಂದು ಹಿಂದೇ ಸುತ್ತುತ್ತಾ, ಇವಳ ಕೋಪಕ್ಕೂ ತುತ್ತಾಗುವಷ್ಟು ಸಲಿಗೆಯಿಂದ ಬೆಳೆದಿದ್ದಾನೆ. ನನ್ನ ಫ್ಯಾಕ್ಟರಿಯ ಶಿಫ್ಟ್ ಡ್ಯೂಟ ಟೈಂಟೇಬಲ್‌ಗೆ ತಕ್ಕಂತೆ ತನ್ನ ಟೈಂನ್ನು ನಿರ್ಧರಿಸಿಕೊಂಡಿದ್ದಾನೆ. ನನಗೆ ಮತ್ತೆ ಒಳಗೊಳಗೇ ಹೆದರಿಕೆ, ಎಲ್ಲಿ ಈ ನಮ್ಮ ಮಹಾನುಭಾವ, 'ಈಕೆ'ಯ ವೈಯಕ್ತಿಕ ಜೀವನದ ವಿವರಗಳನ್ನೆಲ್ಲಾ ತಿಳಿದುಕೊಂಡು, ಅದೇನು assess ಮಾಡ್ತಾನೋ ಅಂತ! ನಗುಬರುತ್ತದೆ. ಸದ್ಯ ಹಾಗಾಗದಿರಲಿ. ರಾತ್ರಿ ಇವಳ ಕಿವಿಯಲ್ಲಿ ಉಸಿರಿದ್ದೆ, ''ಚಿದೂ ಹೇಗಿದ್ದಾನೆ?'' ಅಂತ. ''ರೀ, ಇತ್ತೀಚೆಗೆ ಆ ಮೂಲೆ ಮನೆಯ ಶಂಕ್ರಯ್ಯನವರ ಜೊತೆ ತುಂಬಾ ಮಾತಾಡ್ತಾರೆ'' ಅಂದಳು!

ಆರೇಳು ಕುಟುಂಬದವರು ವಾಸಿಸುತ್ತಿರುವ ಈ ವಠಾರದಲ್ಲಿ, ಶಂಕ್ರಯ್ಯ ಎಂಬ ನಿರ್ಲಿಪ್ತ ಮನುಷ್ಯನನ್ನು ಯಾರೂ ಮಾತಾಡಿಸುವ ಧೈರ್ಯ ಮಾಡುವವವಲ್ಲ. ತನ್ನ ಪಾಡಿಗೆ ತಾನು ನಾಲ್ಕು ಬಕೆಟ್ ನೀರು ತುಂಬಿಸಿಕೊಳ್ಳುವುದರ ಮೂಲಕ ಬದುಕು ಪ್ರಾರಂಭಿಸುವ ಎಪ್ಪತ್ತರ ವ್ಯಕ್ತಿ. ಪುಟ್ಟ, ಒಂದೇ ಒಂದು ಕೋಣೆಯೇ ಎಲ್ಲ. ಸ್ವಂತ ಅಡುಗೆ-ತಿಂಡಿ ಮಾಡಿಕೊಂಡು 'ಹಾಯಾಗಿದ್ದು' ಬಿಡುವ ಜಾಯಮಾನದವರು. ಅದು ಹೇಗೆ ಈ ನಮ್ಮ ಚಿದೂನ ಸ್ನೇಹ ಬಯಸಿದರು ಎಂಬುದೇ ಆಶ್ಚರ್ಯ. ನಾವು ಇಲ್ಲಿಗೆ ಬಂದು ನಾಲ್ಕು ವರ್ಷವಾದರೂ, ನಾಲ್ಕು ಬಾರಿ ಮಾತನಾಡಿಸಿಲ್ಲ. ಆದರೆ ಈಗ ಈ ಚಿದಾನಂದ? 'ಚಿದಾನಂದ ಮನೇಲಿದ್ದಾನಾ' ಎಂದು ಬಾಗಿಲತನಕ ಬಂದು ಕೇಳಿ, ಕರೆವ ಮಟ್ಟಿಗೆ ಶಂಕ್ರಯ್ಯನವರು ಬದಲಾಗಿದ್ದಾರೆ ಎಂದರೆ ಈ ನನ್ನ ಸಂತನ ಕೈವಾಡ ಇರಲೇಬೇಕು. ನಿಸ್ಸಂಗಿ ಶಂಕ್ರಯ್ಯನವರಿಗೆ ಚಿದಾನಂದ, ಲೈಬ್ರರಿಗೆ ಹೋಗಲು, ತರಕಾರಿ, ಸಾಮಾನು ತರಲು ಜೊತೆಗೂಡುವ ಸಂಗಿಯಾದ. ಒಂದು ಸಂಜೆಯಂತೂ, ''ಏನಪ್ಪ ದಿನಕರ ಹೇಗಿದ್ದಿ? ನಿನ್ನ ಗೆಳೆಯ ಚಿದಾನಂದ ಎಂಥ ಒಳ್ಳೆಯ ಮನುಷ್ಯ, ಎಂಥ ನಡೆ-ನುಡಿ-ವಿನಯ ವಿನಯ ವಿನುಕತೆ!! ನನಗಂತೂ ನನ್ನ ಮಗನೇ ಇವನು ಎನ್ನಿಸಿಬಿಟ್ಟದೆ'' ಎಂಬ ಮಾತು ಶಂಕ್ರಯ್ಯ ಆಡಿದಾಗ, ''ಅರೆ! ನೀವು ಶಂಕ್ರಯ್ಯನವರೇ'' ಎಂದು ಕೇಳಬೇಕು ಎನ್ನಿಸಿತು. ''ಏ ಕತ್ತೆ, ಚಿದೂ, ಏನೋ ಇದೂ ಶಂಕ್ರಯ್ಯನವರನ್ನು ಭಾರೀ ಹಚ್ಚಿಕೊಂಡಿದ್ದಿ'' ಎಂದೆ. ಮಾಮೂಲಿ ಧಾಟೀಲಿ ತುಟಿ ಬಿರಿಯದಂತೆ ನಗೆ ನಕ್ಕು, ''ಏನಿಲ್ಲ ಮಾರಾಯ, ಯಾಕೋ ಅವರನ್ನು ಸುಮ್ಮನೇ ಗಮನಿಸುತ್ತಾ ಹೋದೆ. ಅವರ ನಿರ್ಲಿಪ್ತತೆ, ಏಕಾಂಗಿತನ, ನಿಸ್ಸಂಗಿ ಮನೋಭಾವ, ಈ ವೃದ್ಧಾಪ್ಯದಲ್ಲಿಯೂ ಇಂಥ ಹಠಮಾರಿತನಗಳ ಬಗ್ಗೆ ಕುತೂಹಲವಾಯಿತು. ಇಷ್ಟವಾಯಿತು. ನೀವು ಯಾರು? ಊರು? ಸಂಸಾರ? ಕೇಳುತ್ತಾ ಹೋದೆ. ಹೇಳುತ್ತ ಹೋದರು. ಅವರಿಗೂ ಕೇಳುವ ಕಿವಿ, ನನಗೂ ನುಡಿವ ಮಾತು ಬೇಕಿತ್ತು'' ಎಂದ.

''ನಾನು ನಿನಗೆ ಮೊದಲೇ ಹೇಳಿದ್ನಲ್ಲ ಮಾರಾಯ! ಇನ್ನೊಬ್ಬರ ವ್ಯಕ್ತಿಗತ ಜೀವನದಲ್ಲಿ

ತಲೆ ಹಾಕಬೇಡ, ವ್ಯಕ್ತಿಗತ ನಂಬಿಕೆಗಳನ್ನು ಪ್ರಶ್ನಿಸಬೇಡ, ಕಲಕಬೇಡ, ಶಂಕ್ರಯ್ಯನವರ ಜೀವನ ಚರಿತ್ರೆ ತೆಗೊಂಡು ಏನುಮಾಡ್ತಿ? ಹಲೋ ಕ್ಷೇಮ, ಕ್ಷೇಮ ಇಷ್ಟೇ ಸಾಕಿತ್ತು ಮಗನೇ, ನಮ್ಮ ನಮ್ಮ ಬದುಕನ್ನೇ ರಿಪೇರಿ ಮಾಡಿಕೊಳ್ಳಲು ಪುರುಸೊತ್ತಿಲ್ಲ ನಮಗೆ. ಅದರಲ್ಲಿ ನೀನು...'' ಎಂದು ರೇಗಿದೆ. ''ದಿನೂ ಈ ಜಗತ್ತಿನಲ್ಲಿ ಬಹಳ ಜನ ದುಃಖದಲ್ಲಿದ್ದಾರೆ. ಅವರಿಗೆ ಏನೂ ಬೇಕಾಗಿಲ್ಲ, ಅನುಕಂಪ, ಪ್ರೀತಿ, ಸಾಂತ್ವನ ಸಾಕು, ಸುಮ್ಮನೆ ನೀನು ಒಬ್ಬ ವ್ಯಕ್ತಿಯ ಬಗ್ಗೆ, ಅವನ ಕಷ್ಟಗಳ ಬಗ್ಗೆ ಒಮ್ಮೆ ಕೇಳುತ್ತಾ ಹೋಗು, ಆ ವ್ಯಕ್ತಿಯ ಕಣ್ಣಿನಲ್ಲಿ ಎಂಥ ಭರವಸೆ ಬೆಳಕು ಮೂಡುತ್ತೆ! ಅಷ್ಟೇ ಸಾಕು. ದುಃಖಕ್ಕೆ ಸಂತೈಸುವ ಹೃದಯ ಬೇಕು, ಸಮಾಧಾನದಿಂದ ಕೇಳಿ, 'ಅಯ್ಯೋ, ಇರಲಿ ಎಲ್ಲ ಸರಿಹೋಗುತ್ತೆ' ಎಂಬ ಒಂದೇ ಒಂದು ಮಾತು ಬೇಕು...'' ಎಂದೆಲ್ಲ ಹೇಳುತ್ತ ಹೋದ. 'ಈ ಇವನು ಈ ಜನ್ಮದಲ್ಲಿ ಉದ್ಧಾರವಾಗೋಲ್ಲ' ಎಂದು ಶಪಿಸಿದೆ!



ತನ್ನಲ್ಲಿ ಅಡಗಿಸಿಟ್ಟುಕೊಂಡಿರುವ ಎಲ್ಲ ಗುಟ್ಟುಗಳನ್ನು ಈ ಶಂಕ್ರಯ್ಯನಂಥವರು ಅದೇಕೆ ಚಿದಾನಂದನೆದುರು ಹೊರಗೆಡವುತ್ತಾರೋ! ಈ ನಮ್ಮ ಚಿದಾನಂದ ಶಂಕ್ರಯ್ಯನವರ ಜೀವನ ವಿವರಗಳನ್ನೆಲ್ಲ ಹೊತ್ತು ಬಂದಿದ್ದ. ಮಂಡ್ಯ ಜಿಲ್ಲೆಯ ಒಂದು ಗೌಡ ಕುಟುಂಬದ ಶಂಕ್ರಯ್ಯ, ತಮ್ಮ ನಲವತ್ತೆಂಟರ ಮಧ್ಯ ವಯಸ್ಸಿನಲ್ಲಿಯೇ ಕುಟುಂಬದಿಂದ ಸಿಡಿದು ಬಂದಿದ್ದರು. ಇದ್ದ ಹನ್ನೆರಡು ಎಕರೆ ಚಿನ್ನದ ಜಮೀನು, ಶುಗರ್ ಫ್ಯಾಕ್ಟರಿಯಲ್ಲಿ ಲೆಕ್ಕ ಬರೆವ ಕೆಲಸ, ಹೆಂಡತಿ, ಎರಡು ಮಕ್ಕಳನ್ನು ಪಡೆದವರು. ಬೆಳೆದ ಮಕ್ಕಳೆದುರಿಗೆ ರಾತ್ರೋರಾತ್ರಿ ಮನೆಬಿಟ್ಟು ಹೊರಟು ಹೋದ ಹೆಂಡತಿ, ಬೇರೊಬ್ಬ ನೊಂದಿಗೆ ಸಂಸಾರ ಮಾಡಲು ಶುರುವಿಟ್ಟದ್ದು. ಈ ರಂಪಕ್ಕೂ ಮುನ್ನವೇ ಮಗಳ ಮದುವೆ ಮುಗಿದಿದ್ದು ನಿರಾಳವಾಗಿತ್ತು. ಮಗ ಸಿಡಿದು ದೂರಹೋಗಿದ್ದ. ಪಕ್ಕಾ ವ್ಯವಹಾರಸ್ಥೆ ಆದ್ದರಿಂದ ಶಂಕ್ರಯ್ಯನವರ ಹೆಸರಿನಲ್ಲಿದ್ದ ಜಮೀನನ್ನು ತನ್ನ ಹೆಸರಿಗೆ ಮೊದಲೇ ಹೆಂಡತಿ ಬದಲಾಯಿಸಿ ಕೊಂಡಿದ್ದಳು. 'ತಾನು ಎಲ್ಲಿ ತಪ್ಪು ಮಾಡಿದ್ದೇನೆ' ಎಂದು ತಿಳಿದು ತಿದ್ದುಕೊಳ್ಳುವ ಮೊದಲೇ, ಇಷ್ಟೆಲ್ಲ ಅನಾಹುತ ನಡೆದು, ಶಂಕ್ರಯ್ಯ ಕೆಲಸಕ್ಕೆ ಎಳ್ಳು-ನೀರು ಬಿಟ್ಟು, ಬಂದ ಹಣವನ್ನೆಲ್ಲ ಒಟ್ಟುಗೂಡಿಸಿ ಬ್ಯಾಂಕಿನಲ್ಲಿಟ್ಟು, ಬರುವ ಬಡ್ಡಿಯಿಂದ ಹೀಗೆ ಇಲ್ಲಿ ಜೀವನ ಹೂಡಿದ್ದರು. ಹದಿನೈದು ವರ್ಷಗಳ ಧೀರ ಬದುಕಿದು! ಚಿದಾನಂದ ಎಲ್ಲವನ್ನು ತಿಳಿದುಕೊಂಡಿದ್ದ.



''ದಿನೂ, ನಾಳೆ ಊರಿಗೆ ಹೋಗ್ತೀನಿ ಕಣೋ. ತಂಗಿ, ಅಮ್ಮನ್ನ ನೋಡಬೇಕು ಎನ್ನಿಸಿದೆ'' ಎಂದು ರಾತ್ರೆ ಊಟಕ್ಕೆ ಕುಳಿತಾಗ ಹೇಳಿದ್ದ. ಈಕೆ, ''ಇನ್ನೊಂದೆರಡು ದಿನ ಇರು ಚಿದೂ, ಹೋಗುವುದು ಇದ್ದೇ ಇದೆ'' ಎಂದು ಹೇಳಿದಳು. ಅವಳ ಈ ಮಾತಿನಲ್ಲಿದ್ದ ಆತ್ಮೀಯ ಏಕವಚನ, ತುಂಬಾ informal ಆದ ನಡತೆ, ಹಾಗೇ ಆಳದಲ್ಲಿದ್ದ ದುಃಖವನ್ನು ಸಂಗ್ರಹಿಸಿದೆ. ''ನಾಳೆ ಬೇಡ ನಾಡಿದ್ದು'' ಎಂದು ಹೇಳಿ, order ಮಾಡಿ ಎದ್ದೆ. ಯಾಕೋ ಈ ಮನೆ ಯಲ್ಲಿನ ಚಿದಾನಂದನ ಅನುಪಸ್ಥಿತಿ ಕಲ್ಪಿಸಿಕೊಳ್ಳ ಲಾಗಲಿಲ್ಲ. ಹೊಟ್ಟೆಯಲ್ಲಿ ಏನೋ ಕಲಕಿ ದಂತಾಯ್ತು. ಉಕ್ಕಿ ಬರುತ್ತಿದ್ದ ಅಳುವಿಗಾಗಿ, ಮುಖ ತೊಳೆದುಕೊಂಡೆ. ಇವಳೂ, 'ಯಾಕೋ ಹಸಿವಿಲ್ಲ' ಎಂದು ಹಾಗೇ ಮಲಗಲು ಹೋದಳು.

ಬೆಳಗ್ಗೆ ಒಂಬತ್ತಕ್ಕೇ ಶಂಕ್ರಯ್ಯನವರು telegram ಒಂದನ್ನು ಹಿಡಿದು ಓಡಿ ಬಂದಿದ್ದರು. ''ಚಿದೂ! ನೋಡೋ ನನ್ನಾಕೆ ತೀರಿಕೊಂಡಳಂತೆ. ಮೂರು ದಿನದ ನಂತರ

ಬಂದಿದೆ'' ಎಂದು ಗಳಗಳ ಅಳಲು ಶುರು ಮಾಡಿದರು. ವಿಳಾಸ ಖಚಿತವಾಗದೇ, ಎಲ್ಲೆಲ್ಲೋ ಅಡ್ಡಾಡಿ ಇವತ್ತು ಸುದ್ದಿ ತಲುಪಿತ್ತು.

''ನಾನು ತಪ್ಪು ಮಾಡ್ದೆ ಚಿದೂ, ತಪ್ಪು ಮಾಡ್ದೆ. ನಿನ್ನ ಮಾತು ಕೇಳಲಿಲ್ಲ. ನನ್ನ ಹಠ, ಜಿದ್ದು ನಾನು ಬಿಡಬೇಕಾಗಿತ್ತು. ಒಮ್ಮೆ ಹೋಗಿ ಎಲ್ಲರನ್ನೂ ಸೇರಬೇಕಾಗಿತ್ತು. ಬರ್ತೀರಾ ನನ್ನ ಜೊತೆ? ಅಂತ ಕರೀಬೇಕಾಗಿತ್ತು. ಈ ಮುದಿವಯಸ್ಸಿನಲ್ಲಿ ಹಾಳು ಹಠ ಯಾಕೆ ಬೇಕಾಗಿತ್ತು. ಅವರೆದುರಿಗೆ ಸೋಲಬೇಕಾಗಿತ್ತು. ಗೆಲ್ಲುತ್ತಿದ್ದೆ! ಒಂದೇ ಒಂದು ಕ್ಷಣ ಎಲ್ಲರನ್ನು ನಾನು ಕ್ಷಮಿಸಿದ್ದರೆ! ಅಯ್ಯೋ ಕೊನೆ ಬಾರಿಯೂ ಇವಳ ಮುಖ ನೋಡಲಾಗ ಲಿಲ್ಲ'' ಎಂದು ಪೇಚಾಡಿ ಅತ್ತರು. ಇಬ್ಬರೂ ಸೇರಿ, ''ಹೋಗ್ಲಿ ಬಿಡಿ ಶಂಕ್ರಯ್ಯನವರೇ ನಿಮ್ಮ ಮಕ್ಕಳ ರೀತಿ ನಾವಿದ್ದೀವಿ'' ಎಂದೆಲ್ಲಾ ಸಮಾಧಾನ ಮಾಡಿದೆವು. ಚಿದಾನಂದ ದಂಗು ಬಡಿದವನಂತೆ ಮೂಲೇಲಿ ಕುಕ್ಕರಗಾಲಲ್ಲಿ ಕೂತಿದ್ದ. ನಿರ್ಲಿಪ್ತನಿಗೆ, ನಿಸ್ಸಂಗಿಗೆ ಆಪ್ತತೆ, ಸಂಗದ ಬಗ್ಗೆ ಬೋಧಿಸಿ ಹಿಂಸಿಸಿದೆ, ಕಲಕಿದೆ ಎಂದೆಲ್ಲ ಯೋಚಿಸುತ್ತಾ.



ಚಿದಾನಂದ ಎಲ್ಲವನ್ನು ಕಲಕಿ ಹೊರಟು ನಿಂತಂತಿದ್ದ. ವಿದಾಯ ಹೇಳುತ್ತ ಈಕೆ ಬಾಗಿಲಾಚೆ ಬಿಕ್ಕಿದ್ದಳು. ಶಂಕ್ರಯ್ಯನವರು ಮಾಮೂಲಿ ಹಾಗೆ ಲೈಬ್ರರಿಯೆಡೆ ಹೊರಟುಹೋಗಿದ್ದರು. ಚಿದೂ ಊರಿಗೆ ಹೋಗುವ ವಿಷಯ ಗೊತ್ತಿತ್ತು. ತುಂಬಾ ಇಳಿದುಹೋದಂತೆ ಮುಂಜಾವ ಕಂಡಿದ್ದರು. ''ಚಿದೂ, ಮತ್ತೆ ಯಾವಾಗ ಬರ್ತಿ?'' ಎಂದೆ. ''ತಂಗಿ ಮದುವೆಗೆ ನೀವೇ ಬನ್ನಿ. ಹೊಲ ತುಂಬಿ ನಿಂತಾಗ ಕರೀತೀನಿ, ಬನ್ನಿ. ಶಂಕ್ರಯ್ಯನವರನ್ನು ಕರೆತನ್ನಿ'' ಎನ್ನುತ್ತಾ ಹೊರಟ. ಮಂಜು ಮಂಜಾದ ಹಾದಿಯಲ್ಲಿ ಆಕಾರಕ್ಕೆ ಅರ್ಥವಿಲ್ಲದಂತಾಯಿತು.



ಚಿದೂ, ಹೋದ ನಾಲ್ಕೇ ದಿನಕ್ಕೆ ಪತ್ರ ಬರೆದಿದ್ದಾನೆ, 'ಅತ್ಗೆಮ್ಮ' ಎಂಬ ಹೆಸರಿನಲ್ಲಿ. ತಂಗಿಗೆ ವರ ಸಿಕ್ಕ ಬಗ್ಗೆ, ಅಮ್ಮನ ಖುಷಿಯ ಬಗ್ಗೆ, ಮಾಧವಿಯ ಸಮಾಧಿ ಮೇಲೆ ಮುಳ್ಳು ಕುರುಚಲು ಗಿಡಗಳು ತಲೆ ಎತ್ತಿರುವ ಬಗ್ಗೆ, ಜಮೀನಿಗೆ ಬೋರ್ ಕೊರೆಸಿರುವ ಬಗ್ಗೆ... ರಾತ್ರಿ ಊಟ ಮುಗಿಸಿ ಪತ್ರ ಬರೆಯಬೇಕು ಎಂದುಕೊಂಡೆ. ಚಿದೂ ಹೋದ ಆ ರಾತ್ರಿಯೇ ಶಂಕ್ರಯ್ಯನವರು ಹೃದಯಾಘಾತದಿಂದ ಕುಸಿದು ಬಿದ್ದು, ಆಸ್ಪತ್ರೆಯಿಂದ ಮರಳಿ ಬಾರದಾದ ಸುದ್ದಿ ಬರೆಯಲೇಬೇಡಿ ಎಂಬ ಈಕೆಯ ಎಚ್ಚರಿಕೆಯ ಮಾತನ್ನು ಗಮನಿಸಿದೆ. ಮನ್ನಿಸಿದೆ. ''ನೀನೂ ಏನಾದರೂ ಬರಿ'' ಎಂದೆ.





ಚಿದಾನಂದ ಎಲ್ಲವನ್ನು ಕಲಕಿ ಹೊರಟು ನಿಂತಂತಿದ್ದ.

ವಾಸುದೇವ ನಾಡಿಗ

## FORM - IV
(See Rule - 8)

Statement about ownership and other particulars about Monthly **"BHAVANA"** to be published in the first issue every year after the last day of February.

| | | | |
|---|---|---|---|
| 1. | Name of the publication | : | **BHAVANA** |
| 2. | Place of publication | : | HUBLI |
| 3. | Periodicity of its publication | : | Monthly |
| 4. | Printer's name | : | **V. B. Sankeshwar** |
| | Whether Citizen of India | : | Yes |
| | Address | : | Anand Printers & Publishers<br>'Giriraj Annexe', I Floor<br>PWD Circuit House Road<br>Hubli - 580 029 |
| 5. | Publisher's name | : | **V. B. Sankeshwar** |
| | Whether Citizen of India | : | Yes |
| | Address | : | Same as above |
| 6. | Editor | : | Jayant Kaikini |
| | Whether Citizen of India | : | Yes |
| | Address | : | No. 38, A. M. Road<br>Kalasipalyam New Extension<br>Bangalore 560 002 |
| 7. | Names & Addresses of individuals who own the newspaper and partners of shareholders holding more than one percent of the Total Capital. | : | **V. B. Sankeshwar**<br>Same as above |

I, V. B. Sankeshwar hereby declare that the particulars given above are true to the best of my knowledge and belief.

Place : Hubli
Dated : 28.02.2001

**V. B. Sankeshwar**
Signature of Publisher



ಜನಪದ

ಬುದ್ಧಿವಂತಿಕೆಯ ಕತೆಗಳು

ಸಂಗ್ರಹ: ಎಂ. ಎ. ಜಯಚಂದ್ರ

# ಹೊರ್‍ಸಿ-ತುಂಬಾಸಿ-ಒಳ್ಸಿ

ಒಂದು ಪಟ್ಟಣ. ಆ ಪಟ್ಟಣದಲ್ಲಿ ಒಬ್ಬ ಬುದ್ಧಿವಂತ ಇದ್ದ. ಅವನ ಪ್ರಸಿದ್ಧಿ ಪಕ್ಕದ ಪಟ್ಟಣದ ರಾಜಕುಮಾರಿ ಕಿವಿಗೆ ಬಿತ್ತು. ಅವನನ್ನು ಹೇಗಾದರೂ ಮಾಡಿ ಮದುವೆ ಆಗಬೇಕು ಅಂತ ಆ ಪಟ್ಟಣಕ್ಕೆ ವೇಷ ಮರೆಸಿಕೊಂಡು ಬಂದ್ಲು. ಆದರೆ ಆ ಪಟ್ಟಣದಲ್ಲೇ ಬೇಕಾದಷ್ಟು ಜನ ಆ ಬುದ್ಧಿವಂತನನ್ನು ಲಗ್ನ ಆಗಬೇಕು ಅಂತ ಅವನನ್ನು ಅಪಹರಿಸುತ್ತಿದ್ದರು. ಆದ್ದರಿಂದ ಈ ರಾಜಕುಮಾರಿಗೆ ಅವನನ್ನು ಪತ್ತೆ ಮಾಡೋದೇ ಕಷ್ಟವಾಯ್ತು.

ಆಗ ಅವಳೊಂದು ಉಪಾಯ ಮಾಡಿದ್ಲು. ತನ್ನ ಮನೆ ಗೌಡೀನ ಕರ್‍ದು ಮೂರು ಕಾಸು ಕೊಟ್ಲು. ''ಒಂದು ಕಾಸಿನ ಹೊರ್‍ಸಿ, ಒಂದು ಕಾಸಿನ ತುಂಬಾಸಿ, ಒಂದು ಕಾಸಿನ ಒಳ್ಸಿ ತಗೊಂಡು ಬಾ'' ಅಂತ ಅಂದ್ಲು.

ಆ ಗೌಡಿ ಮೂರು ಕಾಸು ಹಿಡ್ಕೊಂಡು ಎಲ್ಲ ಅಂಗಡಿ ತಿರುಗಿದ್ಲು. ಎಲ್ಲೂ ಸಿಗಲಿಲ್ಲ. ಅಂಗಡಿಯವರಿಗೆ ಇವಳು ಕೇಳೋದೇ ಅರ್ಥವಾಗಲಿಲ್ಲ. ಆದ್ದರಿಂದ ಇವಳನ್ನು ಬೈದು, ಹೊಡ್ದು ಕಳಿಸಿದ್ರು. ಅಳ್ತಾ ಬರ್‍ತಾ ಇದ್ದಳು.

ಅಲ್ಲೊಬ್ಬ ಗಾಣ ಹೊಡೀತಿದ್ದ. ಇವಳು ಅಳ್ತಾ ಬರೋದನ್ನ ನೋಡಿದ. ಅಯ್ಯೋ ಪಾಪ ಅಂತ ಕರ್‍ದ. ''ಏನಮ್ಮ? ಯಾಕೆ ಅಳ್ತಿದ್ದೀಯ?'' ಅಂತ ಕೇಳ್ದ. ''ನಮ್ಮ ಅಮ್ಮಾವ್ರು ಮೂರು ಕಾಸು ಕೊಟ್ಟು, ಒಂದು ಕಾಸಿನ ಹೊರ್‍ಸಿ, ಒಂದು ಕಾಸಿನ ತುಂಬಾಸಿ, ಒಂದು ಕಾಸಿನ ಒಳ್ಸಿ ತಗೊಂಡು ಬಾ ಅಂತಂದ್ರು. ಯಾವ ಅಂಗ್ಡೀಲೂ ಸಿಗ್ಲಿಲ್ಲ, ಎಲ್ಲರೂ ಬೈದು, ಹೊಡ್ದು ಕಳಿಸಿದ್ರು'' ಅಂತ ಕಣ್ಣೀರು ಸುರಿಸಿದ್ಲು.

''ಅಯ್ಯೋ ಹುಚ್ಚಿ, ಹಾಗೆ ಕೇಳಿದ್ರೆ ಯಾರಿಗೆ ಗೊತ್ತಾಗುತ್ತೆ? ಯಾರು ಕೊಡ್ತಾರೆ? ಒಂದು ಕಾಸಿನ ಖರ್ಜೂರ, ಒಂದು ಕಾಸಿನ ಬೆಲ್ಲ, ಒಂದು ಕಾಸಿನ ಬಾಳೆಹಣ್ಣು ಕೊಡಿ ಅಂತ ಕೇಳು ಕೊಡ್ತಾರೆ'' ಅಂದ.

ಇವಳು ಹಾಗೇ ಹೋಗಿ ಕೇಳಿದ್ಲು. ಅಂಗಡಿಯವರು ಕೊಟ್ರು. ತಗೊಂಡು ಹೋಗಿ ಯಜಮಾನ್ತಿಗೆ ಕೊಟ್ಲು. ಆ ರಾಜಕುಮಾರಿಗೆ ಸೋಜಿಗ ಆಯ್ತು. ತಾನು ಪ್ರೀತಿಸಿದ ಬುದ್ಧಿವಂತನ ಗುರುತು ಸಿಕ್ತು ಅಂತ ಸಂತೋಷವಾಯ್ತು. ಗೌಡಿಯಿಂದ ಅವನಿರೋ ಸ್ಥಳ ತಿಳಿದುಕೊಂಡ್ಲು. ಭೇಟಿ ಆದ್ಲು. ಅವನನ್ನು ತನ್ನ ಪಟ್ಟಣಕ್ಕೆ ಕರಕೊಂಡು ಹೋಗಿ, ಲಗ್ನವಾಗಿ, ಸುಖವಾಗಿದ್ಲು.

(ಅರ್ಥ: ಹೊರ್‍ಸಿ-ಹೊರಗೆ ಸಿಹಿ, ತುಂಬಾಸಿ-ತುಂಬಾ ಸಿಹಿ, ಒಳ್ಸಿ-ಒಳಗೆ ಸಿಹಿ)





ಲಘು ಕತೆ



ಕೆ. ಶಾಂತಾಮಣಿ

# ನೆಲೆ

ಕುರ್ಚಿಯ ಮೇಲೆ ಕುಳಿತ ವಿಶಾಲಾಕ್ಷಿಯ ಮನಸ್ಸು ಗತಕಾಲದ ದಿನಗಳನ್ನು ವರ್ತಮಾನದೊಡನೆ ಹೋಲಿಸಿ ನೋಡುತ್ತಿತ್ತು. 'ದೂರಕ್ಕೆ ಬೆಟ್ಟ ನುಣ್ಣಗೆ' ಎಂಬ ಗಾದೆ ಅವಳ ಜೀವನಕ್ಕೆ ಸರಿಹೊಂದುತ್ತಿತ್ತು. ಸೇರಿದ ಮನೆಯವರು ಏನೋ ಒಂದು ನೆಪ ಹೇಳಿ ತವರು ಮನೆಗೆ ಅಟ್ಟಿಬಿಟ್ಟಾಗ, ಜೀವನ ಅಂಧಕಾರದಲ್ಲಿ ಮುಳುಗಿತು. ಚಿಕ್ಕಪ್ಪ ಆಶಾಕಿರಣವೊಂದನ್ನು ತೋರಿಸಿ ಓದಿಸಿದರು. ಕಾಲೇಜೊಂದರ ಅಧ್ಯಾಪಕಿಯಾಗಿ ಹೊರಗಿನ ಕಾರ್ಯಕ್ಷೇತ್ರದಲ್ಲಿ ಸ್ಥಾನಮಾನಗಳನ್ನು ಪಡೆದಳು. ಕೈತುಂಬ ಸಂಬಳ, ಪುಟ್ಟದಾದ ಒಂದು ಮನೆ, ಒಂದು ಕಾರು, ಮೆಚ್ಚಿನ ವಿದ್ಯಾರ್ಥಿಗಳು, ಸ್ನೇಹಿತರು ಯಾವುದಕ್ಕೂ ಕೊರತೆ ಇಲ್ಲ. ಆದರೆ ಆ ಒಂಟಿತನ! ಅದೊಂದೇ ಅವಳನ್ನು ಕಾಡುತ್ತಿದ್ದುದು. ಮೆಚ್ಚಿನ ಗೆಳತಿ ಸುಕನ್ಯಾ ಮತ್ತೊಂದು ಮದುವೆ ಆಗೆಂದು ಸಲಹೆ





ನೀಡಿದ್ದಳು. ಆದರೆ ಆ ಮಧ್ಯ ವಯಸ್ಸಿನಲ್ಲಿ ಮತ್ತೆ ಮದುವೆ! ಗಾಬರಿಯಾದಳು ವಿಶಾಲಾಕ್ಷಿ. ಆದರೆ ನಿಧಾನವಾಗಿ ಯೋಚಿಸಿದಳು. ಗೆಳತಿ ಸುಕನ್ಯಾ ನೀಡಿದ ಹಲವಾರು ಉದಾಹರಣೆಗಳನ್ನು ವಿಶ್ಲೇಷಿಸಿದಳು. ಸರಿ-ತಪ್ಪುಗಳ ಮನಸ್ಸು ಹೊಯ್ದಾಡಿತು. ಬೇಕೆಂದಿತು. ಬೇಡವೆಂದಿತು. ಆ ಮರ್ಕಟ ಮನಸ್ಸು, ಹೊರಗಿನ ಕಾರ್ಯಕ್ಷೇತ್ರದಲ್ಲಿ ಮಾನ-ಸಮ್ಮಾನ ಇದ್ದರೂ, ಎಲ್ಲ ನೆಂಟರೂ ಒಂದೆಡೆ ಸೇರಿದಾಗ, ತಾನು ಹೊರ ಹೊರಗೆ ಎನಿಸುತ್ತಿತು. ನೆಂಟರು, ಒಬ್ಬರಿಗೊಬ್ಬರು ಸಂಸಾರದ ಕಷ್ಟ-ಸುಖಗಳನ್ನು ಹೇಳಿಕೊಳ್ಳುತ್ತಿದ್ದಾಗ, ತನಗೆ ಹೇಳಿಕೊಳ್ಳಲು ಏನೂ ಇಲ್ಲ. ಸಂಸಾರದ ಸುಖ-ದುಃಖವಿಲ್ಲ, ಸಮಾರಂಭವಿಲ್ಲ ಎನಿಸುತ್ತಿತ್ತು. ಯಾರಾದರೂ 'ನಿನಗೇನಮ್ಮಾ ಹಾಯಾಗಿದ್ದೀಯ. ಮದುವೆ-ಮುಂಜಿ, ಕಷ್ಟಗಳ ಕಾಟವಿಲ್ಲ ಎಂದಾಗ ತನಗೆ ಸಂತೋಷ ಆಗುತಿತ್ತೋ, ದುಃಖವಾಗುತ್ತಿತ್ತೋ ತಿಳಿಯುತ್ತಿರಲಿಲ್ಲ.

ಹೀಗೆ ಯಾವದೋ ದಾರಿ ಹಿಡಿದು ತನ್ನ ಜೀವನದ ದೋಣಿ ಸಾಗಿ ಹೋಗುತಿತ್ತು. ಆದರೆ ಸುಕನ್ಯಾಳ ಸಲಹೆಯಿಂದ ದೋಣಿ ಅಲುಗಾಡತೊಡಗಿತು. ಅದಕ್ಕೆ ಮುಂದಿನ ದಾರಿ ಕಾಣದಂತಾಯಿತು. ಅದಕ್ಕೊಂದು ಮಾರ್ಗ ತೋರಿಸಲೇಬೇಕಾಯ್ತು. ತಾಕಲಾಟದಲ್ಲಿ ಮನಸ್ಸು ಹಿಂಡಿಹೋಗಿತ್ತು. ಹೇಗೆ ಮಾಡಿದರೆ ಹೇಗೋ. ನಿರ್ಧಾರ ಸರಿಯೋ, ತಪ್ಪೋ. ಭವಿಷ್ಯದಲ್ಲಿ ಏನು ಕಾದಿದೆಯೋ, ಕಂಗಾಲಾಗಿ ಹೋದ ವಿಶಾಲಾಕ್ಷಿ, ಕೊನೆಗೊಂದು ನಿರ್ಧಾರಕ್ಕೆ ಬಂದು, ಜೀವನದ ಇನ್ನೊಂದು ಮುಖ ನೋಡಲು ಅನುವಾದಳು.

ಸುಕನ್ಯಾಳ ಪರಿಚಿತರೊಬ್ಬರು ರಿಟೈರ್ಡ್ ಆರ್ಮಿ ಆಫೀಸರ್. ಅವರ ಮೂರು ಗಂಡು ಮಕ್ಕಳಲ್ಲಿ ಇಬ್ಬರು ಅಮೆರಿಕೆಯಲ್ಲಿದ್ದರು. ಇನ್ನೊಬ್ಬ ಪಂಜಾಬಿನಲ್ಲಿ. ಮತ್ತೊಬ್ಬ ಮಗಳು ಎಸ್ಟೇಟೊಂದರ ಮಾಲೀಕನನ್ನು ಮದುವೆಯಾಗಿದ್ದಳು. ಎಲ್ಲರೂ ಅವರವರ ಪಾಡಿಗೆ ಅವರು. ಸದಾಶಿವರಾಯರು ಯಾರ ಮನೆಯಲ್ಲೂ ಇರಲು ಒಪ್ಪದೇ, ತಾವೊಬ್ಬರೇ ಇದ್ದರು. ಒಂಟಿ ಜೀವನ ಬೇಸರವೆಂದು ಸುಕನ್ಯಾಳೊಂದಿಗೆ ಆಗಾಗ್ಗೆ ಹೇಳುತ್ತಿದ್ದರು. ಒಂದು ದಿನ ಸುಕನ್ಯಾಳ ತಲೆ ಕೆಲಸ ಮಾಡಿತು. ವಿಶಾಲಾಕ್ಷಿ, ಸದಾಶಿವರಾಯರನ್ನು ಪರಸ್ಪರ ಪರಿಚಯ ಮಾಡಿಸಿದಳು. ಒಬ್ಬರ ಬಗ್ಗೆ ಮತ್ತೊಬ್ಬರು ತಿಳಿದುಕೊಂಡರು. ಜೀವನದ ಮುಂದಿನ ದಿನಗಳಲ್ಲಿ ಅವರಿಬ್ಬರೂ ಸಂಗಾತಿಗಳಾಗಿ ಇರಬಹುದೆಂದು ಸೂಕ್ಷ್ಮವಾಗಿ ತಿಳಿಸಿದಳು.

ರಾತ್ರಿಯೆಲ್ಲಾ ಯೋಚಿಸಿದ ವಿಶಾಲಾಕ್ಷಿ, ಮರುದಿನ ಸುಕನ್ಯಾಳಿಗೆ ತನ್ನ ನಿರ್ಧಾರ ತಿಳಿಸಿದಳು.

ದೇವಸ್ಥಾನದಲ್ಲಿ ಸರಳ ವಿವಾಹ ಜರುಗಿತು. ರಾಯರ ಮಕ್ಕಳ ಅನುಮತಿಯೂ ದೊರಕಿತು. ತಂದೆ ಮದುವೆ ಆಗಿದ್ದು ಅವರಿಗೆ ಸಂತೋಷವೇ ಆಗಿತ್ತು. ಅಪ್ಪನನ್ನು ನೋಡಿಕೊಳ್ಳಲು ಒಬ್ಬರು ಸಿಕ್ಕಂತಾಗಿ ಅವರ ಬಗ್ಗೆ ಯೋಚಿಸುವುದು ತಪ್ಪಿತು. ಅಷ್ಟೇ ಅಲ್ಲದೆ ಆಕೆ ಸಂಪಾದನೆ ಮಾಡುತ್ತಿದ್ದಾಳೆ. ಮಕ್ಕಳಾಗುವ ವಯಸ್ಸೂ ಮೀರಿದೆ. ಬೇಕಾದಾಗ ಊರಿಗೆ ಹೋಗಬಹುದು. ಅಡಿಗೆ ಮಾಡಿ ಹಾಕುವವರೂ ಒಬ್ಬರು ಸಿಕ್ಕಂತಾಯಿತು. ಮಕ್ಕಳನ್ನು ಓದಲು ಬಿಡಬಹುದು. ಜೊತೆಗೆ ಅವಳ ಸಂಪಾದನೆಯ ಹಣವೂ ನಮಗೇ! ಮನಸ್ಸಿನಲ್ಲೇ ಲೆಕ್ಕ ಹಾಕಿಕೊಂಡ ಮಕ್ಕಳೆಲ್ಲರೂ ಸುಲಭವಾಗಿ ಒಪ್ಪಿಕೊಂಡರು. ಉಡುಗೊರೆಗಳನ್ನೂ ಕೊಟ್ಟು ಪ್ರೀತಿ ಸಂಪಾದಿಸಿಕೊಂಡರು.

ಮಕ್ಕಳು ವಿರೋಧಿಸುತ್ತಾರೇನೋ ಎಂದುಕೊಂಡಿದ್ದ ವಿಶಾಲಾಕ್ಷಿಗೆ ಸಮಾಧಾನವಾಯಿತು. ಎರಡು-ಮೂರು ವರ್ಷಗಳು ಹಾಯಾಗಿ ಕಳೆದವು. ಮನೆಗೆ ಬಂದಾಗ ಬೀಗ ನೋಡಬೇಕಾಗಿಲ್ಲ. ರಾಯರು ಇರುತ್ತಿದ್ದರು. ಆದರೆ ಕೆಲಸ ಹೆಚ್ಚಾಯಿತೇ ಹೊರತು ಕಡಿಮೆ ಆಗಲಿಲ್ಲ, ಮನೆಗೆ ಆತಂಕದಿಂದ

ಬರುವಂತಾಗುತ್ತಿತ್ತು. ಆದರೂ, ತನ್ನ ಎಲ್ಲ ಸಹೋದ್ಯೋಗಿಗಳು ಆತುರಾತುರವಾಗಿ ಮನೆಗೆ ಹೋಗುವ ಹಾಗೆ ತಾನೂ ಬರುವಂತಾದಾಗ ಆ ಆತಂಕದಲ್ಲೇ ಒಂದು ತೃಪ್ತಿ ಕಂಡಳು. ಆ ಬಂಧನದಲ್ಲಿ ಸುಖ ಕಂಡಳು. ಸಂಜೆ ಬಂದ ನಂತರ ರಾಯರಿಗೆ ಲಘು ಉಪಾಹಾರ ಆಗಬೇಕು. ಮನೆ ಅಚ್ಚುಕಟ್ಟಾಗಿರಬೇಕು. ಹೀಗೇ ಅವರದ್ದೇ ಕೆಲವು ಆರ್ಮಿ ಆರ್ಡರ್‌ಗಳಿದ್ದವು. ವಿಶಾಲಾಕ್ಷಿ ಎಲ್ಲವನ್ನೂ ಅನುಸರಿಸಿದಳು.

ಮಕ್ಕಳು-ಸೊಸೆಯರು ಭಾರತಕ್ಕೆ ಬಂದು ಎರಡು ಮೂರು ವರ್ಷಗಳಾದ್ದರಿಂದ ಆ ಡಿಸೆಂಬರ್‌ನಲ್ಲಿ ಊರಿಗೆ ಬಂದರು. ರಾಯರ ಮೊಮ್ಮಕ್ಕಳನ್ನು ಪ್ರೀತಿಯಿಂದ ಕಂಡಳು. ಅವರೆಲ್ಲರೂ ಏಳುವ ಹೊತ್ತಿಗೆ ಎಂಟು ಗಂಟೆಯಾಗಿರುತ್ತಿತ್ತು. ಎಲ್ಲರಿಗೂ ತಿಂಡಿ ಮಾಡಿ, ಹಾಟ್‌ಪಾಟ್‌ನಲ್ಲಿ ಹಾಕಿಟ್ಟು, ಅಡಿಗೆ ಮುಕ್ಕಾಲು ಮಾಡಿ, ತನಗೆ ಸೇರಿದಷ್ಟು ಊಟ ಮಾಡಿ, ತಿಂಡಿ ಡಬ್ಬಿಗೆ ಹಾಕಿಕೊಂಡು ಹೋಗುವ ಹೊತ್ತಿಗೆ ಸಾಕಾಗಿಹೋಗುತ್ತಿತ್ತು.

ಶನಿವಾರ-ಭಾನುವಾರದಲ್ಲಿ ಮೊಮ್ಮಕ್ಕಳು, ತಂದೆ-ತಾಯಿ ಹೇಳಿಕೊಟ್ಟ, ತಿಂಡಿ ಹೆಸರುಗಳನ್ನು ಹೇಳಿಕೊಂಡು, 'ಅಜ್ಜಿ ಅದು ಮಾಡಿ-ಇದು ಮಾಡಿ' ಎಂದಾಗ ಇಲ್ಲವೆನ್ನಲಾಗದೆ ಮಧ್ಯಾಹ್ನ ಮಾಡಿಕೊಡುತ್ತಿದ್ದಳು. ಅವರು ಹೋದರೆ ಸಾಕು ಎನಿಸುವ ಹೊತ್ತಿಗೆ, ಏಪ್ರಿಲ್‌ನಲ್ಲಿ ಪಂಜಾಬಿನ ಮಗ-ಸೊಸೆ ಆಗಮನ. ಅದರ ಹಿಂದೆ ಮಗಳು- ಮಕ್ಕಳ ಸವಾರಿ. ಹೀಗೆ ಪ್ರತಿ ವರ್ಷ ಯಾರಾದರೊಬ್ಬರ ಸತ್ಕಾರ-ಸೇವೆ ಮಾಡಬೇಕಾಗುತಿತ್ತು. ಜೊತೆಗೆ ರಾಯರ ಕಡೆಯ ಇತರ ನೆಂಟರೂ ಬಂದಿಳಿಯುತ್ತಿದ್ದರು.

ಎಲ್ಲರೂ ಹೊರಟುಹೋದ ಮೇಲೆ ಕಾಲೇಜಿಗೆ ರಜ ಹಾಕಿ ವಿಶ್ರಾಂತಿ ತೆಗೆದುಕೊಳ್ಳಬೇಕಾಗುತ್ತಿತ್ತು. ಸದಾಶಿವರಾಯರು ಎಂದೂ ಅಡಿಗೆಮನೆ ಹೊಕ್ಕವರಲ್ಲ. ಆರ್ಮಿಯಲ್ಲಿ ಇದ್ದವರು. ಎಲ್ಲದರಲ್ಲೂ ಶಿಸ್ತು. ಮದುವೆ ಆದ ಮೊದಲ ಕೆಲವು ದಿನಗಳಲ್ಲಿ ಪ್ರೀತಿ-ವಿಶ್ವಾಸದ ಮಾತು ಆಡಿದ್ದು ಎಷ್ಟೋ ಅಷ್ಟೆ. ಮಕ್ಕಳು-ಸೊಸೆ, ಮೊಮ್ಮಕ್ಕಳು ಬಂದಾಗ ಅವರಿಗೆ ಖುಷಿಯೋ ಖುಷಿ, ಅವರಿಗೆ ಚೆಸ್‌ನ ಹುಚ್ಚು. ಗಂಡುಮಕ್ಕಳು-ಸೊಸೆಯಂದಿರ ಜೊತೆ ಆಡಿದ್ದೊ ಆಡಿದ್ದೆ, ನಕ್ಕಿದ್ದೋ ನಕ್ಕಿದ್ದೆ. ಮಧ್ಯ ಮಧ್ಯ, ''ವಿಶಾಲಾಕ್ಷಿ ಏನಾದರೂ ಕುರುಕಲು ತಿಂಡಿ ತಾ'' ಎನ್ನುತ್ತಿದ್ದರು. ಅವರೊಡನೆ ಹರಟೆ, ಭವಿಷ್ಯದ ಯೋಜನೆ, ಪೇಪರ್, ವಾಕಿಂಗ್, ಊಟ, ತಿಂಡಿ, ಮೊಮ್ಮಕ್ಕಳೊಡನೆ ಒಡನಾಟ. ಊಟ ಮಾಡುವಾಗ ಮಾತ್ರ ವಿಶಾಲಾಕ್ಷಿಯ ಪ್ರಶಂಸೆ. ಇದೇ ದಿನಚರಿಯಲ್ಲಿ ವರುಷಗಳು ಉರುಳಿ ಹೋಗುತ್ತಿದ್ದವು. ವಿಶಾಲಾಕ್ಷಿಗೆ ದಿನಗಳುರುಳುತ್ತಿರುವುದೂ ತಿಳಿಯುತ್ತಿರಲಿಲ್ಲ. ಯಂತ್ರದಂತೆ ಕೆಲಸ ಮಾಡುತ್ತಿದ್ದಳು. ತನಗಾಗಿ ಐದು ನಿಮಿಷವೂ ಉಳಿಯುತ್ತಿರಲಿಲ್ಲ. ತಾನು ಯಾರು, ಏನು ಎನ್ನುವುದೇ ಮರೆತಂತಾಗಿ ಕಾಲೇಜು ಕೆಲಸ, ಮನೆ ಕೆಲಸ, ಮಕ್ಕಳು-ಮೊಮ್ಮಕ್ಕಳ ಉಪಚಾರ ಇಷ್ಟೇ ಅವಳದಾಗಿಬಿಟ್ಟಿತ್ತು.

ಆ ವರ್ಷ ರಾಯರ ಆರೋಗ್ಯ ಸರಿ ಇರಲಿಲ್ಲ. ಅದೇ ಸಮಯಕ್ಕೆ ಹಿರೀಮಗನ ಹೆಂಡತಿ ತಂದೆ ತೀರಿಕೊಂಡರೆಂದು ಆಕೆಯು ಮಕ್ಕಳೊಡನೆ ಬಂದಳು. ಜೊತೆಗೆ ಎರಡನೇ ಸೊಸೆಯೂ ಬಂದಳು. ವಿಶಾಲಾಕ್ಷಿಗೆ ಪರೀಕ್ಷೆ ಸಮಯದಲ್ಲಿ ಬಹಳಷ್ಟು ಕೆಲಸ. ಇದೀಗ ಅವಳು ಪ್ರಿನ್ಸಿಪಾಲಳಾಗಿದ್ದು ಹೆಚ್ಚು ಜವಾಬ್ದಾರಿ ಬಿದ್ದಿತು. ಈ ಮಧ್ಯೆ ರಾಯರಿಗೆ ಬಿಸಿನೀರು, ಕಾಫಿ, ಗಂಜಿ, ಮಾತ್ರೆ ಎಲ್ಲವನ್ನೂ ಸಮಯಕ್ಕೆ ಸರಿಯಾಗಿ ಕೊಡಬೇಕಾಗಿತ್ತು. ರಾಯರು ಏನು ಕೇಳಿದರೂ, ಮಗ-ಸೊಸೆಯಿಂದ, 'ಚಿಕ್ಕಮ್ಮಾ, ಇನ್ನೂ ಮಾತ್ರೆ ಕೊಟ್ಟಿಲ್ಲವಾ? ಗಂಜಿ ಬೇಗ ಮಾಡಿ. ಸ್ವಲ್ಪ ಶಾಖ ಕೊಡಬೇಕಂತೆ' ಹೀಗೆ ಹಲವಾರು ಆದೇಶಗಳು ಬರುತ್ತಿದ್ದವು. ಬರುವಾಗ ಅಪ್ಪನಿಗೆ ಎಳನೀರು ತರಲು ಮರೀಬೇಡಿ', ಎನ್ನುವ ಎಚ್ಚರಿಕೆ ಬೇರೆ. ವಿಶಾಲಾಕ್ಷಿ ಈ ಹತ್ತು-ಹನ್ನೆರಡು ವರ್ಷಗಳಲ್ಲಿ ತೀರ ವಯಸ್ಸಾದವಳಂತೆ ಕಾಣಿಸತೊಡಗಿದಳು.

ಅಪ್ಪನನ್ನು ನೋಡಲು ಬಂದ ಸುಮ, 'ಅಣ್ಣಾ, ನನ್ನ ಮಗಳಿಗೆ ಆ ಎಸ್ಟೇಟನಲ್ಲಿ ಹೈಸ್ಕೂಲು ಇಲ್ಲ. ಅವಳನ್ನೂ, ಕುಮಾರನನ್ನೂ ಇಲ್ಲೇ ಓದಲು ಬಿಡುತ್ತೇನೆ'' ಎಂದಳು. ''ಧಾರಾಳವಾಗಿ ಬಿಡಮ್ಮ. ವಿಶಾಲಾಕ್ಷಿ ಏನಾದರೂ ಪಾಠ ಹೇಳಿಕೊಡ್ತಾಳೆ. ನಾವಿರುವಾಗ ನೀನ್ಯಾಕೆ ಕಷ್ಟ ಪಡಬೇಕು'', ರಾಯರು ಸಲೀಸಾಗಿ ಹೇಳಿಬಿಟ್ಟರು. ಅಂದಿನಿಂದ, ರಾಯರ ಜೊತೆ ಆ ಎರಡು ಮಕ್ಕಳ ಸೇವೆ, ಊಟ-ಉಪಚಾರ, ಬಟ್ಟೆ ಬರೆ, ನೋಡಿಕೊಳ್ಳುವ ಸೌಭಾಗ್ಯವೂ ಅವಳದಾಯಿತು. ವರುಷ ಕಳೆದಂತೆ ಈ ಹೊರಗಿನ-ಒಳಗಿನ ಜವಾಬ್ದಾರಿ ಹೊತ್ತ ವಿಶಾಲಾಕ್ಷಿ ಸುಚ್ಚುಸೂರಾದಳು. ಮನಸ್ಸು ರೋಸಿತು. ಶರೀರ, ಮನಸ್ಸು ಎರಡಕ್ಕೂ ವಿಶ್ರಾಂತಿ ಬೇಕಾಯಿತು. ಶರೀರ, ಮನಸ್ಸು ಎರಡೂ ದುರ್ಬಲವಾಗಿ, ಕಾಲೇಜಿನಲ್ಲಿ ಮಹಡಿ ಮೆಟ್ಟಲಿಂದ ಇಳಿವಾಗ ಜಾರಿಬಿದ್ದು, ಕಾಲು ಉಳುಕಿತು. ಮನೆಯಲ್ಲಿ ಓಡಾಡುವುದೂ ಕಷ್ಟವಾಯಿತು. ಆಗಲೇ ಒಂದು ದಿನ ಸಂಜೆ, ಮನೆಗೆ ಬಂದಾಗ ರಾಯರು ಹೇಳಿದರು, ''ಸುಮ-ಅವಳ ಗಂಡ ಬರುತ್ತೇನೆಂದು ಫೋನ್ ಮಾಡಿದ್ದರು, ನಿನಗೆ ಕಾಲು ಉಳುಕಿದೆ. ಅಡಿಗೆ ಮಾಡಲು ಆಗುವುದಿಲ್ಲ ಎಂದೆ'' ಎಂದರು. ವಿಶಾಲಾಕ್ಷಿಗೆ ಕಣ್ಣಲ್ಲಿ ನೀರು ಬಂತು. 'ನಾಲ್ಕು ದಿನ ಅವಳು ಬಂದು ಅಡಿಗೆ ಮಾಡಬಾರದಿತ್ತೆ' ಎಂದಿತು ಅವಳ ಮನಸ್ಸು. ಮೊದಲಾಗಿದ್ದರೆ ತಾಯಿ-ತಂಗಿ ಬಂದು ಮಾಡುತ್ತಿದ್ದರು. ಈಗ ಅವರ್‍ಯಾರೂ ಬರುವುದೇ ಇಲ್ಲ. ಯಾರಿಗೂ ಕಾಣದಂತೆ ರೂಮಿಗೆ ಹೋಗಿ ಬಿಕ್ಕಿ ಬಿಕ್ಕಿ ಅತ್ತಳು.

ರಾಯರ ಆರೋಗ್ಯ ಇದೀಗ ತೀರ ಹದಗೆಟ್ಟಿತು. ರಾತ್ರಿಯೆಲ್ಲಾ ಎಬ್ಬಿಸಿ, ಬಿಸಿನೀರು, ಕಾಫಿ ಕೇಳುತ್ತಿದ್ದರು. ವಿಶಾಲಾಕ್ಷಿಗೆ ನಿದ್ದೆಯೇ ಇಲ್ಲ. ಇಷ್ಟಲ್ಲದೆ ಸಂಜೆ ವಾಕಿಂಗ್ ಕರೆದುಕೊಂಡು ಹೋಗುವಂತೆ ಪೀಡಿಸುತ್ತಿದ್ದರು. ಅವರ ಸೇವೆಗೆ ಸ್ವಲ್ಪ ಚ್ಯುತಿ ಬಂದರೂ, ತನ್ನನ್ನು ತಿರಸ್ಕರಿಸುತ್ತಿದ್ದಾಳೆ ಎಂಬ ಭಾವನೆ ಬರುತಿತ್ತು. ವಿಶಾಲಾಕ್ಷಿಗೆ ಈ ಜೀವನ ಸಾಕಾಗಿಹೋಗಿತ್ತು. ಆ ಮನೆಯಲ್ಲಿ ತನ್ನನ್ನು ಯಾರೂ ವಿಚಾರಿಸುವವರಿಲ್ಲ. ತಾನೊಬ್ಬ ಸೇವಕಿ ಎಂಬ ಭಾವನೆ ಬಂದಿತ್ತು.



ಕುರ್ಚಿಯ ಮೇಲೆ ಕುಳಿತ ವಿಶಾಲಾಕ್ಷಿ ಗತಕಾಲವನ್ನು ನೆನಸಿಕೊಳ್ಳುತ್ತಿದ್ದಳು. ಹಾಯಾಗಿದ್ದ ಆ ದಿನಗಳು ನೆನಪಿಗೆ ಬಂದವು. ಈವರೆಗೆ ಕಳೆದ ದಿನಗಳಲ್ಲಿ ಸಿಹಿ ಎಷ್ಟು ಕಹಿ ಎಷ್ಟು, ಸುಖವೆಷ್ಟು ದುಃಖವೆಷ್ಟು ಎಂದು ತೂಗಿದಾಗ ದುಃಖ ಹಾಗೂ ಕಹಿದಿನಗಳ ತಕ್ಕಡಿಯೇ ಭಾರವಾಗಿತ್ತು. ರಾಯರ ಸಂಪರ್ಕಕ್ಕೆ ಬರುವ ಮೊದಲಿನ ದಿನಗಳೇ ಹಾಯಾಗಿದ್ದವೆನಿಸಿತು. ಈಗಿನ ಜೀವನದೊಂದಿಗೆ ತೂಗಿ ನೋಡಿದಾಗ, ಆ ದಿನಗಳು ಯಾವ ಚಿಂತೆ, ಜವಾಬ್ದಾರಿ, ನೋವುಗಳಿಲ್ಲದ ದಿನಗಳಾಗಿದ್ದವು. ಒಂಟಿತನವೊಂದನ್ನು ಬಿಟ್ಟರೆ ಖಂಡಿತವಾಗಿಯೂ ತಾನು ಸುಖವಾಗಿದ್ದೆ ಎನಿಸಿತು. ಮನಸ್ಸು ಮಾಡಿದ್ದರೆ, ನೆಂಟರಿಷ್ಟರ ಮಗುವನ್ನು ತಂದು

ಸಾಕಿ, ಅವರ ಪ್ರೀತಿ ಗಳಿಸಿ, ಅವರೊಡನೆ ಸಂತೋಷವಾಗಿರಬಹುದಿತ್ತು. ಕೈ ತುಂಬ ಸಂಬಳ, ಬೇಕಾದಂಥ ಸೀರೆ. ದಿನಕ್ಕೊಂದು ಸೀರೆ ಉಟ್ಟು, ನಿಧಾನವಾಗಿ ಡ್ರೆಸ್ ಮಾಡಿಕೊಂಡು ಹಾಯಾಗಿ ಕಾಲೇಜಿಗೆ ಹೋಗುತ್ತಿದ್ದೆ. ಅಡಿಗೆ ಮಾಡಲು ಬೇಸರವೆನಿಸಿದರೆ ಹೋಟೆಲಿನಿಂದ ತಿಂಡಿ-ಊಟ, ಸಂಜೆ ಬಂದಾಗ, ಮನಸ್ಸು ಬಂದರೆ ಅಕ್ಕಪಕ್ಕದ ಹುಡುಗರಿಗೆ ಚಾಕ್ಲೇಟ್, ಬಿಸ್ಕತ್ತು ತಂದುಕೊಟ್ಟು, ಅವರೊಡನೆ ಮಾತುಕತೆ, ಗೆಳತಿಯರೊಡನೆ ಸಿನಿಮಾ, ಪಿಕ್‌ನಿಕ್, ಮದುವೆ,ಮುಂಜಿಗೆ ಭೇಟಿ ಇತ್ಯಾದಿ, ಜೊತೆಗೆ ಅಧ್ಯಾತ್ಮದ ಪುಸ್ತಕಗಳು, ಮಹಾತ್ಮರ ಜೀವನ ಚರಿತ್ರೆ ಶಾಂತಿ ನೀಡುತ್ತಿದ್ದವು.

ಆದರೆ ಈಗ... ತಾನೊಂದು ಕೂಪಕ್ಕೆ ಬಿದ್ದಂತಾಗಿದೆ. ವಿಶಾಲಾಕ್ಷಿಗೆ ತೀರ ಜಿಗುಪ್ಸೆಯಾಯಿತು. ಈ ಕೂಪದಿಂದ ಹೊರ ಹೋಗಬೇಕೆನಿಸಿತು, ಆದರೆ ಎಲ್ಲಿಗೆ? ಹೇಗೆ ಹೇಗೆ.... ಕಣ್ಣೀರು ಹನಿಯತೊಡಗಿತು.

ಪೋಸ್ಟ್‌ಮ್ಯಾನ್ ಮೂರು ಕವರ್‌ಗಳನ್ನು ಕೊಟ್ಟುಹೋದ.

ಮೊದಲನೆ ಪತ್ರ ಹಿರೀಮಗನದು. ಅವನು ಭಾರತಕ್ಕೇ ಹಿಂತಿರುಗುವುದಾಗಿ ಬರೆದು, ಮೇಲೆ ರೂಂಗಳನ್ನು ಕಟ್ಟಿಸುವಂತೆ ತಿಳಿಸಿದ್ದ. ಇನ್ನೊಂದು ಮಗಳದ್ದು. ಎಸ್ಟೇಟಿನಿಂದ ತುಂಬ ನಷ್ಟವಾಗಿದೆಯೆಂದೂ, ಸ್ವಲ್ಪ ಹಣ ಬೇಕೆಂದೂ ತಿಳಿಸಿದ್ದಳು. ಇನ್ನೊಂದು ಪತ್ರ ಹೃಷಿಕೇಶದಿಂದ ಬರೆದ ತನ್ನ ಚಿಕ್ಕಪ್ಪನದು. ಸೆಂಟ್ರಲ್‌ಗವರ್ನಮೆಂಟ್ ಕೆಲಸದಲ್ಲಿದ್ದ ಅವರು, ರಿಟೈರ್ ಆದ ಮೇಲೆ ಹೃಷಿಕೇಶದಲ್ಲಿ ನೆಲಸಿದ್ದರು. ತನ್ನನ್ನು ನೋಡಬಯಸಿ, ಬರುವಂತೆ ಬರೆದಿದ್ದರು.

ಪತ್ರ ಓದುತ್ತಿದ್ದಂತೆ ಕಣ್ಣೀರು ಧಾರಾಕಾರವಾಗಿ ಹರಿದು ಬಿಕ್ಕಿ ಬಿಕ್ಕಿ ಅತ್ತಳು. ತವರು ಮನೆಯವರೆಲ್ಲರೂ ನೆನಪಿಗೆ ಬಂದರು. ಈಗ ತನ್ನ ಪ್ರಶ್ನೆಗೆ ಉತ್ತರ ಸಿಕ್ಕಿತು ಎನಿಸಿತು.

'ನನ್ನನ್ನು ಪ್ರೀತಿಸುವವರಿಲ್ಲದ ಈ ಮನೆಯಲ್ಲಿ ಏಕಿರಬೇಕು! ತಂದೆಯ ಬಗ್ಗೆ ಮಕ್ಕಳಿಗೂ ಕರ್ತವ್ಯ ಇಲ್ಲವೇ? ಅವರು ಮೊದಲಿಂದ ಇದ್ದವರು, ನಾನು ಮಧ್ಯ ಬಂದವಳು. ಅವರೂ ಸ್ವಲ್ಪ ಜವಾಬ್ದಾರಿ ವಹಿಸಿಕೊಳ್ಳಲಿ.' ತನಗೂ ವಯಸ್ಸಾಯಿತು. ಇನ್ನು ಮೂರು-ನಾಲ್ಕು ವರ್ಷಕ್ಕೆ ರಿಟೈರ್ ಆಗುತ್ತೆ. ಇನ್ನಾದರೂ ಶಾಂತವಾಗಿ ಕಾಲ ಕಳೀಬೇಕೆನ್ನಿಸಿತು. ಮನಸ್ಸು ಏನೋ ಒಂದು ನಿರ್ಧಾರಕ್ಕೆ ಬಂತು.

ಹದಿನೈದು ದಿನಗಳು ಕಳೆಯುವುದರಲ್ಲಿ ಮಗ-ಮಗಳು ಬಂದಿಳಿದರು. ವಿಶಾಲಾಕ್ಷಿ ಚಿಕ್ಕಪ್ಪನ ಕಾಗದದ ವಿಷಯ ತಿಳಿಸಿದಳು. ರಾಯರು, ''ನಾಲ್ಕು ದಿನ ಹೋಗಿ ಬಾ'' ಎಂದರು. ವಾಲೆಂಟರಿ ರಿಟೈರ್‌ಮೆಂಟ್‌ಗೆ ಸಿದ್ಧತೆ ಮಾಡಿಕೊಂಡಳು. ಹೃಷಿಕೇಶಕ್ಕೆ ಸೀಟ್ ರಿಸರ್ವ್ ಮಾಡಿಸಿದಳು. ಬ್ಯಾಂಕ್ ಅಕೌಂಟ್ ಎಲ್ಲ ಕ್ಲೋಸ್ ಮಾಡಿದಳು. ಯಾರಿಗೂ ತಿಳಿಸಲಿಲ್ಲ. ತಾನು ಊರಿಗೆ ಹೋದನಂತರ ರಿಟೈರ್‌ಮೆಂಟ್ ವಿಷಯ ತಿಳಿಸುವ್ವಂತೆ ಸಹೋದ್ಯೋಗಿಗಳಿಗೆ ಹೇಳಿದಳು.

ರೈಲ್ವೇ ಸ್ಟೇಷನ್‌ವರೆಗೆ ಎಲ್ಲರೂ ಬೀಳ್ಕೊಡಲು ಬಂದರು. ''ಬೇಗ ಬನ್ನಿ ಚಿಕ್ಕಮ್ಮಾ'' ಎಂದರು ಮಗ, ಮಗಳು. ''ಅಜ್ಜೀ ಬೇಗ ಬನ್ನಿ'' ಎಂದವು ಮೊಮ್ಮಕ್ಕಳು, ರಾಯರೂ, ''ಬೇಗ ಬಂದ್ಬಿಡು'' ಎಂದರು. ''ನಿಮ್ಮ ತಂದೆಯನ್ನು ಚೆನ್ನಾಗಿ ನೋಡಿಕೊಳ್ಳಿ'' ಎಂದಳು ವಿಶಾಲಾಕ್ಷಿ. ಅಷ್ಟರಲ್ಲಿ ರೈಲು ಸೀಟಿ ಹೊಡೆದು ಚಲಿಸಿತು. ವಿಶಾಲಾಕ್ಷಿ ಎಲ್ಲ ಚಿಂತೆಯಿಂದ ಮುಕ್ತಳಾಗಿ ಶಾಂತಿಧಾಮದ ಕಡೆಗೆ ಹೊರಟಳು.





ಕೆ. ಶಾಂತಾ ವಿಟ್ಠಲ್

ವಿಶ್ವ ಭಾರತಿ – 25

# ಲು ಷುನ್ ರಚನೆಗಳು

ಹರಿತ ಬುದ್ಧಿ, ಪ್ರಚಂಡ ಸಾಮರ್ಥ್ಯ ಮತ್ತು ಸುಸೂಕ್ಷ್ಮ ಮನಸ್ಸಿನ ಒಟ್ಟು ಮೊತ್ತವೇ ಚೀನಾದ ಸಾಂಸ್ಕೃತಿಕ ಕ್ರಾಂತಿಯ ಮುಖ್ಯ ಸೇನಾನಿ ಲು ಷುನ್. 1911ರ ಕ್ರಾಂತಿಯ ಮುಂಚೂಣಿಯಲ್ಲಿದ್ದ ಲು ಷುನ್ ಕ್ರಾಂತಿ ತನ್ನ ಮೂಲಭೂತ ಆಶಯಗಳನ್ನು ಈಡೇರಿಸಿಕೊಳ್ಳುವಲ್ಲಿ ವಿಫಲವಾದಾಗ ಭ್ರಮನಿರಸನಗೊಂಡ. ಶಿಕ್ಷಣ ಖಾತೆಯಲ್ಲಿ ಸೇವೆಸಲ್ಲಿಸುತ್ತಲೇ ಚೀನೀ ಸಂಸ್ಕೃತಿಯ ಬೇರುಗಳನ್ನು ಹುಡುಕಲು ವಿಪುಲವಾಗಿ ಅಧ್ಯಯನ ಮಾಡಿದ. ಹೊಸ ಮಾರ್ಗ ಕಡೆಯಲು ತೊಳಲಾಡಿದ. ತುಳಿತಕ್ಕೊಳಗಾದ ಚೀನೀ ಜನತೆಯೇ ಲು ಷುನ್‌ನ ಬರೆವಣಿಗೆಯ ಕೇಂದ್ರ ವಸ್ತು. ಆಧುನಿಕ ಚೀನಾ ನಿರ್ಮಾಣಕ್ಕೆ ಕಾರಣವಾದ 1919 ಮೇ 4ರ ಚಳವಳಿಯ ಮುನ್ನಾ ವರ್ಷದಲ್ಲಿ ಲು ಷುನ್‌ನ ಮೊದಲ ಕತೆ 'ಹುಚ್ಚನ ದಿನಚರಿ' ಪ್ರಕಟವಾಯಿತು. ಆತನಿಗೆ 20ನೇ ಶತಮಾನದ ಶ್ರೇಷ್ಠ ಕ್ರಾಂತಿಕಾರಿ ಲೇಖಕರಲ್ಲಿ ಒಂದು ಮಹತ್ವದ ಸ್ಥಾನ ಗಳಿಸಿಕೊಟ್ಟಿತು. ಹಳೆಯ ಕಟ್ಟುಕಥೆ, ಪುರಾಣ ಕಥೆ, ಪುಟ್ಟ ಘಟನೆಗಳನ್ನೂ ಕಥೆ ಮಾಡಿ ಊಳಿಗಮಾನ್ಯ ಶಕ್ತಿಗಳನ್ನು ಚುಚ್ಚುವ ಅದ್ಭುತ ಪ್ರತಿಭೆ ಹೊಂದಿದ್ದ ಲು ಷುನ್‌ನ ಒಂದು ಪುಟ್ಟ ಕಥೆ ಮತ್ತು ಮೂರು ಗದ್ಯ ಕವಿತೆಗಳನ್ನಿಲ್ಲಿ ಕೊಡುತ್ತಿದ್ದೇವೆ. ಇದನ್ನು ಅಕ್ಷರ ಪ್ರಕಾಶನದ 'ಲು ಷುನ್ ಕಥೆ'ಗಳು (1985, ಸಂ. ಜಿ.ಪಿ. ಬಸವರಾಜು) ಪುಸ್ತಕದಿಂದ ಆಯಲಾಗಿದೆ.

# ಒಂದು ಘಟನೆ

ನಾನು ಹಳ್ಳಿಯಿಂದ ರಾಜಧಾನಿಗೆ ಬಂದು ಆರು ವರ್ಷಗಳು ಜಾರಿವೆ. ಈ ಅವಧಿಯಲ್ಲಿ ಸಾಕಷ್ಟು ರಾಜ್ಯ ವ್ಯವಹಾರಗಳನ್ನು ನೋಡಿದ್ದೇನೆ, ಕಂಡಿದ್ದೇನೆ; ಅವು ಯಾವುವೂ ನನ್ನ ಮೇಲೆ ಅಚ್ಚೊತ್ತಲಿಲ್ಲ. ಅವು ಬೀರಿದ ಪ್ರಭಾವ ವೇನೆಂದು ಯಾರಾದರೂ ಕೇಳಿದರೆ, ನಾನು ನೇರವಾಗಿ ಹೇಳುವುದು ಇಷ್ಟೆ: ಅವು ನನ್ನ ಸಹನೆಯನ್ನೆಲ್ಲ ಹಾಳು ಮಾಡಿ, ಮನುಷ್ಯ ಸಹವಾಸವನ್ನೇ ದ್ವೇಷಿಸುವ ಹಾಗೆ ಮಾಡಿದವು.

ಹೀಗಿದ್ದರೂ, ಒಂದು ಘಟನೆ ಮಾತ್ರ ಮಹತ್ವದ್ದಾಗಿ ಕಾಣಿಸಿದೆ. ಅದು ನನ್ನ ವ್ಯಗ್ರ ಮನಸ್ಸನ್ನು ಶಮನಗೊಳಿಸಿದೆ. ಈಗಲೂ ಅದನ್ನು ಮರೆಯಲಾರೆ.

1917ರ ಚಳಿಗಾಲ; ಒಂದು ಬೆಳಿಗ್ಗೆ ಉತ್ತರದ ತೀಕ್ಷ್ಣ ಗಾಳಿಯ ಕೊರೆತ. ಹೊಟ್ಟೆಪಾಡು-ಕೊರೆತದ ಚಳಿಯಲ್ಲೂ ಹೊರ ಹೊರಡಲೇಬೇಕಾಗಿತ್ತು. ಬೀದಿಯಲ್ಲಿ ಒಂದು ನರಪ್ರಾಣಿಯ ಸುಳಿವೂ ಇರಲಿಲ್ಲ. ಎಸ್. ಗೇಟಿಗೆ ಹೋಗಲು ಒಂದು ರಿಕ್ಷಾ ಹಿಡಿಯಲು ತುಂಬಾ ಕಷ್ಟವಾಯಿತು. ಅದೇ ತಾನೆ ಸ್ವಲ್ಪ ಗಾಳಿಯ ಹೊಡತ ನಿಂತಿತ್ತು. ರಸ್ತೆಯ ಮೇಲಿನ ಧೂಳೆಲ್ಲ ತೂರಿ ಹೋಗಿ ಸಾಪಾಗಿತ್ತು. ರಿಕ್ಷಾವಾಲ ಓಟ ಚುರುಕುಗೊಳಿಸಿದ. ಇನ್ನೇನು ಎಸ್. ಗೇಟು ಮುಟ್ಟಬೇಕು, ಅಷ್ಟರಲ್ಲಿ ರಸ್ತೆ ದಾಟುತ್ತಿದ್ದ ಒಂದು ವ್ಯಕ್ತಿ ನಮ್ಮ ರಿಕ್ಷಾಕ್ಕೆ ಸಿಕ್ಕಿಕೊಂಡು ಕೆಳಕ್ಕೆ ಉರುಳಿತು.

ಅದು ಒಬ್ಬ ಹೆಂಗಸು. ಅಲ್ಲಲ್ಲಿ ನರೆತ ತಲೆ, ಬಟ್ಟೆ ಚಿಂದಿ ಚಿಂದಿ. ಯಾವ ಸೂಚನೆಯೂ ಕೊಡದ ಹಾಗೆ ಆಕೆ, ಫುಟ್‌ಪಾತಿನಿಂದ ಥಕ್ಕನೆ ರಿಕ್ಷಾದ ಮುಂದೆ ಅಡ್ಡ ತಿರುಗಿದ್ದಳು. ರಿಕ್ಷಾದವ ಪಕ್ಕಕ್ಕೆ ಸರಿದರೂ, ಗುಂಡಿಯಿಲ್ಲದೆ ಗಾಳಿಯಲ್ಲಿ ತೂರಾಡುತ್ತಿದ್ದ ಅವಳ ಹರಕಲು ಜಾಕೀಟು ಕಬ್ಬಿಣದ ಪಟ್ಟಿಗೆ ಸಿಕ್ಕಿಕೊಂಡಿತ್ತು. ಅದೃಷ್ಟಕ್ಕೆ ರಿಕ್ಷಾವಾಲಾ ತಕ್ಷಣ ಹಿಂದಕ್ಕೆಳೆದ, ಇಲ್ಲದಿದ್ದರೆ ಖಂಡಿತ ಜೋರಾಗಿ ಏಟು ಬಿದ್ದು ಗಾಯಗೊಳ್ಳು ತ್ತಿದ್ದಳು.

ಅವಳು ನೆಲದ ಮೇಲೆ ಬಿದ್ದಿದ್ದಳು. ರಿಕ್ಷಾದವ ಅಲ್ಲೇ ನಿಂತ. ಆ ಮುದುಕಿಗೆ ಪೆಟ್ಟಾಯಿತೆಂದು ನನಗನಿಸಲಿಲ್ಲ. ಅಲ್ಲದೆ ಏನು ನಡೆಯಿತೆಂಬುದಕ್ಕೆ ಸಾಕ್ಷಿಗಳೂ ಇರಲಿಲ್ಲ. ಅವನನ್ನು ಕಷ್ಟಕ್ಕೆ ತಳ್ಳುತ್ತಿದ್ದ, ನನಗೂ ತಡಮಾಡಬಹುದಾಗಿದ್ದ ಈ ಅವಾಂತರ ದಿಂದ ಬೇಸರವಾಯಿತು.

''ಆಯ್ತು... ನಡಿ ಹೋಗುವಾ'' ಎಂದೆ.

ಆದರೆ ಅವನು ಗಮನ ಕೊಡಲಿಲ್ಲ. ಬಹುಶಃ ನನ್ನ ಮಾತು ಅವನಿಗೆ ಕೇಳಿಸಿರಲಿಕ್ಕಿಲ್ಲ. ರಿಕ್ಷಾ ಕೆಳಗಿಳಿಸಿ, ಬಿದ್ದವಳನ್ನು ನಿಧಾನವಾಗಿ ಕೈ ಹಿಡಿದು ಎಬ್ಬಿಸಿದ. ಕೈಗೊರಗಿಸಿಕೊಂಡು ಕೇಳಿದ: ''ಏನೂ ಆಗಿಲ್ಲ ತಾನೆ?''

''ನೋವಾಗಿದೆ.''

ಅವಳೆಷ್ಟು ಮೆಲ್ಲಗೆ ಬಿದ್ದಳೆಂದು ನೋಡಿದ್ದೆ. ಅವಳಿಗೆ ಪೆಟ್ಟಾಗುವುದು ಖಂಡಿತ ಸಾಧ್ಯವಿರ ಲಿಲ್ಲ. ಅವಳು ನಾಟಕವಾಡುತ್ತಿರಲೇಬೇಕು- ಅದು ಅಸಹ್ಯವಾಗಿತ್ತು. ರಿಕ್ಷಾವಾಲ ಹೋಗುತ್ತಿದ್ದ ಪೀಡೆಯನ್ನು ಮೈಮೇಲೆ ಹಾಕಿಕೊಂಡಿದ್ದ. ತಪ್ಪಿಸಿ ಕೊಳ್ಳಲು ತಾನೇ ದಾರಿ ಹುಡುಕಿಕೊಳ್ಳಬೇಕಾಗಿತ್ತು.

ಅವಳು ಪೆಟ್ಟಾಗಿದೆ ಎಂದಕೂಡಲೇ ರಿಕ್ಷಾ ವಾಲ ಒಂದು ಕ್ಷಣವೂ ಹಿಂದೆಗೆಯಲಿಲ್ಲ. ಅವಳ ತೋಳನ್ನು ಹಿಡಿದುಕೊಂಡೇ ಮೆಲ್ಲಗೆ ನಡೆಸಿದ. ನಾನು ಚಕಿತನಾದೆ. ಮುಂದೆ ನೋಡಿದರೆ ಪೊಲೀಸ್ ಠಾಣೆ. ವಿಪರೀತ ಗಾಳಿ, ಹೊರಗೆ ಯಾರೊಬ್ಬರ ಸುಳಿವೂ ಇಲ್ಲ; ರಿಕ್ಷಾದವ ಹೆಂಗಸನ್ನು ಗೇಟಿನ ಕಡೆಗೆ ಕರೆದೊಯ್ದ.

ಇದ್ದಕ್ಕಿದ್ದಂತೆ ನನಗೊಂದು ವಿಚಿತ್ರ ಅನಿಸಿಕೆ ಯುಂಟಾಯಿತು. ದೂರ ದೂರ ಹೋಗುತ್ತಿದ್ದ ಅವನ ಧೂಳು ತುಂಬಿದ ಆಕೃತಿ ಆ ಕ್ಷಣದಲ್ಲೇ ದೊಡ್ಡದಾಗಿ ಕಂಡಿತು. ವಾಸ್ತವವಾಗಿ ನಾನು

ತಲೆಯೆತ್ತಿ ನೋಡಬೇಕಾಗುವಷ್ಟು ಮಟ್ಟಿಗೆ. ಅವನು ಮುಂದೆ ಮುಂದೆ ಹೋದಂತೆ ಆಕೃತಿಯೂ ದೊಡ್ಡದಾಗುತ್ತಹೋಯಿತು. ಅದೇ ಸಮಯದಲ್ಲೇ, ಅವನು ನಿಧಾನವಾಗಿ ನನ್ನ ಮೇಲೆ ಒಂದು ರೀತಿಯ ಒತ್ತಡ ಹೇರುತ್ತಿರುವಂತೆ ಅನಿಸಿತು. ತುಪ್ಪಟದ ಅಂಚಿನ ಗೌನಿನ ಒಳಗೆ ಹುದುಗಿದ್ದ ಅಲ್ಪನಾದ ನನ್ನನ್ನು ನಿರ್ಬಲಗೊಳಿಸುವಂತೆ ಕಂಡಿತು.

ನಾನು ನಿಶ್ಚಲನಾಗಿ ಕುಳಿತಿದ್ದಂತೆ ನನ್ನ ಶಕ್ತಿಯೆಲ್ಲ ಉಡುಗಿದಂತೆ ಭಾಸವಾಯಿತು. ಖಾಲಿ ಮನಸ್ಸು. ಪೊಲೀಸ್ ಪೇದೆಯೊಬ್ಬ ಹೊರ ಬಂದ. ರಿಕ್ಷಾದಿಂದ ಕೆಳಗಿಳಿದ.



# ನಾಯಿಯ ಪ್ರತ್ಯುತ್ತರ

ನನಗೊಂದು ಕನಸು : ಇಕ್ಕಟ್ಟಾದ ಓಣಿಯೊಂದರಲ್ಲಿ ಭಿಕಾರಿಯಂತೆ ನಡೆಯುತ್ತಿದ್ದೆ. ಬಟ್ಟೆಗಳೆಲ್ಲ ಚಿಂದಿಯಾಗಿದ್ದವು.

ಹಿಂದಿನಿಂದ ಒಂದು ನಾಯಿ ಬಗುಳತೊಡಗಿತು.

ತಿರಸ್ಕಾರದಿಂದ ಹಿಂದಿರುಗಿ ನೋಡಿ ಅರಚಿದೆ: "ಹೇ! ಬಾಯ್ಮುಚ್ಚು. ಶ್ರೀಮಂತರನ್ನು ಕಂಡರೆ ಬಾಲವಾಡಿಸ್ತಿ, ಬಡವರನ್ನು ಕಂಡರೆ ಬೊಗಳಿ ಬೆದರಿಸ್ತೀ"

ಅದು ವ್ಯಂಗ್ಯವಾಗಿ ನಕ್ಕಿತು.

"ಕ್ಷಮಿಸು", ಅದೆಂದಿತು, "ನಾವು ಮನುಷ್ಯರಷ್ಟು ಒಳ್ಳೆಯವರಲ್ಲ".

"ಏನೆಂದೆ?"

ತೀರಾ ಆಘಾತಗೊಂಡೆ, ಇದೊಂದು ಭಾರೀ ಅಪಮಾನ ಎಂದೆನಿಸಿತು.

"ನನ್ಗೆ ಹೇಳ್ಕೊಳ್ಳೋಕೆ ನಾಚ್ಕೆ ಆಗುತ್ತೆ. ಆದ್ರೂ, ಕೇಳು, ಇನ್ನೂ ನನಗೆ ತಾಮ್ರ ಮತ್ತು ಬೆಳ್ಳಿಯ ನಡುವಣ ವ್ಯತ್ಯಾಸ ತಿಳಿಯೋಲ್ಲ. ರೇಷ್ಮೆ ಮತ್ತು ಹತ್ತಿ ಬಟ್ಟೆಯ ನಡುವಣ, ಅಧಿಕಾರಿ ಮತ್ತು ಶ್ರೀಸಾಮಾನ್ಯನ, ಯಜಮಾನ ಮತ್ತು ಗುಲಾಮನ ನಡುವಣ ವ್ಯತ್ಯಾಸ..."

ಹಿಂದಿರುಗಿ ನಾನು ಓಡಿದೆ.

"ಒಂದು ಕ್ಷಣ ನಿಲ್ಲು! ಇನ್ನೂ ಸ್ವಲ್ಪ ಮಾತಾಡೋಣ", ಹಿಂದಿನಿಂದ ಅದು ಗಟ್ಟಿಯಾಗಿ ಕೂಗಿ ನನ್ನನ್ನು ನಿಲ್ಲಲು ಒತ್ತಾಯಿಸಿತು.

ನಾನು ಓಡಿದೆ. ಸಾಧ್ಯವಾದಷ್ಟೂ ವೇಗವಾಗಿ, ಸೀದಾ ಕನಸನ್ನು ಭೇದಿಸಿಕೊಂಡು ಹೊರಬರುವವರೆಗೆ ಓಡಿದೆ. ಎಚ್ಚರವಾದಾಗ ಹಾಸಿಗೆಯಲ್ಲಿದ್ದೆ.

ಪೇದೆ ನನ್ನ ಸಮೀಪ ಬಂದು, "ಬೇರೆ ರಿಕ್ಷಾ ಹಿಡಿಯಿರಿ. ಅವನು ಇದನ್ನು ಎಳೆಯುವಂತಿಲ್ಲ" ಎಂದ.

ಯೋಚಿಸಿದೆ, ಕೋಟಿನ ಜೇಬಿನಿಂದ ಕೈತುಂಬ ಚಿಲ್ಲರೆಯನ್ನು ತೆಗೆದು ಪೇದೆಗೆ ಕೊಟ್ಟು, "ದಯವಿಟ್ಟು ಇದನ್ನು ಆತನಿಗೆ ಕೊಡಿ" ಎಂದೆ.

ಗಾಳಿ ಪೂರ ನಿಂತಿತ್ತು. ರಸ್ತೆ ಇನ್ನೂ ನಿಶ್ಶಬ್ದವಾಗಿತ್ತು. ಯೋಚಿಸುತ್ತ ನಡೆದೆ. ಆದರೆ ನನ್ನ ಬಗ್ಗೆ ಯೋಚಿಸಲು ಹೆದರುತ್ತಿದ್ದೆ. ಆವರೆಗೆ ನಡೆದುದು ಹಾಗಿರಲಿ, ನಾನು ಚಿಲ್ಲರೆ ಕೊಟ್ಟುದುದರ ಅರ್ಥವೇನು? ಅದೇನು ಪುರಸ್ಕಾರವೇ? ರಿಕ್ಷಾದವನ ಮೇಲೆ ತೀರ್ಪು ನೀಡಲು ನಾನು ಯಾರು? ನನಗೆ ನಾನೇ ಉತ್ತರ ಕೊಡಲಾರದವನಾದೆ.

ಇವತ್ತಿಗೂ ಇದು ನನ್ನ ನೆನಪಲ್ಲಿ ಹಸಿರಾಗಿದೆ. ಆಗಾಗ ಇದು ನನ್ನನ್ನು ದುಃಖಿಯಾಗಿಸುತ್ತದೆ; ನನ್ನ ಬಗ್ಗೆ ನಾನೇ ಆಲೋಚಿಸುವಂತೆ ಮಾಡುತ್ತದೆ. ಆಗಿನ ಸೈನ್ಯ ಮತ್ತು ರಾಜಕೀಯ ವಿಚಾರಗಳನ್ನೆಲ್ಲ ನಾನು ಸಂಪೂರ್ಣವಾಗಿ ಮರೆತಿದ್ದೇನೆ ಚಿಕ್ಕವನಿದ್ದಾಗ ಓದಿದ ಕಾವ್ಯಗಳನ್ನು ಮರೆತುಬಿಟ್ಟಿರುವ ಹಾಗೆ. ಈ ಘಟನೆ ಮಾತ್ರ ನಾಚಿಕೆಯನ್ನು ಕಲಿಸುತ್ತ, ಪರಿವರ್ತನೆಗೊಳ್ಳಲು ಒತ್ತಾಯಿಸುತ್ತ ಮತ್ತು ಹೊಸ ಆಸೆ ಹಾಗೂ ಧೈರ್ಯಗಳನ್ನು ತುಂಬುತ್ತಾ ನಿಜ ಜೀವನದ್ದಕ್ಕಿಂತ ಹೆಚ್ಚು ಸ್ಪಷ್ಟವಾಗಿ, ಮತ್ತೆ ಮತ್ತೆ ಮನಸ್ಸಿಗೆ ಬರುತ್ತಿರುತ್ತದೆ. ಹೊಸ ಭರವಸೆ, ಧೈರ್ಯ ಕೊಡುತ್ತದೆ.

**ಕನ್ನಡಕ್ಕೆ: ಎಂ. ಬಿ. ನಟರಾಜ್**

---

# ಭಿಕ್ಷುಕರು

ಚೂರುಚೂರಾಗಿ ಬೀಳುತ್ತಿರುವ ಎತ್ತರ ಗೋಡೆಯ ಉದ್ದಕ್ಕೂ ಪ್ರಯಾಸದಿಂದ, ಧೂಳಿನಲ್ಲಿ ನಡೆಯುತ್ತಿದ್ದೇನೆ. ಇತರ ಅನೇಕರು ಒಂಟಿಯಾಗಿ ನಡೆಯುತ್ತಿದ್ದಾರೆ. ನಸುಗಾಳಿ ಏಳುತ್ತದೆ; ಗೋಡೆಯ ಮೇಲೆ ಎತ್ತರದ ಮರದ ಕೊಂಬೆಗಳು ನನ್ನ ತಲೆಯ ಮೇಲೆ ತೂಗುತ್ತಿವೆ. ಅವುಗಳ ಎಲೆಗಳು ಇನ್ನೂ ಬಾಡಿಲ್ಲ.

ನಸುಗಾಳಿ ಏಳುತ್ತದೆ; ಧೂಳು ಎಲ್ಲೆಡೆಯೂ ತುಂಬಿದೆ.

ಒಂದು ಮಗು ನನ್ನ ಮುಂದೆ ಕೈಯೊಡ್ಡಿ ನಿಲ್ಲುತ್ತದೆ. ಅದರ ಮೈಮೇಲೆ ತೇಪೆಯ ಬಟ್ಟೆ. ಅಸುಖಿಯಾಗೇನೂ ಕಾಣೋಲ್ಲ; ಆದ್ರೂ, ತೀರಾ ದೈನ್ಯ ತೋರಿಸಲು ನನ್ನ ದಾರಿ ಅಡ್ಡಗಟ್ಟುತ್ತೆ; ನನ್ನ ಹಿಂದೆ ಬರ್ತಾ ಗೋಗರೆಯುತ್ತೆ.

ಅದರ ಧ್ವನಿ, ವರ್ತನೆ ನನಗೆ ಇಷ್ಟ ಆಗೋಲ್ಲ. ಆ ಮಗುವಿನಲ್ಲಿ ದುಃಖ ಇಲ್ಲ ಅನ್ಸಿ, ಇದೊಂದು ಕಪಟ ನಾಟಕದಂತೆ ಕಂಡು ಕಟುವಾಗಿ ದ್ವೇಷಿಸ್ತೇನೆ. ಗೋಗರೀತಾ ಅದು ನನ್ನ ಬೆನ್ ಹತ್ತಿರೋ ಕ್ರಮಾನ ನಾನು ಆಕ್ಷೇಪಿಸ್ತೀನಿ.

ನಾನು ನಡೀತಾ ಹೋಗ್ತೀನಿ. ಇತರ ಅನೇಕರು ಏಕಾಂಗಿಯಾಗಿ ನಡೀತಾ ಇರ್ತಾರೆ. ನಸುಗಾಳಿ ಏಳುತ್ತೆ; ಧೂಳು ಎಲ್ಲೆಡೆ ತುಂಬಿದೆ.



ಒಂದು ಮಗು ನನ್ನ ಮುಂದೆ ಕೈಯೊಡ್ಡಿ ನಿಲ್ಲುತ್ತೆ. ಅದರ ಮೈ ಮೇಲೆ ತೇಪೆ ಬಟ್ಟೆ ಅಸುಖಿಯಾಗೇನೂ ಕಾಣೋಲ್ಲ. ಆದ್ರೆ ಮೂಕಿಯಾಗಿದೆ. ಮೂಕಾಭಿನಯದಲ್ಲಿ ಅದು ನನ್ಮುಂದ ಕೈಗಳನ್ನು ಚಾಚುತ್ತೆ. ಮಗುವಿನ ಈ ಮೂಕಾಭಿನಯವನ್ನು ತೀವ್ರವಾಗಿ ದ್ವೇಷಿಸ್ತೇನೆ. ಜೊತೆಗೆ ಅದು ಮೂಕವಲ್ಲದೇನೂ ಇರಬಹುದು; ಇದು ಕೇವಲ ಅದರ ಭಿಕ್ಷೆ ಎತ್ತೋ ರೀತಿ ಇರ್ಬೋದು.

ಅದಕ್ಕೆ ನಾನು ಭಿಕ್ಷೆ ಕೊಡೋಲ್ಲ. ಕೊಡೋ ಇಷ್ಟಾನೂ ಇಲ್ಲ. ಭಿಕ್ಷೆ ಕೊಡೋರಿಗಿಂತ ನಾನು ಮೇಲ ನಿಲ್ತೀನಿ. ಆ ಮಗೂ ಬಗ್ಗೆ ನನ್ನಲ್ಲಿರೋದು ಕೇವಲ ದ್ವೇಷ, ಅನುಮಾನ, ಹೇಸಿಕೆ.

ಕುಸಿದು ಬಿದ್ದ ಮಣ್ಣಿನ ಗೋಡೆಯ ಉದ್ದಕ್ಕೂ ನಡೀತಾ ಇದ್ದೇನೆ. ಮುರಿದ ಇಟ್ಟಿಗೆಗಳನ್ನು ಸಂದಿನಲ್ಲಿ ಜೋಡಿಸಲಾಗಿದೆ. ಗೋಡೆಯ ಆಚೆಗೆ ಏನೂ ಇಲ್ಲ. ಶರತ್‌ನ ಚಳಿಗಾಳಿಯನ್ನು ನನ್ನ ಪದರು ಗೌನಿನ ಮೂಲಕ ಕಳಿಸುತ್ತ ನಸುಗಾಳಿ ಏಳುತ್ತೆ; ಧೂಳು ಎಲ್ಲೆಡೆ ತುಂಬಿದೆ.

ಭಿಕ್ಷೆ ಬೇಡಲು ನಾನು ಯಾವ ಕ್ರಮ ಅನುಸರಿಸಬೇಕು ಅಂತ ಆಶ್ಚರ್ಯಪಡ್ತೀನಿ. ಯಾವ ಧ್ವನೀಲಿ ಮಾತಾಡಬೇಕು? ಮೂಕ ಅಂತ ನಟಿಸೋದಾದ್ರೆ, ಎಂಥ ಮೂಕಾಭಿನಯ ಮಾಡ್ಬೇಕು?...

ಇತರ ಅನೇಕರು ಒಂಟಿಯಾಗಿ ನಡೀತಾ ಇದಾರೆ.

ನನಗೆ ಭಿಕ್ಷೆ ಸಿಗೋಲ್ಲ; ಭಿಕ್ಷೆ ಕೊಡೋ ಇಚ್ಛೇನೂ ಯಾರೂ ತೋರ್ಸಲ್ಲ. ನನಗೆ ಸಿಗೋದು ಭಿಕ್ಷೆ ನೀಡೋರನ್ನ ಮೀರಿ ನಿಂತವರ ದ್ವೇಷ, ಅನುಮಾನ, ಹೇಸಿಕೆ.

ಮೌನವಾಗಿ, ಜಡವಾಗಿ ಬೇಡಬೇಕು... ಕೊನೇ ಪಕ್ಷ ನಾನು ಶೂನ್ಯವನ್ನಾದರೂ ಪಡೆದುಕೊಳ್ಳಬೇಕು.

ನಸುಗಾಳಿ ಏಳುತ್ತದೆ; ಧೂಳು ಎಲ್ಲೆಡೆ ತುಂಬಿದೆ. ಇತರ ಅನೇಕರು ಒಂಟಿಯಾಗಿ ನಡೀತಿದಾರೆ.

ಧೂಳು, ಧೂಳು... ಧೂಳು...

## ಸೇಡು

ಅವನು ತನ್ನನ್ನು ದೇವಪುತ್ರ, ಯಹೂದಿಗಳ ರಾಜ ಅಂತ ಅಂದುಕೊಳ್ಳುವುದರಿಂದ ಅವನನ್ನು ಶಿಲುಬೆಗೇರಿಸಬೇಕು.

ಸೈನಿಕರು ಅವನಿಗೆ ಕಡುಗೆಂಪು ಬಣ್ಣದ ಗೌನು ತೊಡಿಸುತ್ತಾರೆ. ಮುಳ್ಳಿನ ಕಿರೀಟವನ್ನು ಧರಿಸುವಂತೆ ಒತ್ತಾಯಿಸುತ್ತಾರೆ; ಸಂತೋಷವಾಗಿರೆಂದು ಹಾರೈಸುತ್ತಾರೆ. ನಂತರ ಅವನ ತಲೆಗೆ ಸಲಾಕೆಯಿಂದ ಹೊಡೀತಾರೆ, ಅವನ ಮೇಲೆ ಉಗೀತಾರೆ; ಅವನ ಮುಂದೆ ಮಂಡಿಯೂರುತಾರೆ. ಆ ಮೇಲೆ ಅವನನ್ನು ಅಣಕಿಸುತ್ತಾರೆ; ಅವನ ಕಡುಗೆಂಪು ಗೌನನ್ನು ಕಿತ್ತು ಹಾಕ್ತಾರೆ ಮತ್ತು ಮೊದಲಿನಂತೆ ತನ್ನ ಬಟ್ಟೆಗಳನ್ನು ಹಾಕ್ಕೊಳ್ಳಲು ಅವನಿಗೆ ಅವಕಾಶ ಕೊಡ್ತಾರೆ.

ನೋಡಿ, ಅವರು ಹೇಗೆ ಅವನ ತಲೆಗೆ ಹೊಡಿದಿದಾರೆ, ಹೇಗೆ ಉಗುಳಿದಾರೆ, ಹೇಗೆ ಅವನ ಮುಂದೆ ಮಂಡಿಯೂರಿದಾರೆ... ಅವನು ಗೋಲರಸ ಸೇರಿಸಿದ ಮದ್ಯವನ್ನು ಕುಡಿಯುವುದಿಲ್ಲ; ಯಹೂದಿಗಳು ತಮ್ಮ ದೇವಪುತ್ರನನ್ನು ಸತ್ಕರಿಸುವುದನ್ನು ಸ್ವೀಕರಿಸಲು, ಅವನು ಸ್ಥಿಮಿತದಲ್ಲಿರಲು ಇಷ್ಟಪಡುತ್ತಾನೆ. ಅವರ ಭವಿಷ್ಯದ ಬಗ್ಗೆ ಅನುಕಂಪ ತೋರಲು ಅವರ ಸದ್ಯದ ಸ್ಥಿತಿಯನ್ನು ದ್ವೇಷಿಸಲು ಅವನು ಹಂಬಲಿಸುತ್ತಾನೆ.

ಸುತ್ತೆಲ್ಲ ಇರುವುದು ದ್ವೇಷ, ಅಸಹ್ಯ, ಶೋಚನೀಯ.

ಸುತ್ತಿಗೆಯಿಂದ ಹೊಡೆಯುವುದು ಕೇಳಿಸುತ್ತಿದೆ. ಮೊಳೆಗಳು ಅವನ ಅಂಗೈಯನ್ನು ಭೇದಿಸುತ್ತಿವೆ.

ಆದರೆ ಈ ಕರುಣಾಜನಕ ಪ್ರಾಣಿಗಳು ತಮ್ಮ ದೇವಪುತ್ರನನ್ನು ಶಿಲುಬೆಗೇರಿಸುತ್ತಿರುವ ಸತ್ಯ ಅವನನ್ನು ಹೆಚ್ಚು ನೋಯಿಸುವುದಿಲ್ಲ. ಸುತ್ತಿಗೆಯಿಂದ ಹೊಡೆಯುವುದು ಕೇಳಿಸುತ್ತಿದೆ, ನೋವು ನೆಣದ ಮೂಲಕ ಚಿಮ್ಮುವ ಹಾಗೆ ಮೊಳೆ ಮುರಿಯುತ್ತಾ, ಮೊಳೆಗಳು ಅವನ ಅಂಗಾಲುಗಳನ್ನು ಭೇದಿಸುತ್ತಿವೆ. ಆದರೆ ಜುಗುಪ್ಸೆ ಹುಟ್ಟಿಸುವ ಈ ಪ್ರಾಣಿಗಳು ತಮ್ಮ ದೇವಪುತ್ರನನ್ನು ಶಿಲುಬೆಗೇರಿಸುತ್ತಿರುವ ಸತ್ಯ ನೋವಿನಲ್ಲೂ ಅವನಿಗೆ ನೆಮ್ಮದಿಯನ್ನು ತಂದಿದೆ.

ಶಿಲುಬೆಯನ್ನು ಮೇಲೇರಿಸಿದ್ದಾರೆ. ಅವನು ಮಧ್ಯದಲ್ಲಿಯೇ ನೇತಾಡುತ್ತಿದ್ದಾನೆ.

ಅವನು ಗೋಲರಸ ಬೆರಸಿದ ಮದ್ಯವನ್ನು ಕುಡಿದಿಲ್ಲ; ಯಹೂದಿಗಳು ತಮ್ಮ ದೇವಪುತ್ರನನ್ನು ಸತ್ಕರಿಸುವುದನ್ನು ಆಸ್ವಾದಿಸಲು ಅವನು ಸ್ಥಿಮಿತದಲ್ಲಿರಲು ಇಷ್ಟಪಡುತ್ತಾನೆ. ಅವರ ಭವಿಷ್ಯದ ಬಗ್ಗೆ ಅನುಕಂಪ ತೋರಲು, ಅವರ ಸದ್ಯದ ಸ್ಥಿತಿಯನ್ನು ದ್ವೇಷಿಸಲು ಅವನು ಹಂಬಲಿಸುತ್ತಾನೆ.

ದಾರಿಹೋಕರೆಲ್ಲ ಅವನನ್ನು ಅವಮಾನಿಸುತ್ತಾರೆ, ಹೀಯಾ ಳಿಸುತ್ತಾರೆ. ಮುಖ್ಯ ಪಾದ್ರಿಗಳು, ಯಹೂದಿ ಶಾಸ್ತ್ರಜ್ಞರು ಸಹ ಹೀಯಾಳಿಸುತ್ತಾರೆ, ಅವನ ಜೊತೆ ಶಿಲುಬೆಗೇರುತ್ತಿರುವ ಇಬ್ಬರು ಕಳ್ಳರೂ ಅವನನ್ನು ನೋಡಿ ನಗುತ್ತಾರೆ.

ಅವನ ಜೊತೆ ಶಿಲುಬೆಗೇರುತ್ತಿರುವ ಅವರೂ...

ಸುತ್ತೆಲ್ಲ ಇರುವುದು ದ್ವೇಷ, ಅಸಹ್ಯ, ಶೋಚನೀಯ.

ತನ್ನ ಕೈಗಳು ಮತ್ತು ಪಾದಗಳಲ್ಲಿನ ನೋವಿನಲ್ಲಿ ಅವನು ಈ ಕರುಣಾಜನಕ ಜೀವಿಗಳು ತಮ್ಮ ದೇವಪುತ್ರನನ್ನು ಶಿಲುಬೆಗೇರಿಸುತ್ತಿರುವುದರ ದುಃಖವನ್ನು, ದೇವಪುತ್ರ ಇನ್ನೇನು ಸಾಯಲಿದ್ದಾನೆ ಎಂಬುದನ್ನು ತಿಳಿದು ಅವನನ್ನು ಶಿಲುಬೆಗೇರಿಸುತ್ತಿರುವ, ಅಸಹ್ಯ ಹುಟ್ಟಿಸುತ್ತಿರುವ ಪ್ರಾಣಿಗಳ ಹರ್ಷವನ್ನು ಆಸ್ವಾದಿಸುತ್ತಾನೆ. ದಿವ್ಯಾನಂದ ಮತ್ತು ಸಹಾನುಭೂತಿಯಲ್ಲಿ ಅವನನ್ನು ಮೈಮರೆಸುತ್ತಾ, ಅವನ ಮುರಿದ ಮೂಳೆಗಳಿಂದ ಅತಿ ತೀವ್ರವಾದ ಯಾತನೆ, ಹೃದಯಕ್ಕೆ ಮತ್ತು ನೆಣಕ್ಕೆ ರೊಯ್ಯನೆ ಚಿಮ್ಮುತ್ತದೆ.

ಅನುಕಂಪ ಮತ್ತು ಜುಗುಪ್ಸೆಯ ಯಾತನೆಯಲ್ಲಿ ಅವನ ಹೊಟ್ಟೆ ತುಯ್ಯುತ್ತಿದೆ.

ಭೂಮಿ ಮೇಲೆಲ್ಲಾ ಕತ್ತಲು ಕವಿದಿದೆ.

"ಈಲ್ಯಾ, ಈಲ್ಯಾ, ಲಾಮ ಸ್ಯಾಬದಾನಿ?" ಅದರರ್ಥ: 'ನನ್ನ ದೇವರೆ, ನೀನು ಯಾಕೆ ನನ್ನನ್ನು ಕೈಬಿಟ್ಟಿದ್ದೀಯಾ?'

ದೇವರು ಅವನನ್ನು ಕೈಬಿಟ್ಟಿದ್ದಾನೆ; ಆದ್ದರಿಂದ ಅವನು ಕೇವಲ ಮನುಷ್ಯನ ಮಗ. ಆದರೆ ಯಹೂದಿಗಳು ಮನುಷ್ಯರ ಮಗನನ್ನೂ ಶಿಲುಬೆಗೇರಿಸುತ್ತಿದಾರೆ.

ರಕ್ತ ಮತ್ತು ಹೇಸಿಕೆಯಿಂದ ಕೊಳೆತು ನಾರುತ್ತಿರುವವರು, ದೇವಪುತ್ರನನ್ನು ಶಿಲುಬೆಗೇರಿಸುತ್ತಿರುವವರಲ್ಲ; ಅವರು ಮಾನವ ಪುತ್ರನನ್ನು ಶಿಲುಬೆಗೇರಿಸುವವರು.

ಜನ್ನದಕ್ಕೆ [illegible] ಮತ್ತು [illegible]



## ಅಶೋಕ ಕುಲಕರ್ಣಿ

# ಹುಲಿಯ ಮುಖದ ಕಪ್ಪು... ಹಳದಿ..



'ಆತನನ್ನು ಎಲ್ಲರೂ ಪೇಂಟರ್ ಎಂದು ಕರೆಯುತ್ತಿದ್ದರು...', ಶ್ರೀಧರ ಹೀಗೆ ತನ್ನ ಕತೆಯನ್ನು ಬರೆಯಲು ಪ್ರಾರಂಭಿಸಿದ. ಶ್ರೀಧರ ಚಿಕ್ಕವನಿದ್ದಾಗ, ಈ ಪೇಂಟರ್ ಮನೆಗೆ ಬಣ್ಣ ಬಳಿಯುತ್ತಿದ್ದುದನ್ನು ಮತ್ತು ಮುರಕಲು ಟ್ರಂಕುಗಳಿಗೆ ಮತ್ತೆ ಹೊಸ ಸ್ವರೂಪ ಬರುವಂತೆ ಹಸಿರು, ಹಳದಿ ಮತ್ತು ಕೆಂಪು ಬಣ್ಣ ಬಳಿದು ಅವುಗಳಿಗೆ ಸುನೇರಿ ಬಣ್ಣದ ನಕ್ಷತ್ರ ಬರೆಯುತ್ತಿದ್ದುದನ್ನು ಗಮನಿಸಿದ್ದ. ಪೇಂಟರ್‌ನ ಒಂದು ಕಣ್ಣು ಸಿಡುಬು ರೋಗದಿಂದ... ಶ್ರೀಧರ ನೆನಪಿಸಿಕೊಂಡಾಗ, ಕುರುಚಲು ಗಡ್ಡಗಳ, ಹರಕು ಟೋಪಿ ಹೊತ್ತ ಮತ್ತು ಪೇಂಟನಿಂದ ಚಿತ್ರ ವಿಚಿತ್ರವಾದ ಕಲೆಗಳನ್ನು ಹೊತ್ತ ಪ್ಯಾಂಟು, ಅಂಗಿ ಕಣ್ಮುಂದೆ ಸುಳಿದವು, ಸದಾಕಾಲ ಪೇಂಟ್ ಬಳಿಯುವುದೆ ಇವನ ಕೆಲಸವಾದದ್ದಕ್ಕೊ ಏನೋ. ಅವನು ಚಾರ್ಲಿ ಚಾಪ್ಲಿನ್ ತರಹ ನಡೆಯುತ್ತಿದ್ದ ಎಂದು ಶ್ರೀಧರ ತನ್ನಷ್ಟಕ್ಕೆ ನಕ್ಕ.

ಬಿದಿರಿನ ಗೋಡೆಗಳಿಗೆ ಸೆಗಣಿ ಮತ್ತು ಮಣ್ಣಿನ ಮೆತ್ತನೆ, ಅದಕ್ಕೆ ಹುಲ್ಲಿನ ಛಾವಣಿ, ಇಂತಹ ಮನೆಯಲ್ಲಿ ಪೇಂಟರ್ ವಾಸವಾಗಿದ್ದ ಎಂದು ಶ್ರೀಧರ ವಿವರಿಸಲು ಯೋಚನೆ ಮಾಡತೊಡಗಿದ. ಎಸ್ಕಿಮೊಗಳ ಈಗ್ಲೂ ಇದ್ದ ಹಾಗೆ. ಶ್ರೀಧರನಿಗೆ, ಆ ಮನೆಯ ಹೊರಗಡೆ ರಕ್ತ ಕೆಂಪು ಬಣ್ಣದಲ್ಲಿ ಆರ್.ಜಿ. ಪೇಂಟರ್ ಎಂದು ಬರೆದು ಹಾಕಿದ್ದು ಮೊದಲಿನಿಂದ ಕೌತುಕವಾಗಿ ಕಂಡಿತ್ತು. ಆ ಸೊಟ್ಟ ಸೊಟ್ಟ ಅಕ್ಷರಗಳ ಹಾಗೆ, ಆ ಪೇಂಟರ್‌ನ

ಮುಖ ಸೊಟ್ಟ ಸೊಟ್ಟಗಿತ್ತು ಎಂದು ಕತೆ ಮುಂದುವರೆಸಿದ. ಹಕ್ಕಳೆ ಉದುರಿ ವಿಕಾರವಾದ ಗೋಡೆಯಂತೆ, ಪೇಂಟರ್‌ನ ಮುಖ ಕೂಡ ಸಿಡುಬಿನ ಕಲೆಗಳಿಂದ ವಿಕಾರವಾಗಿತ್ತು. ಈ ಪೇಂಟರ್, ಕೃತಪುರಕ್ಕೆ ಯಾವ ಊರಿನಿಂದ ಬಂದಿರಬಹುದು ಎಂದು ಶ್ರೀಧರ ತಲೆಕೆಡಿಸಿಕೊಳ್ಳತೊಡಗಿದ. ತಾಯಿ ಅಕ್ಕ-ಪಕ್ಕದವರೊಡನೆ ಮಾತನಾಡುತ್ತ, ಅವನು ಮೊಗಲಾಯಿ ಕಡೆಯವನು ಎಂದು ಹೇಳಿದ್ದು ಫಕ್ಕನೆ ನೆನಪಾಯಿತು. ಕತೆಗಾರ ಶ್ರೀಧರನಿಗೆ ಈ ಮೊಗಲಾಯಿ ಯಾವುದು ಎಂಬ ದಿಗಿಲಾಯಿತು. ಮೊದಲಿನಿಂದ ಭೂಗೋಳ ಅಂದ್ರೆ ಅಷ್ಟಕಷ್ಟೆ ಅಲ್ಲವೆ ತನಗೆ ಎಂದುಕೊಂಡ. ಕೃತಪುರಕ್ಕೆ ಬಂದವನು, ಬೇರೆ ದಗದಕ್ಕ ತೊಡಗದ ಬಣ್ಣಾ ಯಾಕ ಬಳಿಲಿಕ್ಕೆ ಹತ್ತಿದ್ದಾನು ಎಂಬ ಯೋಚನೆ ಶ್ರೀಧರನ ತಲೆ ಬಿಸಿಯಾಗುವಂತೆ ಮಾಡಿತು.

ಚಿಕ್ಕವನಿದ್ದಾಗ್ಗೆ ತನಗೆ ಮೈಲಿ ಬೇನೆ ಬಾರದಂತೆ ಮುನ್ನೆಚ್ಚರಿಕೆ ವಹಿಸಿದ್ದರೆ, ತನ್ನ ಮುಖ ಕೂಡ ಎಲ್ಲರಂತೆ ಅಂದವಾಗಿರುತ್ತಿತ್ತು ಅಂತ ಅಂದುಕೊಂಡ ಶ್ರೀಧರ, ತುಟಿಗೆ ಸಿಗರೇಟು ಇಟ್ಟು ಕಡ್ಡಿ ಗೀರಿದ. ಮೊಗಲಾಯಿಯವನೆಂದ ಮೇಲೆ ಮುಸ್ಲಿಮನಿರಬೇಕು. ಹೌದು ನೆನಪಿದೆ. ಅವನು ಮುಸ್ಲಿಮ್. ತಾನು ಚಿಕ್ಕವನಿದ್ದಾಗ ಈ ಪೇಂಟರ್ ಮೊಹರಮ್ಮಿನಲ್ಲಿ ಹುಲಿಯಾಗುತ್ತಿದ್ದನಲ್ಲವೆ? ಆ ಸಿಡುಬಿನ ಕಲೆಗಳ, ಒಂದೇ ಕಣ್ಣಿನ ಮುಖಕ್ಕೆ ಹಳದಿಯ ಮತ್ತು ಕರಿಯ ಬಣ್ಣ ಭಯಂಕರವಾಗಿ ಕಂಡರೂ, ಪೇಂಟರ್‌ನ ಮುಖದಲ್ಲಿ ಹುಲಿಯ ಕ್ರೌರ್ಯ ಕಾಣುತ್ತಿರಲಿಲ್ಲ.

ತನಗೊಬ್ಬ ಅಕ್ಕ ಇದ್ದವಳು, ಯಾವುದೊ ನಾಟಕ ಕಂಪನಿಯವರ ಜೊತೆಗೆ ಓಡಿ ಹೋದಳೆಂದು ತಾಯಿ ಆಗಾಗ ಶಾಪ ಹಾಕುತ್ತಿದ್ದುದು ಶ್ರೀಧರನಿಗೆ ತಾನು ಬರೆಯುತ್ತಿದ್ದ ಕತೆಯ ಮಧ್ಯೆ ನೆನಪಾಯಿತು. ಏಕೆಂದರೆ, ಈ ಪೇಂಟರ್‌ನ ವೈವಾಹಿಕ ಜೀವನ ಒಪ್ಪಿಕೊಂಡ ಸಮಾಜ, ಅಕ್ಕ ಓಡಿಹೋದದನ್ನು ಏಕೆ ಒಪ್ಪಿಕೊಳ್ಳಲಿಲ್ಲವೆಂದು?

ಮೊಗಲಾಯಿ ಕಡೆಯಿಂದ ಓಡಿಬಂದಿದ್ದ ಪೇಂಟರ್‌ನ ನಿಜವಾದ ಹೆಸರು ಗುಡ್ನೇಸಾಬಿ. ಎಲ್ಲರೂ ಇವನನ್ನು ಗುಡ್ನ್ಯಾ ಎಂದು ಕರೆಯುತ್ತಿದ್ದರಲ್ಲವೆ? ಬಿಂದವ, ಅಲ್ಲಿ-ಇಲ್ಲಿ ಕೂಲಿನಾಲಿ ಮಾಡಿಕೊಂಡ ಇದ್ದ ಕಾಲಂತ ಕಾಣಸ್ತದ. ಈ ಕೃತಪುರದ ಮಂದಿ ಭಾಳ ವಿಚಿತ್ರ. ಮಿರ್ಚಿ, ಚಾ, ಚುಮ್ಮರಿ, ಗಿರಿಮಿಟ್ಟಿ ಜೊತೇನ, ಇವರಿಗೆ ಇನ್ನೊಂದು ಪ್ರಿಯವಾದದ್ದು ನಾಟಕ ನೋಡೋದು. ಹಿಂಗಾಗಿ, ನಾಟಕ ಕಂಪನಿಗಳು ವರ್ಷಾನುಗಟ್ಟಲೆ ಝೇಂಡಾ ಊರಿ, ಅಶ್ಲೀಲತೆಯ ಜೊತೆಗೆ ಮನರಂಜನೆ ಉಂಟುಮಾಡ್ತಾ ಇದ್ದ ಕಾಲ ಅದು ಅಂತ ಶ್ರೀಧರ ಕತೆ ಮುಂದುವರೆಸಿದ.

ಗುಡ್ನೇಸಾಬನಿಗೆ ನಾಟಕಗಳ ಪೋಸ್ಟರುಗಳು ಬಣ್ಣಬಣ್ಣಗಳಲ್ಲಿ ಆಕರ್ಷಕವಾಗಿ ಕಂಡಾಗ ಬಣ್ಣಗಳ ಹುಚ್ಚು ಹಿಡಿಯಿತು ಎಂದು ಕೃತಪುರದಲ್ಲಿ ಇರುವ ಸುದ್ದಿ. ಇದು ನಮಗೆ ತಿಳಿಯದ್ದು ಎಂದು ಶ್ರೀಧರ ಬರೆಯತೊಡಗಿದ. ಗುಡ್ನೇಸಾಬ, ಆ ಬಣ್ಣ ಬಳಿಯುವವರ ಹತ್ತಿರಕ್ಕೆ ಹೋಗಿ, ಅವರು ಬರೆಯುತ್ತಿದ್ದ ಚಿತ್ರಗಳನ್ನು ನೋಡುತ್ತ ನೋಡುತ್ತ, ಭಾವಸಮಾಧಿಯಾಗುತ್ತಿದ್ದ ಕಾಲವದು. ಗುಡ್ನೇಸಾಬ ದಿನವೂ ಹೀಗೆ ಬಂದು ನಿಲ್ಲುತ್ತಿದ್ದುದನ್ನು ಗಮನಿಸಿದವರು, ಮೊದಲು ಬಣ್ಣ ಕಲಿಸುವ ಕಸುಬಿಗೆ ಕರೆದರು. ನಂತರ ಬೋರ್ಡಿಗೆ ಬಟ್ಟೆ ಕಟ್ಟುವ ಕೆಲಸ. ಹೀಗೆ ಸಣ್ಣಪುಟ್ಟ ಕೆಲಸಗಳಲ್ಲಿ ಪಾರಂಗತನಾದ ಬುಡ್ನೇಸಾಬ, ಕ್ರಮೇಣ ಬ್ರಷ್ ಹಿಡಿದು, ಗೆರೆಗಳನ್ನು ಬಟ್ಟೆಯ ಮೇಲೆ ಮೂಡಿಸತೊಡಗಿದ. ಹೀಗೆ ಶ್ರೀಧರ ಕತೆಯನ್ನು ಮುಂದುವರೆಸಿದ. 'ಸದಾರಮೆ'ಯೊ, 'ಮಲ್ಲಮ್ಮನ ಪವಾಡ'ವೊ ಸರಿಯಾಗಿ ನೆನಪಿಲ್ಲ. ಅದರಲ್ಲಿ ಹಿರಾಯಿನ್ ಪಾರ್ಟ್ ಮಾಡಿ ಜನರ ಮನರಂಜನೆಯ ಕೇಂದ್ರವಾಗಿದ್ದವಳು ಗುಲಾಬಿ. ಇವಳಿಗೆ ಹೀಗೆ ಯಾರು ಹೆಸರಿಟ್ಟರೊ ನಮಗೆ ತಿಳಿಯದ ವಿಷಯ. ಹಾಗೇ ನಮ್ಮ ಕತೆಗಾರ ಶ್ರೀಧರನಿಗೂ ಕೂಡ. ಈ ಗುಲಾಬಿಯನ್ನು ರಂಗದ ಮೇಲೆ ಕಂಡಾಗಿನಿಂದ, ಗುಡ್ನೇಸಾಬನಿಗೆ ಕಣ್ಮುಂದೆ ಕಾಮನಬಿಲ್ಲಿನ ಬಣ್ಣಗಳು ಸದಾ ನರ್ತನವಾಡು ವಂತಾಯಿತು. ರಂಗ ತಾಲೀಮಿನಲ್ಲಿ ಕೂಡ, ಗುಲಾಬಿಯನ್ನು ಕದ್ದು ಮುಚ್ಚಿ ನೋಡುತ್ತ, ತನ್ನ ಒಳಗಿನ ಇಂಗಿತವನ್ನು ಪೂರೈಸಿಕೊಳ್ಳುತ್ತಿದ್ದ.

ತಾನು ಇಂಗ್ಲಿಷ್ ಎಂ.ಎ.ಗೆಂದು ಕರ್ನಾಟಕ ವಿಶ್ವವಿದ್ಯಾಲಯ ಸೇರಿದಾಗ, ಧಾರವಾಡ ತನಗಿನ್ನೂ ಹೊಸದಲ್ಲವೆ ಎಂದು ನೆನಪಿಸಿಕೊಂಡ ಶ್ರೀಧರ. ಅಲ್ಲಿಯ ಹುಡುಗಿಯರ ಅಂದಚೆಂದ ಕೃತಪುರಕ್ಕಿಂತ ಭಿನ್ನವಾಗಿ ಕಂಡಿತ್ತು. ಹಾಸ್ಟೆಲಿನಲ್ಲಿಯ ಏಕಾಂತತೆ ಮರೆಯಲು, ಕ್ಲಾಸಿನಲ್ಲಿಯ ಎಲ್ಲ ಹುಡುಗಿಯರ ಮುಖ ನೆನಪು ಮಾಡಿಕೊಳ್ಳುತ್ತಿದ್ದುದನ್ನು ಶ್ರೀಧರ ನೆನೆದು ತನ್ನಷ್ಟಕ್ಕೆ ನಕ್ಕ. ಕ್ಲಾಸಿನಲ್ಲಿಯ ನ್ಯಾನ್ಸಿ ಗೋಂಜಾಲವೆಸ್, ತನ್ನನ್ನು ಕಂಡು ಮುಗುಳ್ನಗೆ ನಕ್ಕು, ಮಾತನಾಡಲು ಪ್ರಾರಂಭಿಸಿದಾಗ ತನಗಾಗುತ್ತಿದ್ದ ಮುಜುಗರ, ನಾಚಿಕೆ, ಎಲ್ಲದಕ್ಕೂ ಕೃತಪುರವೆ ಕಾರಣವಾಗಿರಬಹುದು ಎಂದು ಸಿಗರೇಟಿನ ಬೂದಿ ಕೊಡವಿದ ಶ್ರೀಧರ. ನ್ಯಾನ್ಸಿ ತನಗೆ ಹತ್ತಿರವಾದಂತೆ, ಅವಳು ಪ್ರೊ. ರಾಮಮೂರ್ತಿಯವರ ಚಾಪಲ್ಯದ ಕೇಂದ್ರಬಿಂದು ಕೂಡ ಎಂದು ತಿಳಿಯಲು ಹೆಚ್ಚು ಕಾಲ ಬೇಕಾಗಲಿಲ್ಲ. ಅವರ ಮಗಳ ವಯಸ್ಸಿನ ನ್ಯಾನ್ಸಿಯನ್ನು ರಾಮಮೂರ್ತಿಯವರು ಮದುವೆಯಾದಾಗ, ಲವ್ ಬಗ್ಗೆ ಇಂಗ್ಲಿಷ್ ಕವಿಗಳು ಹೇಳಿದ್ದು ಆಗ ಶ್ರೀಧರನ ಮನಸ್ಸಿಗೆ ಡಾವುಪೇಚುಗಳನ್ನುಂಟುಮಾಡಿದ್ದವು.

ಗುಲಾಬಿಯ ದೇಹಸೌಂದರ್ಯದ ಮೇಲೆ ನಾಟಕ ಕಂಪನಿಯ ಮ್ಯಾನೇಜರ್ ಹಿರೇಮಠ ಮಲ್ಲಿಕಾರ್ಜುನಯ್ಯನವರ ಕಾಕದೃಷ್ಟಿ ಬೀಳಲು ಹೆಚ್ಚು ದಿನಗಳು ಬೇಕಾಗಲಿಲ್ಲ. ಗುಡ್ಡೇಸಾಬನ ಬಣ್ಣದ ಮನಸ್ಸಿಗೆ ಸೂಕ್ಷ್ಮವಾಗಿ ಇದು ತಿಳಿದಾಗ, ಒಳಗೊಳಗೆ ದುಃಖವಾಗಿತ್ತು. ದಿನಗಳು, ತಿಂಗಳುಗಳು ಉರುಳಿದಾಗ ಒಂದು ದಿನ, ನಾಟಕದ ತಂಬೂವಿನಲ್ಲಿ ತನ್ನ ಸಖಿಯೊಡನೆ ಅಳುವುದನ್ನು ಗಮನಿಸಿದ್ದ ಗುಡ್ಡೇಸಾಬ. ಹತ್ತಿರಕ್ಕೆ ಬಂದು ಮಾತನ್ನು ಕದ್ದು ಕೇಳಿದ್ದ.

ಗುಲಾಬಿ: ಅವಾ ಮುದುಕಾ, ನನ್ನ ಹಾಳಮಾಡ್ಯಾನ. ಈಗ ನಾಲ್ಕು ತಿಂಗಳಾಗ್ಯಾವ. ಕೆಂಭಾವಿನ ನನಗ ಗತಿ ಅಂತ ಕಾಣಸ್ತದ.

ಸಖಿ: ನೀನು ಅಟು ಸಲಗಿ ಬಿಡಬಾರದಾಗಿತ್ತೇಳು! ಸಖಿ ಹೇಳಿದ 'ಸಲಗಿ' ಎಂಬ ಶಬ್ದ ಗುಡ್ಡೇಸಾಬನನ್ನು ಚೂರಿಯಂತೆ ಇರಿದಿತ್ತು. ಗುಲಾಬಿ ಹೂವಿನಂತಿರುವವಳನ್ನು ಹಾಳು ಮುದುಕ ಹಾಳುಮಾಡಿದ್ದ. ಇದು ಗುಡ್ಡೇಸಾಬನಿಗೆ, ತನ್ನ ಬಣ್ಣದ ಜಗತ್ತಿಗೆ ಚೂರಿಹಾಕಿದಂತೆ ಭಾಸವಾಗತೊಡಗಿತ್ತು. ತಾನು ಗುಲಾಬಿಯನ್ನು ತಂದು, ತನ್ನ ಜೊತೆಗೆ ಇಟ್ಟುಕೊಳ್ಳಬೇಕು ಎಂಬ ನಿರ್ಧಾರಕ್ಕೆ ಗುಡ್ಡೇಸಾಬ ಬಂದ ಎಂದು ಶ್ರೀಧರ ಕತೆಯನ್ನು ಮುಂದುವರೆಸಿದ. ತನಗೆ ಬಣ್ಣಗಳ ಹುಚ್ಚು ಹಿಡಿಸಿದವಳನ್ನು ಸಾಯಲು ಬಿಡಬಾರದೆಂದು.

ಹೀಗೆಯೇ ಅಲ್ಲವೆ, ನ್ಯಾನ್ಸಿ ಕೂಡ, ತನ್ನನ್ನು ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಸಂಧಿಸಿದಾಗ, ಪ್ರೊ. ರಾಮಮೂರ್ತಿಯವರ ಮನೆಯಲ್ಲಿ ನಡೆದ ಘಟನೆಯನ್ನು ವಿವರಿಸಿದ್ದು. ಕೃತಪುರದ ತನ್ನ ಮುಗ್ಧ ಮನಸ್ಸು ಹೌಹಾರಿದ್ದು. ಗುಡ್ಡೇಸಾಬನಿಗಿದ್ದ ಧೈರ್ಯ ತನಗಿಲ್ಲವಲ್ಲ ಎಂದು ಶ್ರೀಧರ, ನ್ಯಾನ್ಸಿಯ ಸುಂದರ ಮುಖ ನೆನಪಿಸಿಕೊಂಡ.

ಗುಡ್ಡೇಸಾಬನ ಜಾತಿ ಬೇರೆ, ಗುಲಾಬಿಯ ಜಾತಿ ಬೇರೆ ಎಂದು ಹಿರೇಮಠರು ಹಾರಾಡಿದರೂ, ಗುಡ್ಡೇಸಾಬ ಹಾಗೂ ಗುಲಾಬಿ ಕೂಡಿ ಇರತೊಡಗಿದರು. ಅಕ್ಕಪಕ್ಕದವರು ತಲೆಗೊಂದು ಮಾತನಾಡಿದರು. ಗುಡ್ಡೇಸಾಬ ಹೆದರಲಿಲ್ಲ. ಅಳುಕಲಿಲ್ಲ. ಬರಬರುತ್ತ ಗುಡ್ಡೇಸಾಬ, ಗುಲಾಬಿಗೆ ದೇವರಂತೆ ಕಾಣತೊಡಗಿದ. ಆಗಲೇ ಗುಡ್ಡೇಸಾಬ, ಮನೆಗಳಿಗೆ ಸುಣ್ಣ-ಬಣ್ಣ ಬಳಿಯುತ್ತ ಟ್ರಂಕುಗಳಿಗೆ ಬಣ್ಣ ಬಳಿಯುತ್ತ, ಮತ್ತು ಮಣ್ಣಿನ ಗಣಪತಿಗಳಿಗೆ ಬಣ್ಣ ಬಳಿಯುತ್ತ ಪೇಂಟರನಾದದ್ದು. ತನ್ನದಲ್ಲದ ಮಗುವೊಂದು ಗುಲಾಬಿಯಿಂದ ಹುಟ್ಟಿದಾಗ ಗುಡ್ಡೇಸಾಬ ಖುಷಿಪಟ್ಟ. ಸಿಹಿ ಹಂಚಿದ. ಕೆಲವರು ಗುಡ್ಡೇಸಾಬ ಗಂಡಸೇ ಅಲ್ಲವೆಂದರು. ಈ ಮಾತುಗಳು ಗುಲಾಬಿಯ ಕಿವಿಗಳ ಮೇಲೂ ಬಿದ್ದವು. ಗುಲಾಬಿ ಎಲ್ಲಾ ಇದ್ದೂ ಎಲ್ಲವನ್ನೂ ಕಳೆದುಕೊಂಡವಳು. ಗುಡ್ಡೇಸಾಬನ ಜೊತೆಗಿನ ಜೀವನ ಬರುಬರುತ್ತ ಅವಳಿಗೆ ಬೇಸರವಾಯಿತು. ಕಾರಣ ಗುಲಾಬಿಯ ದೇಹದ ಕಾವಿಗೆ ಗುಡ್ಡೇಸಾಬ ಸರಿಸಾಟಿಯಲ್ಲ. ರಾತ್ರೋರಾತ್ರಿ ಮನೆ ಬಿಟ್ಟು ಹೋದವಳು, ಇವತ್ತಿಗೂ ನಾಪತ್ತೆ. ನಿಮಗೆ



ಗೊತ್ತಿದ್ದರೆ ತಿಳಿಸಿ. ಕ್ಷಮಿಸಿ. ಕತೆಯಲ್ಲಿ ಅಧಿಕ ಪ್ರಸಂಗತನ ಇಣಕ್ತಾ ಇದೆ. ಗುಡ್ಡೇಸಾಬ ಮೌನಿಯಾದ. ಗುಲಾಬಿಯ ಮಗಳಿಗೆ ಫಾತಿಮಾ ಎಂದು ಹೆಸರಿಟ್ಟ. ಆ ಮಗುವಿಗಾಗಿ ಹಗಲಿರುಳು ಬಣ್ಣ ಬಳೆಯುವ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡ. ಒಣಗಿದ ಮರ ಚಿಗುರಿದಂತೆ ಗುಡ್ಡೇಸಾಬನ ಮನಸ್ಸು ಚಿಗುರಿತು. ಆದರೆ ದೇಹಕ್ಕೆ ವಯಸ್ಸಾಯಿತೆಂದು... ಶ್ರೀಧರ ಬರೆಯುತ್ತಿದ್ದವ ಮೇಲಕ್ಕೆದ್ದ.



'ಕೃತಪುರಕ್ಕೆ ಹೊಸದಾಗಿ ಬಂದಿರುವ ನಾಟಕ ಕಂಪನಿಯಲ್ಲಿ ನಿಮ್ಮ ಮಗಳು ಅದಾಳ, ಮೂಲಿಮನಿ ಬಸಪ್ಪ ಹೀಗೆ ಹೇಳಿದಾಗಿನಿಂದ ತಾಯಿ ರೌದ್ರಾವತಾರ ತಾಳಿದ್ದನ್ನು ಶ್ರೀಧರ ಗಮನಿಸಿದ್ದ.

"ಆ ರಂಡಿ ಎಂದ ಮನಿ ಬಿಟ್ಟು ಹೋಗ್ಯಾಳ ಅಂದ್ಯ ನನ್ನ ಪಾಲಿಗೆ ಆಕಿ ಸತ್ತಾಳ. ಯಾರೂ ಹೋಗೋದು ಬೇಕಾಗಿಲ್ಲ". ತಾಯಿಯ ಗುಡುಗಿಗೆ ಶ್ರೀಧರ ಸುಮ್ಮನಾದ. ಶ್ರೀಧರನ ತಾಯಿಗೆ ಸಮಾಜದಲ್ಲಿ ಎದುರಿಸಲಾರದ ವಿಪತ್ತು ಬಂದೊದಗಿತ್ತು. ಈ ಜಗತ್ತಿನಿಂದ ದೂರ ಹೋಗಬೇಕೆಂದು, ದೂರದ ಸಂಬಂಧಿಯೊಬ್ಬರ ಹತ್ತಿರ ಹೋಗಿ ಇರಲು ಬೊಂಬಾಯಿಗೆ ಹೊರಟುಹೋದಾಗ, ಅಕ್ಕನನ್ನು ಭೇಟಿಯಾಗದೆ ಬೇರೆ ಮಾರ್ಗ ಉಳಿಯಲಿಲ್ಲ ಶ್ರೀಧರನಿಗೆ.

ಕತೆಯನ್ನು ಅರ್ಧಕ್ಕೆ ನಿಲ್ಲಿಸಿದ ಶ್ರೀಧರ, ಪೆನ್ನನ್ನು ಕೆಳಗಿಟ್ಟು, ಅಂಗಿ, ಪ್ಯಾಂಟು ಹಾಕಿಕೊಂಡು ನಾಟಕ ಕಂಪನಿಯತ್ತ ನಡೆದ. ನಾಟಕ ಕಂಪನಿಯ ಮ್ಯಾನೇಜರರ ಎದುರಿನಲ್ಲಿ ರಂಗತಾಲೀಮು ನಡೆದಿತ್ತು. ಆ ತಾಲೀಮಿನಲ್ಲಿ ತನ್ನ ಅಕ್ಕ ಯಾರಿರಬಹುದೆಂದು ಹುಡುಕತೊಡಗಿದ.

"ಯಾರ ಬೇಕಾಗೈತ್ರಿ?", ಗೇಟ್‌ಕೀಪರ್ ಕೇಳಿದ.

"ಶೋಭಾ ದೇಶಪಾಂಡೆ", ಶ್ರೀಧರ ಹೇಳಿದ.

'ಸ್ವಲ್ಪ ತಡೀರಿ', ಗೇಟ್‌ಕೀಪರ್ ಅಲ್ಲಿ ಕುಳಿತಿದ್ದ ವಯಸ್ಸಾದ ವ್ಯಕ್ತಿಯ ಕಿವಿಯಲ್ಲಿ ಉಸುರಿದ.

"ಬರಾಕ ಹೇಳು", ವ್ಯಕ್ತಿ ಹೇಳಿತು.

"ಕರ್‍ಯಾಕ ಹತ್ಯಾರ, ಬರ್ರಿ". ಶ್ರೀಧರ ಅತ್ತ ನಡೆದ.

"ದೇಶಪಾಂಡೆಯವರ, ಯಾರೊ ಬಂದಾರ್ ನೋಡ್ರಿ". ತನಗಿಂತ ಹದಿನೈದು ವರ್ಷ ಹಿರಿಯಳಾದ ಅಕ್ಕ ಸುಂದರಳಾಗಿದ್ದಳು. ಆದರೆ ನಾಟಕದ ಬಣ್ಣದಿಂದ ಮುಖದಲ್ಲಿ ದುಃಖ ಮಡುವುಗಟ್ಟಿದಂತಿತ್ತು.

"ಯಾರ್ರಿ, ನೀವು?"

"ನಿನ್ನ ತಮ್ಮ ಶ್ರೀಧರ"

"ಹಾ!" ಎಂದಾಗ, ಅಕ್ಕನ ಮುಖದಲ್ಲಾದ ಬದಲಾವಣೆಗಳು ಅವನಿಗೆ ವಿಚಿತ್ರವಾಗಿ ಕಂಡವು.

ಅಕ್ಕ ಅವನ ಹೊರಗೆ ಕರೆದುಕೊಂಡು ಬಂದಾಗ ಇಬ್ಬರೂ ಮೂಕರಾಗಿದ್ದರು.

"ಅವ್ವ ಹ್ಯಾಂಗ್ ಇದ್ದಾಳ?"

"ಬೊಂಬಾಯಿಗೆ ಹೋಗ್ಯಾಳ."

"ತನ್ನ ಜೀವನಾನ ಛಲದಾಗ ಕಳದಾಳ ಅಕಿ. ಹೋಗ್ಲಿ ಬಿಡು. ಇವತ್ತಿನ ನಾಟಕ ನೋಡಲಿಕ್ಕ ಬಾರಲ್ಲ."

ಅಕ್ಕ ಇಷ್ಟೊಂದು ನಿರ್ಲಿಪ್ತವಾಗಿ ಮಾತನಾಡುವುದು ಶ್ರೀಧರನಿಗೆ, ಕತೆಗಾರನಾಗಿ ವಿಚಿತ್ರವಾಗಿ ಕಂಡಿತು.

"ಮನಿ ಕಡೆ ಬಾರಲ್ಲಾ", ಶ್ರೀಧರ ಹೇಳಿದ.

"ಆ ಕೃತಪುರದ ನಿಮ್ಮ ಮಂದಿ ನನಗ ಹೊಲಸೂಳಿ ಅಂತ ಅಡ್ಡ ಹೆಸರಿಟ್ಟಾರ. ಅದ್ಕ ಬರೂದಿಲ್ಲಾ. ಅಂಧಾಂಗ ಆರ್.ಜಿ. ಪೇಂಟರ್ ಅಂತ ಇದ್ದಾ. ಸತ್ತಾನೊ? ಇದ್ದಾನೊ?"

"ಇದ್ದಾನ", ಶ್ರೀಧರ ಮೊಟಕು ಉತ್ತರ ಕೊಟ್ಟ.



"ಮಗಳು ಫಾತಿಮಾ ದೊಡ್ಡಾಕಿ ಆಗಿರಬೇಕು."

"ಹೂ" ಎಂದ ಶ್ರೀಧರ.

"ಏ ಗುಲಾಬಿ, ಧಣ್ಯಾರು ಕರಿಯಾಕ ಹತ್ಯಾರ", ಹೆಂಗಸೊಂದು ಕೂಗಿದಾಗ ಶ್ರೀಧರನಿಗೆ ಭೂಮಿ ಬಾಯಿಬಿಡುವಂತಾಯಿತು. ಕತೆಗಾರ ಶ್ರೀಧರನಿಗೆ ಮುಂದೆ ಬರೆಯಲು ತೋಚದಾಯಿತು.



ಅಂಕೋಲಾದ ಬಸಾಕಲ್ಲ ಹತ್ತಿರದ ಬಂಡೆಗಳ ಮೇಲೆ ಕುಳಿತು ಶ್ರೀಧರ ಸೂರ್ಯಾಸ್ತ ನೋಡುವಲ್ಲಿ ಮಗ್ನನಾಗಿದ್ದ. ಪಕ್ಕದಲ್ಲಿ ಅವನ ಪತ್ನಿ ಕುಸುಮಾ ಇದ್ದಳು. ದೂರದಲ್ಲಿ ನಾಲ್ಕು ವರ್ಷದ ಮಿಲಿಂದ ಗುಬ್ಬಿಗೂಡು ಕಟ್ಟುತ್ತಿದ್ದ.

"ನಿಮ್ಮಕ್ಕ ಹುಬ್ಬಳ್ಳಿ ಒಳಗ ಇದ್ದಾಳ ಅಂತ ಹೇಳಿದ್ರಿ. ಒಂದ್ಸಲ ಹೋಗಿ ನೋಡಕೊಂಡು ಬರ್ರಲ್ಲಾ?"

"ಏನಂದಿ?"

"ನೀವೊಂದು, ಯಾವಾಗಲೂ ಈ ಜಗತ್ತಿನ್ಯಾಗ ಇರೂಹಾಂಗ ಇಲ್ಲಾ. ನಿಮ್ಮಕ್ಕನ ಸುದ್ದಿ ಹೇಳಿದೆ."

"ಛೆ, ಅಕ್ಕನ ಸುದ್ದಿ ಯಾಕ? ಸೂರ್ಯಾಸ್ತ ಎಷ್ಟು ಛಂದ ಅದ ನೋಡು." ಶ್ರೀಧರ ಅದರಲ್ಲಿ ಮತ್ತೆ ಮುಳುಗಿದ.

'ಕೆಂಪು ಚೆಂಡು', ಮಿಲಿಂದ ಚಪ್ಪಾಳೆ ತಟ್ಟುತ್ತಿದ್ದ.

"ಕುಸುಮಾ, ಗುಡ್ಡೇಸಾಬನ ಬಗ್ಗೆ ಕತಿ ಬರೀತಾ ಇದೀನಿ. ಅದ್ನ ಇವತ್ತ ಮುಗಸಬೇಕಾಗೇದ."

"ಹಾಳಾದ ಕತಿ ಬರದು ಏನು ಮಾಡತೀರಿ. ಟ್ಯೂಷನ್ ಹೇಳಿ ದುಡ್ಡು ಮಾಡ್ರಿ."

ಮೌನವಾಗಿ ಮನೆಗೆ ಬಂದ ಶ್ರೀಧರ, ರಾತ್ರಿ ಹುಬ್ಬಳ್ಳಿಗೆ ಹೊರಟಿದ್ದ ಬಸ್ಸು ಹಿಡಿದ. ಹುಬ್ಬಳ್ಳಿ ತಲುಪಿದವ, ಕೃತಪುರಕ್ಕೆ ಹೊರಟಿದ್ದ ಬಸ್ಸು ಹಿಡಿದು ಕೃತಪುರಕ್ಕೆ ಬಂದಾಗ ಅವನಿಗೊಂದು ವಿಚಿತ್ರವಾದ ಸುದ್ದಿ ಕಾದಿತ್ತು. ಗುಡ್ಡೇಸಾಬನ ಸಾಕುಮಗಳಾದ ಫಾತಿಮಾ, ಯಾವುದೋ ಕ್ರಿಶ್ಚಿಯನ್‌ನ ಜೊತೆಗೆ ಓಡಿಹೋಗಿದ್ದರಿಂದ ಅವನಿಗೆ ಹುಚ್ಚು ಹಿಡಿದಿದೆ ಎಂದು. ಈ ಹುಚ್ಚು ಹಿಡಿದವನ ಬಗೆಗೆ ಕತೆ ಹೇಗೆ ಮುಂದುವರೆಸುವುದೆಂದು ಶ್ರೀಧರ ಯೋಚಿಸತೊಡಗಿದ.





ಬುದ್ಧನಿಬ ಕ್ರಮೇಣವಾಗಿ ಬ್ರಷ್ ಹಿಡಿದು ಗೆರೆಗಳನ್ನು ಬಟ್ಟೆಯ ಮೇಲೆ ಮೂಡಿಸತೊಡಗಿದ.

ಅಶೋಕ ಕುಲಕರ್ಣಿ




# ಬ್ರುನೋ ಶುಲ್ಜ

ಬ್ರುನೊ ಶುಲ್ಜ ಇಪ್ಪತ್ತನೆಯ ಶತಮಾನದ ಪ್ರಮುಖ ಪೋಲಿಷ್ ಬರಹಗಾರ. ಸುತ್ತಲ ಜಗತ್ತಿನ ಬಗ್ಗೆ ಅತೀವ ಸೂಕ್ಷ್ಮಜ್ಞನಾಗಿದ್ದ ಈತ, ಬದುಕಿನ ವಿಪರ್ಯಾಸವೋ ಎಂಬಂತೆ, ಎರಡನೆಯ ಮಹಾಯುದ್ಧದ ವೇಳೆ, ಒಬ್ಬ ಹುಂಬ ನಾಝಿ ಅಧಿಕಾರಿಯ ಗುಂಡಿಗೆ ಬಲಿಯಾದ. ಆಗ ಜರ್ಮನಿ ಪೋಲೆಂಡನ್ನು ಆಕ್ರಮಿಸಿತ್ತು. ದೇಶದ ಬಹುಭಾಗದ ಜನರಂತೆ ಬ್ರುನೊ ಕೂಡ ಜೈಲುಗಳಲ್ಲಿ, ನಾಝಿಗಳ ಕ್ಯಾಂಪುಗಳಲ್ಲಿ ಬಂಧಿಸಲ್ಪಟ್ಟ. ಒಂದು ದಿನ, ಸೆರೆಮನೆಯಿಂದ ಹೊರಬಂದು ಬೀದಿಯಲ್ಲಿ ಓಡಾಡಲು ಅನುಮತಿ ಪತ್ರ ಪಡೆದಿದ್ದರೂ, ಒಬ್ಬ ಸೈನ್ಯಾಧಿಕಾರಿಯ ಉಡಾಫೆಯಿಂದ, ಬ್ರುನೊನನ್ನು ಇಷ್ಟಪಡುವ ಇನ್ನೊಬ್ಬ ಅಧಿಕಾರಿಯ ಮೇಲಿನ ಸಿಟ್ಟಿನಿಂದ ರಸ್ತೆಯಲ್ಲಿ ಅವನಿಗೆ ಗುಂಡಿಕ್ಕಲಾಯಿತು. ನಿಜವಾಗಿಯೂ ನಡೆದದ್ದೇನು ಅನ್ನುವುದು ಯಾರಿಗೂ ಸರಿಯಾಗಿ ಗೊತ್ತಿಲ್ಲ. ಶತಮಾನದ ಮಹತ್ವದ ಲೇಖಕನೊಬ್ಬ ನಾಝಿಗಳ ಕ್ರೌರ್ಯದಿಂದ ಮರೆಯಾಗಿ ಹೋದ. ಆಗ ಅವನಿಗೆ ಐವತ್ತು ವರ್ಷ. ಅವನ ಯಾವ ಹಸ್ತಪ್ರತಿಗಳೂ ಉಳಿಯಲಿಲ್ಲ. ಅವುಗಳಿಗೆ ಒದಗಲಿರುವ ಅಪಾಯವನ್ನು ಮುಂದಾಗಿ ಅರಿತವನಂತೆ, ಎಲ್ಲವನ್ನೂ ಒಬ್ಬ ಸ್ನೇಹಿತನಿಗೆ ಭದ್ರವಾಗಿಡುವಂತೆ ತಿಳಿಸಿಕೊಟ್ಟಿದ್ದ. ಸ್ನೇಹಿತ ಮತ್ತು ಹಸ್ತಪ್ರತಿಗಳೆರಡೂ ನಿಗೂಢವಾಗಿ ಮಾಯವಾದವು. ಇದರಲ್ಲಿ ಪ್ರಕಟನೆಗೆ ಸಿದ್ಧವಾದ The Messiah ಎಂಬ ಅವನ ಒಂದು ಕಾದಂಬರಿಯೂ ಸೇರಿತ್ತು. ಲಭ್ಯವಿರುವ ಅವನ



ಕೃತಿಗಳನ್ನು ಓದಿದಾಗ, ಜಗತ್ತಿನ ಸಾಹಿತ್ಯಕ್ಕೆ ಉಂಟಾದ ನಷ್ಟದಿಂದ, ಮಹಾಯುದ್ಧದ ಕಾಲದ ಅಮಾನವೀಯ ದೌರ್ಜನ್ಯಗಳಿಂದ ಮನಸ್ಸು ಮುದುಡುತ್ತದೆ.

ಪೋಲೆಂಡಿನ ಚಿಕ್ಕ ಊರೊಂದರ ಶಾಲೆಯಲ್ಲಿ ಮಾಸ್ತರನಾಗಿದ್ದ ಈತ ಅತ್ಯಂತ ಸಂಕೋಚದ ಸ್ವಭಾವದವನಾಗಿದ್ದ. ಅವನ ಮಾತನ್ನು ಕೇಳದ ಪುಂಡ ಮಕ್ಕಳಿಗೆ ಕಲೆಯನ್ನು ಕಲಿಸುವ ಸಂಕಟದ ಜೊತೆಗೆ ಆರ್ಥಿಕ ಕಷ್ಟಗಳೂ ಅವನ ಅಂತರ್ಮುಖತೆಯನ್ನು ಹೆಚ್ಚಿಸಿದುವುದು. ಆ ಕಾಲದಲ್ಲಿ ನಶಿಸಿಹೋಗುತ್ತಿದ್ದ ಜ್ಯೂಗಳ ಒಂದು ವ್ಯಾಪಾರಿ ವರ್ಗಕ್ಕೆ ಸೇರಿದವರಾಗಿದ್ದ ಅವನ ಅಪ್ಪ ಬಟ್ಟೆಯ ಅಂಗಡಿಯನ್ನು ಇಟ್ಟಿದ್ದರು. ಅದೇ ಊರಿನಲ್ಲಿ ಶುಲ್ಜ್ ಕೊನೆಯವರೆಗೂ ಉಳಿದ. ಅಪ್ಪನ ಬದುಕನ್ನು ಮತ್ತು ಮುಖ್ಯವಾಗಿ ಪಾಳುಬಿದ್ದ ಅಂಗಡಿಯನ್ನು ತನ್ನ ಕೃತಿಗಳಲ್ಲಿ ರೂಪಕವಾಗಿ ಬೆಳೆಸಿದ. ಹಳೆಯ ಪುರಾಣಗಳಂತೆ, ಶುಲ್ಜ್ ಸೃಷ್ಟಿಸಿದ ಪುರಾಣ ಕೂಡ ಬಾಲ್ಯದ ಸುತ್ತ ಸುತ್ತುತ್ತಿತ್ತು. ಮನಸ್ಸಿನ ಆಳಗಳು ಮತ್ತು ಹೊರಜಗತ್ತು, ಕನಸು ಮತ್ತು ವಾಸ್ತವ, ಬೌದ್ಧಿಕ ಮತ್ತು ಇಂದ್ರಿಯಗಮ್ಯ ವ್ಯಾಪಾರಗಳ ನಡುವಿನ ಗಡಿ ಅಳಿಸುವಂತೆ ಅವನ ಗದ್ಯ ಪ್ರಭಾವಶಾಲಿಯಾಗಿತ್ತು. ಅವನ ಪ್ರಕಟಿತ ಬರಹಗಳು ಅತ್ಯಂತ ಕಡಿಮೆಯಿದ್ದರೂ ಸಹ, ಅವನ ಕಾಲದಲ್ಲಿ ಯುರೋಪಿನ ಯಾವ ಬರಹಗಾರನೂ ಮುಟ್ಟದ ಮತ್ತು ಆನಂತರವೂ ಅನುಕರಿಸಲು ಅಸಾಧ್ಯವಾದಂಥ ರೀತಿಯಲ್ಲಿ ಬರೆದ. ಯುರೋಪಿನ ಆಧುನಿಕ ಪ್ರಜ್ಞೆಯ ಮೇಲೆ ರಿಲ್ಕ್ ಮತ್ತು ಕಾಫ್ಕಾರಷ್ಟೇ ಮುಖ್ಯವಾದ ಪ್ರಭಾವ ಬೀರಿದ. ಅವನ ಎರಡು ಪ್ರಕಟಿತ ಗದ್ಯ ಕೃತಿಗಳು The street of crocodiles ಮತ್ತು Sanatorium under the sign of the hour glass ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದವಾಗಿವೆ.



ಬ್ರೂನೊ ಬಿಡಿಸಿದ ತನ್ನದೇ ಪುಸ್ತಕದ ಹೊದಿಕೆ

ಅವನ ಕರುಣೆ ಮತ್ತು ಮೃದುತ್ವದ ಬಗ್ಗೆ ಅವನ ಬಾಲ್ಯದ ಒಂದು ಘಟನೆ ದಾಖಲಾಗಿದೆ. ಒಂದು ಚಳಿಗಾಲದ ರಾತ್ರಿ, ಅವನ ತಾಯಿ, ಅವನ ಕೋಣೆಯಲ್ಲಿ ದೀಪ ನೋಡಿ ಬರುತ್ತಾಳೆ. ರಾತ್ರಿ ತುಂಬ ಹೊತ್ತಾಗಿದೆ, ಯಾಕೆ ಬ್ರುನೊ ಇನ್ನೂ ಮಲಗಿಲ್ಲ ಎಂದು ವಿಚಾರಿಸಲು ಒಳಬಂದಾಗ ಅವನು ನೊಣಗಳಿಗೆ ಸಕ್ಕರೆ ಹರಳುಗಳನ್ನು ಹಾಕುತ್ತಿರುತ್ತಾನೆ. ಈ ಕಟುವಾದ ಚಳಿಗಾಲದಲ್ಲಿ ಅವು ಬದುಕಲಿ ಎಂದು ಅವನು ಮಾಡುತ್ತಿದ್ದ ಸಹಾಯ ನೋಡಿ ಅವಾಕ್ಕಾಗುತ್ತಾಳೆ. ಇಂಥ ಸೂಕ್ಷ್ಮಜ್ಞನಿಗೆ ಯುದ್ಧಕಾಲದ ಏಳುಬೀಳುಗಳು ಮತ್ತು ಜರ್ಮನಿಯಿಂದ ಬರುತ್ತಿರುವ ಸುದ್ದಿಗಳು ಕಂಗೆಡಿಸುತ್ತಿದ್ದವು. ಏಕಾಂಗಿತನವನ್ನು ತನ್ನ

ಸೃಜನಶೀಲತೆಯ ಅಭಿವ್ಯಕ್ತಿಯೆಂದೇ ತಿಳಿಯುತ್ತಿದ್ದ ಅವನಿಗೆ ಬಹಳ ಕಡಿಮೆ ಸ್ನೇಹಿತರಿದ್ದರು. ಕಲೆಯ ಪಾಠ ಹೇಳಬೇಕಾದ ಅನಿವಾರ್ಯತೆಯ ನಡುವೆ ಅವನಿಗೆ, ಪ್ರಿಯವಾದ ಏಕಾಂತ ಸಿಗುವುದು ದುರ್ಲಭವೇ ಆಗಿತ್ತು. ಅವನಿದ್ದ ಊರು ಕೂಡ ಪೋಲೆಂಡಿನ ಒಂದು ಮೂಲೆಯಲ್ಲಿದ್ದರಿಂದ ಅವನಿಗೆ ಯಾರೊಡನೆಯೂ ನೇರವಾದ ಸಂಪರ್ಕವಿರಲಿಲ್ಲ. ಆ ಕಾಲದ ಸಾಹಿತ್ಯಿಕ ದಿಗ್ಗಜಗಳ ಜೊತೆಯ ಸಂಪರ್ಕಕ್ಕಾಗಿ ಅವನು ಪ್ರಯತ್ನಿಸಲೂ ಇಲ್ಲ. ಅವನ ಸ್ನೇಹಿತೆ ಡೆಬೊರಾ ವೊಗೆಲ್ ಎಂಬವಳಿಗೆ ಬರೆದ ಪತ್ರಗಳ ಫಲವಾಗಿ, ಅವಳ ಜೊತೆ ಆ ಪತ್ರಗಳಲ್ಲಿ ನಡೆಸಿದ ಚರ್ಚೆಯ ಫಲವಾಗಿ, ಅವನ ಮೊದಲ ಪುಸ್ತಕ ಹುಟ್ಟಿತು. ಹೀಗೆ ಪತ್ರಗಳನ್ನು ಅಭಿವ್ಯಕ್ತಿಯ ಮುಖ್ಯ ರೀತಿಯನ್ನಾಗಿ ಆರಿಸಿಕೊಂಡ ಅವನ ಓಲೆಗಳಲ್ಲಿ ಕೆಲವೇ ಕೆಲವು ಮಾತ್ರ ಯುದ್ಧಾನಂತರವೂ ಉಳಿದವು. ಅವನು ಬಿಡಿಸಿದ ಬಹುಪಾಲು ರೇಖಾಚಿತ್ರಗಳೂ ನಾಶವಾಗಿ ಹೋದವು. ಉಳಿದ ಕೆಲವು ಅವನ ಪ್ರಖರವಾದ ಪ್ರತಿಭೆಗೆ ಸಾಕ್ಷಿಯಂತಿವೆ.

ಕತೆಗಳೆಂದರೆ, ಗದ್ಯವೆಂದರೆ ಚೆದುರಿಹೋದ ಒಂದು ಚಿತ್ರದ ತುಣುಕುಗಳು ಎಂದು ಭಾವಿಸುತ್ತಿದ್ದ ಶುಲ್ಜ್‌ನ 'ಹಕ್ಕಿಗಳು' ಎಂಬ ಪುಟ್ಟ ಕತೆಯನ್ನೇ ಗಮನಿಸಿದರೆ, ಅವನಿಗಿದ್ದ ಚಿತ್ರಕ ಶಕ್ತಿಯ ಅರಿವಾಗುತ್ತದೆ. ವಯಸ್ಸಾಗುತ್ತಿರುವ ತಂದೆಯ ಬಗ್ಗೆ ಮಗ ಹೇಳುವ ಕತೆಯಿದು. ವಯಸ್ಸಾಗುತ್ತ ಹೋಗುತ್ತಿರುವ ತಂದೆ ಅಧೀರನಾಗುವುದು, ಅವರ ಮನೆಯ ಕೆಲಸದ ಹುಡುಗಿ ಅಡೆಲಾ ಎದುರಿಗೆ ಮಾತ್ರ. ಅವಳ ತಾರುಣ್ಯದ ಪ್ರಖರತೆ, ಅವಳ ಪ್ರತಿ ಚಲನೆ ಅವನನ್ನು ಕಂಗೆಡಿಸುತ್ತದೆ. ಅವಳು ಅವನ ಕೋಣೆಯನ್ನು ಸ್ವಚ್ಛಗೊಳಿಸುವಾಗ ಆಜ್ಞಾಧಾರಕನಂತೆ ವರ್ತಿಸುತ್ತಾನೆ. ಅವನಿಗೆ ಪಕ್ಷಿಗಳ ಅಧ್ಯಯನದ ಹುಚ್ಚು. ದಿನಗಳೆದಂತೆ ಈ ಹುಚ್ಚು ಅತಿಗೆ ಹೋಗತೊಡಗುತ್ತದೆ. ಅನೇಕಾನೇಕ ದೇಶಗಳಿಂದ ಮೊಟ್ಟೆಗಳನ್ನು ತರಿಸಿ ಕಾವುಕೊಡುತ್ತಾನೆ. ಅಟ್ಟದ ಮೇಲಿನ ಅವನ ಕೋಣೆ ಪಕ್ಷಿಗಳ ಕಲರವದಿಂದ ತುಂಬುತ್ತದೆ. ಅದರ ನೆಲ ಗುಂಪು ಗುಂಪು ಕೂರುವ ಪಕ್ಷಿಗಳಿಂದ ಚಲಿಸುವ ರತ್ನಗಂಬಳಿಯಂತೆ ತೋರುತ್ತದೆ. ಪ್ರಯೋಗನಿರತ ತಂದೆ ಯಾವು ಯಾವುದೋ ಪಕ್ಷಿಗಳ ಸಂಕರಕ್ಕೆ ಕಾರಣನಾಗುತ್ತಾನೆ. ಮನೆಯ ಮಾಡು ದೇಶಾಂತರಗಳಿಂದ ಬಂದ ನಾನಾ ಹಕ್ಕಿಗಳಿಂದ ತುಂಬಿಹೋಗುತ್ತದೆ. ಇಡೀ ಮನೆಯನ್ನು ಇವು ಆವರಿಸಿಕೊಳ್ಳುತ್ತವೆ. ಈ ವ್ಯವಹಾರದಲ್ಲಿ, ಅಧ್ಯಯನದಲ್ಲಿ ಮುಳುಗಿಹೋದ ತಂದೆ, ಮನೆಯವರ ಜೊತೆ ಸಂಬಂಧ ಕಳಕೊಳ್ಳತೊಡಗುತ್ತಾನೆ. ಕೆಲವೊಮ್ಮೆ ಹಕ್ಕಿಗಳ ರೀತಿಯಲ್ಲಿ ಕೈಗಳನ್ನು ಅಗಲವಾಗಿ ಚಾಚಿ, ಅಂಗೈಗಳನ್ನು ಅಲ್ಲಾಡಿಸುತ್ತ, ಬಾಯಿಯಿಂದ ವಿಚಿತ್ರ ಸ್ವರವೊಂದನ್ನು ಹೊರಡಿಸುತ್ತಾನೆ. ಮನೆಯವರು ಗಮನಿಸಿದರೆ, ಅದೊಂದು ಆಕಸ್ಮಿಕವೋ ಎಂಬಂತೆ, ಒಂದು ಹಾಸ್ಯ ಸನ್ನಿವೇಶವೋ ಎಂಬಂತೆ ವರ್ತಿಸಿ ಮುಚ್ಚಲೆಳಸುತ್ತಾನೆ. ಹೀಗಿರುತ್ತ, ಒಂದು ಚಳಿಗಾಲದ ದಿನ, ಅವನ ಕೋಣೆಯನ್ನು ಸ್ವಚ್ಛ ಮಾಡಲು ಅಡೆಲಾ ಅಟ್ಟ ಹತ್ತುತ್ತಾಳೆ. ಕೈಯಲ್ಲಿ ಕಸಬರಿಗೆ ಹಿಡಿದು, ಮುಕುರಿದ ಆ ಹಕ್ಕಿಗಳ ನಡುವೆ ನುಗ್ಗುತ್ತಾಳೆ. ಕಿಟಕಿಗಳನ್ನು ತೆರೆದು, ಬೆಳಕು, ಗಾಳಿಗಳನ್ನು ಒಳಬಿಡುತ್ತಾಳೆ. ತಂದೆಯ ವಿರೋಧವನ್ನು ಲೆಕ್ಕಿಸದೇ, ಏಕಾಂಗಿಯಾಗಿ ಕೋಣೆಯಲ್ಲಿ ನಿಂತು, ಯುದ್ಧೋಪಾದಿಯಲ್ಲಿ ಆ ಎಲ್ಲ ಹಕ್ಕಿಗಳನ್ನು ಚೆದುರಿಸಿ ಓಡಿಸುತ್ತಾಳೆ. ತಂದೆ ನಿರ್ವಿಣ್ಣನಾಗಿ ನೋಡುತ್ತ ನಿಲ್ಲುತ್ತಾನೆ. ಕ್ಷಣಗಳ ನಂತರ ಅವನು, ಅರಸೊತ್ತಿಗೆಯನ್ನು, ಸಿಂಹಾಸನವನ್ನು ಕಳೆದುಕೊಂಡು ರಾಜ್ಯಭ್ರಷ್ಟನಾದ ಅರಸನಂತೆ ಅಟ್ಟವನ್ನಿಳಿದು ಬರುತ್ತಾನೆ ಎಂಬ ವಿವರದೊಂದಿಗೆ ಕತೆ ಮುಗಿಯುತ್ತದೆ. ■




# ಮೀಸೆ

ಶ್ರೀದೇವಿ ಕೆರೆಮನೆ

"ಮೀಸೆ ಹೊತ್ತ ಗಂಡಸಿಗೇನ್ ಡಿಮಾಂಡಪ್ಪೊ ಡಿಮಾಂಡು". ಬಹುಶಃ ಮೀಸೆ ಎಂದಕೂಡಲೇ ನೆನಪಾಗುವುದು ಈ ಕನ್ನಡದ... ಅಲ್ಲಲ್ಲಾ ಇಂಗ್ಲಿಷ್ ಮಿಶ್ರಿತ ಕನ್ನಡ ಸಿನಿಮಾ ಹಾಡು ಅಲ್ವಾ?

ಗೊತ್ತಾಯ್ತು ಬಿಡಿ ಸ್ವಾಮಿ, ಈ ಹುಡುಗಿಗೆ ಯಾಕೆ ಮೀಸೆ ತಂಟೆ ಅಂತಾ ಮೂಗು ಮುರಿಯುತ್ತಿದ್ದೀರಿ. ಅದೇ ಸರ್, ನಿಮ್ಮ ಸೊಟ್ಟಾದ ಮೂಗಿನ ಕೆಳಗೆ ಇರುವುದನ್ನೇ 'ಮೀಸೆ' ಎನ್ನೋದು. ಹೌದು ಕಣ್ರಿ... ನನಗೆ ಚಿಕ್ಕಂದಿನಿಂದಲೂ ಈ ಮೀಸೆ ಬಗ್ಗೆ ಬಹಳ ಪ್ರೀತಿ. ತಪ್ಪು ತಿಳಿಯಬೇಡಿ, ಪ್ರೀತಿ ಅಂದ್ರೆ ಒಂದು ರೀತಿ ಕುತೂಹಲ, ಒಂದು ರೀತಿ ಸೆಳೆತ. ಇದಕ್ಕೆ ಕಾರಣ ಚಿಕ್ಕಂದಿನಿಂದಲೂ ನಾನು 'ಅಂಕಲ್' ಎಂದು ಕರೆಯುತ್ತಿದ್ದ ಮಹಾಶಯರೊಬ್ಬರು. ಅವರ ಮೀಸೆಯೋ... ಏನೋ ಹೇಳ್ತಾರಲ್ಲ 'ಗಿರಿಜಾ ಮೀಸೆ'ಯೋ 'ಗಜಮೀಸೆ'ಯೋ... ಯಾವುದೋ ಒಂದು. ಅಷ್ಟು ದಪ್ಪದ ಮೀಸೆ. ಅವರ ಭಾರೀ ಗಾತ್ರದ ಮೀಸೆ ಕಂಡು, ನಾನು ಅವರ ಬಳಿ ಸುಳಿಯಲೇ ಹೆದರುತ್ತಿದ್ದೆ. ನಾನೆಲ್ಲಾದರೂ ಹಠ ಮಾಡಿ ತರಲೆ ಮಾಡಿದೆನೋ, ನಮ್ಮಮ್ಮ, "ಅಂಕಲ್‌ನ ಕರೀತೀನಿ" ಅಂತಾ ರೀಲು ಬಿಡೋರು. ಅಷ್ಟಕ್ಕೇ ನನ್ನ 'ಪುಂಗಿ' ಬಂದ್. ದೊಡ್ಡವಳಾದಂತೆಲ್ಲ ಸ್ವಲ್ಪ ಧೈರ್ಯ ಬಂತೋ, ಇಲ್ಲ ಆ ಮೀಸೆ ನೋಡಿ ಅಭ್ಯಾಸ ಆಯ್ತೋ... ಒಟ್ಟಿನಲ್ಲಿ ಅವರ ಮೀಸೆ ಮುಟ್ಟುವಷ್ಟು ಧೈರ್ಯ ಬಂತು. ಆದರೂ ಅದು ಹೇಗೆ ಹಾಗೆ ಮೀಸೆ ಬೆಳೆಸಿದ್ದಾರೆ ಎಂಬುದೇ ನನ್ನ ಯೋಚನೆ. ಅವರನ್ನು ಕೇಳಿದ್ದಕ್ಕೆ, "ಹೌದಮ್ಮ, ಮೀಸೆಗೆ ಗೊಬ್ಬರ ಹಾಕಿ ಬೆಳೆಸುತ್ತಿದ್ದೇನೆ" ಎಂದು ಉತ್ತರಿಸಿದರು. ನನಗೇ ನಾನು, ಇದ್ದಿರಬಹುದೇನೋ ಎಂದು




ಸಮಜಾಯಿಸಿಕೊಂಡಿದ್ದೆ. ಆದರಲ್ಲೂ ಒಂದು ಆಸೆ. ಕಿರಿ ಬೆರಳಷ್ಟಿರುವ ನನ್ನ ಕೂದಲಿಗೂ ಏನಾದರೂ ಗೊಬ್ಬರ ಇದ್ದಿದ್ದರೆ... ಎಂದು ಕೇಳಿದರೆ, ''ಇಲ್ಲಮ್ಮ ಹಾಗೇನಾದರೂ ತಲೆಕೂದಲಿಗೆ ಗೊಬ್ಬರ ಇದ್ದಿದ್ದರೆ ನಾನು ಹೀಗೆ...'' ಎನ್ನುತ್ತ ತಮ್ಮ ಸೋಲಾರ ಗಡಿಗೆಯನ್ನು ಸವರಿ ಹೇಳಿದ್ದರು. ಎಷ್ಟೊ ವರ್ಷಗಳವರೆಗೆ ಅದನ್ನು ನಿಜವೆಂದೇ ತಿಳಿದ ನನ್ನ ಮೂರ್ಖತನ, ಮುಗ್ಧತೆಗೆ ಈಗಲೂ ನಗು ಬರುತ್ತದೆ.

ಮೀಸೆ ಎಂದಾಗಲೆಲ್ಲ ನನಗೆ ಇನ್ನೊಂದು ಜೋಕ್ ನೆನಪಾಗುತ್ತದೆ. ಒಂದು ಕಾಲೇಜಿನಲ್ಲಿ ಆಶುಭಾಷಣ ಸ್ಪರ್ಧೆ ಇತ್ತಂತೆ. ಒಂದು ಹುಡುಗಿ ವೇದಿಕೆಗೆ ಹೋಗಿ ಚೀಟಿ ಆರಿಸಿ, ಸುಮ್ಮನೇ ನಿಂತಿದ್ದಳಂತೆ. ಅವಳ ಮೌನ ಕಂಡ ನಿರ್ಣಾಯಕರು, ಯಾಕೆ ಏನಾಯ್ತಮ್ಮ? ಮಾತನಾಡು ಎಂದಿದ್ದಕ್ಕೆ, ಆಕೆ ತಲೆ ತಗ್ಗಿಸಿ, ಏನು ಮಾತನಾಡೋದು ಅಂತಾನೇ ತಿಳೀತಿಲ್ಲ ಸರ್... ನನಗೆ ಮೀಸೆ ಬಂದಿದೆ ಎಂದಳಂತೆ. ಅವಳ ಮಾತು ಎಲ್ಲರ ನಗೆಗೆ ವಸ್ತುವಾಯ್ತು ಅಂತ ಪ್ರತ್ಯೇಕ ಹೇಳಬೇಕಾಗಿಲ್ಲ ಅಲ್ವಾ?

ಮೀಸೆ ಇರುವ ಗಂಡಸರಿಗೆ ತುಂಬಾ ಡಿಮೊಂಡಂತೆ, ಇದ್ದಿರಬಹುದು. ಲಕ್ಷ ಲಕ್ಷ ವರದಕ್ಷಿಣೆ ನೀಡಿ, ಹುಡುಗಿಯರನ್ನು ಕೊಟ್ಟು, ಕಾಲು ತೊಳೆದು, ಕೈ ಮುಗಿದು, ವಿಜೃಂಭಣೆಯಿಂದ ಮದುವೆ ಮಾಡುವದನ್ನು ಕಂಡರೆ ಹಾಗೇ ಅನ್ನಿಸುತ್ತದೆ. ಅದಕ್ಕೇ ನಾನೂ ಯೋಚಿಸುತ್ತಿರುತ್ತೇನೆ. ನಾನು ಪುರುಷರ ತರಹ ವೇಷ ಧರಿಸಿ, ಮೀಸೆ ಅಂಟಿಸಿಕೊಂಡರೆ ನನಗೂ ಲಕ್ಷ ಲಕ್ಷ ಕೊಡಬಹುದೆ? ಆದ್ರೆ ಅದರೊಟ್ಟಿಗೇ ಬರುವ ಹುಡುಗಿಯನ್ನು ಏನು ಮಾಡುವುದೆಂದು ತಿಳಿಯದಿದ್ದುದರಿಂದ ಸದ್ಯಕ್ಕೆ ಆ ಯೋಚನೆಗೆ

ಫುಲ್‌ಸ್ಟಾಪ್ ಹಾಕಿದ್ದೇನೆ. ಇಲ್ಲಾ ಮಾರಾಯ್ರೆ. ನಾನು ಹೇಳಿದ್ದರಲ್ಲಿ ಏನೋ ತಪ್ಪಿದೆ. ಯೋಚಿಸಿ ನೋಡಿ. ಈಗಿನ ಕಾಲದ ಹುಡುಗರಿಗೆ ಮೀಸೆನಾದ್ರೂ ಎಲ್ಲಿರುತ್ತೆ? ಎಲ್ಲವೂ ಮೀಸೆ ಕೆತ್ತಿದ ಚಾಕ್ಲೇಟ್ (?) ಮುಖಗಳೇ. ಅದು ತಮಗೆ ಒಪ್ಪುತ್ತೋ ಇಲ್ಲವೋ ಎಂದು ಯೋಚಿಸದೇ, ಈ 'ಖಾನ್'ಗಳ, 'ಕಪೂರ'ರ, 'ದತ್ತ'ರ ಅನುಕರಣೆ ಮಾಡುತ್ತಾರೆ. ಆದರೆ ಹಾಗೆ ಕಾಣದೇ, ಅವರ ಅತೀ ಪೂರ್ವಜರಂತೆ ಕಾಣುತ್ತಾರೆ ಎಂದು ಅವರಿಗೆ ಹೇಳುವುದಾದರೂ ಯಾರು?

ಹಿಂದೆ, ಮಹಾಭಾರತದ ಗದಾಯುದ್ಧ ಸಂದರ್ಭದಲ್ಲಿ ದುರ್ಯೋಧನ, ಭೀಮನಿಗೆ 'ಮೀಸೆ ಇಲ್ಲದ ಗಂಡಸು' ಅಂತಾನೆ ಎನ್ನುವ ಪ್ರಸ್ತಾಪ ಬಂದಿದೆಯಂತೆ. ದುರ್ಯೋಧನನ ಪ್ರಕಾರ, ಮೀಸೆ ಇಲ್ಲದ ಭೀಮ, ಮೀಸೆ ಕೆತ್ತಿ ಬೃಹನ್ನಳೆ ವೇಷತೊಟ್ಟ ಅರ್ಜುನ, ಎಲ್ಲರೂ ಹೆಂಗಳೆಯರು. ಹಾಗೆ ನೋಡಿದರೆ ನಮ್ಮ ದೇವಾನುದೇವತೆಗಳೆಲ್ಲ ಇಂಥವರೇ! ಯಕ್ಷಗಾನದ ಪಾತ್ರಗಳನ್ನು ನೋಡಿ, ಇಲ್ಲವೇ ಕ್ಯಾಲೆಂಡರೋ, ವರ್ಣಚಿತ್ರಗಳನ್ನೋ ನೋಡಿ. ಈ 'ದೇವತೆ'ಗಳು ಎನ್ನಿಸಿಕೊಂಡವರ ಮುಖದಲ್ಲಿ ಮೀಸೆ ಇಲ್ಲದಿರುವುದು ಎದ್ದು ಕಾಣುವ ಕೊರತೆ. ಇದರ ಕುರಿತು ನಾನು ಬಹಳಷ್ಟು ಚಿಂತಿಸಿದ್ದೇನೆ. ರಾಕ್ಷಸ ಪಾತ್ರಗಳಿಗ, ಅರ್ಭಟದ ಪಾತ್ರಗಳಿಗೆ ಭಾರಿ ಗಾತ್ರದ ಮೀಸೆ ಅಂಟಿಸುವ ಈ ಯಕ್ಷಗಾನ, ನಾಟಕದವರು, ಈ ದೇವರನ್ನೆಲ್ಲ ಬೋಳು ಬೋಳಾಗಿ ತೋರಿಸುವುದಾದರೂ ಯಾಕೆ? ಬಹಳಷ್ಟು ಯೋಚಿಸಿ ಒಂದು ನಿರ್ಣಯಕ್ಕೆ ಬಂದಿದ್ದೇನೆ. ಮೀಸೆ ಇರುವ 'ದೈತ್ಯ'ರೆಲ್ಲ ಹಿಂದೆ, ಯುದ್ಧಗಳಲ್ಲಿ, ನಿಯತ್ತಿನಿಂದ, ಮೋಸದ ತಂಟೆಗೆ ಹೋಗದೆ, ತಮ್ಮ ಬಾಹುಬಲ, ಭುಜಬಲಗಳಿಂದ ಹೋರಾಡುತ್ತಿದ್ದರು. ಆದರೆ ಮೀಸೆ ಇಲ್ಲದ ಈ ದೇವತೆಗಳು, ಹೇಗೆ ಮಾಯಾ ಯುದ್ಧ ಮಾಡಬಹುದು... ಹೇಗೆ ಮೋಸ ಮಾಡಬಹುದು ಎಂದೇ ಹೆಚ್ಚಾಗಿ ಯೋಚಿಸುತ್ತಿದ್ದುದು ಕಂಡುಬರುತ್ತದೆ. ಇಂದಿಗೂ, ನನ್ನ ಅಭಿಪ್ರಾಯದಂತೆ ಮೀಸೆ ಇರುವ ಗಂಡಸರಿಗೆ ಇರುವಷ್ಟು ಆತ್ಮವಿಶ್ವಾಸ ಮೀಸೆ ಇಲ್ಲದ ಪುರುಷರಿಗೆ (?!!) ಇರುವುದು ಕಡಿಮೆ. ನೀವೇ ಯೋಚಿಸಿ ನೋಡಿ. ನನ್ನ ಅಭಿಪ್ರಾಯ ಸರಿಯೋ ತಪ್ಪೋ ಎಂದು ನಿಮಗೇ ತಿಳಿದೀತು. ಆದ್ದರಿಂದಲೇ ನಾನು, ಮೀಸೆ ಇರುವ... ಕಂಬಳಿ ಹುಳದಂತಹುದಲ್ಲದಿದ್ದರೂ, ಸುಂದರವಾದ ಚಿಗುರು ಮೀಸೆಯ 'ರಫ್ ಅಂಡ್ ಟಫ್' ಹುಡುಗನನ್ನು ಹುಡುಕುತಿದ್ದೇನೆ. ಆದರೆ ಇತ್ತೀಚಿನ ಒಂದು ಸಮೀಕ್ಷೆಯ ಪ್ರಕಾರ, ಹುಡುಗಿಯರು, ಮೀಸೆ ಇಲ್ಲದ, ನಯವಾದ ಮುಖ ಹೊಂದಿರುವ ಐಸ್‌ಕ್ರೀಂ ಹುಡುಗರನ್ನೇ ಹೆಚ್ಚು ಇಷ್ಟಪಡುತ್ತಾರಂತೆ. ಅವರ ಹೇಳಿಕೆಯಂತೆ, ಮನಸ್ಸೂ, ಮುಖದಂತೆ ನಯವಾಗಿ (ಅಥವಾ ಖಾಲಿಯಾಗಿ...?) ಇರುತ್ತದಂತೆ. ಇರಲಿ... ಅವರವರ ಅಭಿಪ್ರಾಯ ಅವರವರಿಗೆ.

ನನ್ನೊಬ್ಬಳು ಗೆಳತಿಗೆ ಮೀಸೆ ಎಂದರೆ ಆಗುವುದಿಲ್ಲ. ಆಕೆಯ ಹುಡುಗ ಹತ್ತಿರ ಬಂದರೆ ಕೆನ್ನೆಗೆ ಮೀಸೆಯೇ ಚುಚ್ಚುತ್ತದಂತೆ. ಆದ್ದರಿಂದ ಆಕೆ ಮೀಸೆಯ ಬದ್ಧ ವೈರಿ ಆಗಿಬಿಟ್ಟಿದ್ದಾಳೆ. ಹಾಗೆಯೇ,



ನನ್ನೊಬ್ಬ ಸ್ನೇಹಿತನಿಗೆ, ತುಟಿಯ ಮೇಲಿನ ಕರಿಯಾದ ಮೀಸೆಯನ್ನು ಹಲ್ಲಿನಿಂದ ಕಚ್ಚಿ ಎಳೆಯುವ ಕೆಟ್ಟ ಚಾಳಿ. ಹಾಗೆ ಮಾಡಿದಾಗಲೆಲ್ಲ ಕೂದಲು ಎಳೆ ಹರಿದು ಆತನ ಮೀಸೆ ಇಲಿ ತಿಂದಂತೆ ಆಗಿದೆ. ಆದರೆ ಕೇಳಿದವರಿಗೆಲ್ಲ ಶೇವ್ ಮಾಡುವಾಗ ಬ್ಲೇಡ್ ತಾಗಿತು ಎಂದು ರೀಲು ಬಿಡುತ್ತಾನೆ.

ನನ್ನ ಅಣ್ಣ ಉಲ್ಲಾಸನ ಪ್ರಕಾರ, ಮೂಗು ಗಂಡಸರಿಗೆ ಇಂಪಾರ್ಟೆಂಟ್ ಅಂತೆ. (ಇದ್ದರೂ ಇರಬಹುದು. ಆತನ ಮೂಗು ಬಂದೂಕಿನ ನಳಿಗೆಯಂತೆ ಮಾರುದ್ದ ಚಾಚಿಕೊಂಡಿದೆ) ಅದಕ್ಕೆ ಅಂಡರ್‌ಲೈನ್ ಹಾಕಿದಂತೆ ಮೀಸೆ ಇದೆಯಂತೆ. ಮುಖ್ಯವಾದ ವಿಷಯದ ಕೆಳಗೆ ಗೆರೆ ಎಳೆದು ಸೂಚಿಸೋಲ್ಲವೇ ಹಾಗೆ. ಆದರೆ ಹೆಂಗಸರಿಗೆ ಇಂಪಾರ್ಟೆಂಟ್ ಯಾವುದೆಂದು ನಾನು ಕೇಳಿದರೆ, ''ಅದು ನಿಮಗೆ ಗೊತ್ತು'' ಎಂದು ಹುಳ್ಳಗೆ ನಗುತ್ತಾನೆ. ನನ್ನ ಚಿಕ್ಕಪ್ಪನ ಮಗ ದಿವ್ಯಾನಂದ, ಈಗ ಎರಡನೇ ತರಗತಿ. ಊಟ ಮಾಡುವುದೆಂದರೆ ಆತನಿಗೆ ಮಹಾಕಷ್ಟ. ಆದರೆ ಮೀಸೆ ತುಂಬಾ ಇಷ್ಟ. (ನನ್ನಂತೆ). ಅದಕ್ಕೇ ಆತನಿಗೆ ಊಟ ಮಾಡಿಸುವಾಗಲೆಲ್ಲ, 'ಮೀಸೆ ಬೇಗ ಬರಬೇಕೆಂದರೆ ಹೆಚ್ಚು ಊಟ ಮಾಡಬೇಕು' ಎಂದು ಪುಸಲಾಯಿಸಿ ಊಟ ಮಾಡಿಸುತ್ತೇನೆ. ನೀವೇ ನೋಡಿ ಮೀಸೆ ಎಂತಹ ಉಪಕಾರಿ ಎಂದು.

ಮೀಸೆಗಳಲ್ಲಿ ಚಿಗುರು ಮೀಸೆ, ಗಿರಿಜಾ ಮೀಸೆ, ಫ್ರೆಂಚ್ ಕಟ್ ಹೀಗೆ ಅನೇಕ ವಿಧ, ತರತರಹದ ಮೀಸೆಗಳು. ಆದರೆ ನನ್ನದೊಂದು ಸಮಸ್ಯೆ. ಈ 'ಗಿರಿಜಾ ಮೀಸೆ' ಅಂದರೇನು? ಅಲ್ಲಾ, ಗಿರಿಜಾ ಹೆಣ್ಣು... ಆಕೆಗೆಂತಹ ಮೀಸೆ ಮಾರಾಯ್ರೆ? ಶಿವನೆಲ್ಲಾದ್ರೂ ಕೇಳಿದ್ರೆ ಹೌಹಾರಿಯಾನು. ತನಗೇ ಮೀಸೆ ಇಲ್ಲ, ಇನ್ನು ತನ್ನ ಹೆಂಡತಿಗೆ ಎಲ್ಲಿಂದ ಬಂತು ಮೀಸೆ ಎಂದು. ಹೀಗೆ ಹೆಸರು ಬರಲು ನಿಮಗೇನಾದ್ರೂ ಕಾರಣ ಗೊತ್ತಾ? ಈ 'ಕೌರವ', 'ಲಂಕೇಶ' ಬಿ.ಸಿ. ಪಾಟೀಲ್ ಆಗಲಿ, ಆ ವೀರಪ್ಪನ್ ಆಗಲಿ ಕೈಗೇ ಸಿಕ್ಕೋಲ್ಲ ಅಂತಾರೆ. ಸಿಕ್ಕಿದ್ದರೆ ಅವರ ಗಿರಿಜಾ ಮೀಸೆಯ ವೃತ್ತಾಂತ ತಿಳಿಯಬಹುದಿತ್ತು.

ನಿಮಗೆ ಗೊತ್ತೆ? ಪೊಲೀಸ್ ಇಲಾಖೆಯಲ್ಲಿ ದೊಡ್ಡ ಮೀಸೆ ಬೆಳೆಸಿದವರಿಗೆ ಬಹುಮಾನ ಕೊಡುವ ಪರಿಪಾಠ ಇದೆ ಎಂದು. ಎರಡೂ ಕಡೆ ಮೀಸೆ ಹುರಿ ಮಾಡಿ, ಮೇಲೆ ಲಿಂಬೆ ಹಣ್ಣು ಇಡುವಂತಹ ಮಹಾ ಮೀಸೆವಾಲರು ಇಂತಹ ಸ್ಪರ್ಧೆಗೆ ಅರ್ಹರಂತೆ. ನನಗೊಂದು ಐಡಿಯಾ ಹೊಳೆದಿದೆ. ಎಲ್ಲಾ ಪೊಲೀಸರಿಗೂ ವೀರಪ್ಪನ್‌ನಿಂದ ಮೀಸೆ ಬೆಳೆಸುವ ಕುರಿತು ತರಬೇತಿ ಕೊಡಿಸಿದರೆ ಹೇಗೆ? ಇರಲಿ, ಮುಂದಿನ ಸಲ ಕಮೀಷನರ್‌ರು ಸಿಕ್ಕಾಗ ಈ ಸುಪರ್ ಐಡಿಯಾವನ್ನು ಅವರ ಮುಂದಿಡುತ್ತೇನೆ. ನೋಡೋಣ ಏನಂತಾರೋ? ಅಂದಹಾಗೆ, ವೀರಪ್ಪನ್ ಸಿಕ್ಕರೆ ಯಾರ್‍ಯಾರಿಗೆ ಖುಷಿ ಆಗುತ್ತೆ, ಪ್ರಯೋಜನ ಆಗುತ್ತೆ ಅಂತಾ ನಂಗೊತ್ತಿಲ್ಲ. ನನಗಂತೂ ಖುಷಿ ಜೊತೆಗೆ ಪ್ರಯೋಜನ ಇದೆ. ಆತನ ಮೀಸೆ ಕುರಿತು ಪ್ರಬಂಧ ಬರೆದು, ಪ್ರಕಟ ಮಾಡಿ, 'ಡಾ॥' ಆಗಬೇಕು ಎಂದುಕೊಂಡಿದ್ದೇನೆ. ಅಯ್ಯೋ ದೇವರೆ! ಡಾ॥ ಅಂದರೆ ಢಾಕು ಅಲ್ಲ, ಡಾಕ್ಟರೇಟ್ ಪದವಿ.



ಯಾರೋ, ಮೀಸೆಯನ್ನು ಮೀಟರ್-ಕಿಲೋ ಮೀಟರ್ ಬೆಳೆಸಿ ಗಿನ್ನಿಸ್ ದಾಖಲೆ ಮಾಡಿದ್ದಾರಂತೆ. ಇನ್ಯಾರೋ, ಮೀಸೆಯಿಂದ ಸಾಮಾನು ತುಂಬಿದ ಟ್ರಕ್ ಎಳೆದು ಸಾಹಸ ಪ್ರದರ್ಶಿಸಿದರಂತೆ. ಅಂತೂ ಮೀಸೆಯ ದಾಖಲೆ-ಸಾಹಸಗಳು ಹೆಚ್ಚುತ್ತಲೇ ಇವೆ. ಹೆಚ್ಚುತ್ತಲೇ ಇರಲಿ ಎನ್ನುವುದು ನನ್ನಂತಹ ಮೀಸೆ ಪ್ರಿಯರ ಹಾರೈಕೆ ಕೂಡ. ಮೀಸೆಯ ಕುರಿತು ಅನೇಕ ಗಾದೆ ಮಾತುಗಳೂ ಬಳಕೆಯಲ್ಲಿವೆ. 'ಜಟ್ಟಿ ಬಿದ್ರೂ, ಮೀಸೆ ಮಣ್ಣಾಗಲಿಲ್ಲ', 'ಮೀಸೆಗೆ ತುಪ್ಪ ಸವರುವುದು' ಇತ್ಯಾದಿ ಇತ್ಯಾದಿ.

ಮೀಸೆ ಮನುಷ್ಯರಿಗಷ್ಟೇ ಅಲ್ಲ. ಪ್ರಾಣಿಗಳಿಗೂ ಇರುತ್ತದೆ.

ಜಿರಲೆ, ಸೊಳ್ಳೆ, ಇಲಿಗಳಲ್ಲೆಲ್ಲ ಇದು 'ಆ್ಯಂಟೇನಾ' ಎಂದೇ ಪ್ರಸಿದ್ಧಿ. ಜಿರಲೆಯ ಮೀಸೆ ಒಳ ತೂರಿದರೆ ಸಾಕು. ಜಿರಲೆಯೇ ಒಳ ನುಗ್ಗುತ್ತದೆ ಎಂದು ನಮ್ಮಮ್ಮ ಹೇಳುತ್ತಿದ್ದರು. ಹುಲಿ ಮೀಸೆಯಂತೂ ಬಹು ಉಪಯೋಗಿ ಎಂದು ಅಮ್ಮ ಹೇಳಿದ ನೆನಪು. ಇಲಿ ಮೀಸೆ, ನರಿ ಮೀಸೆ, ಸಿಂಹದ ಮೀಸೆಗಳೆಲ್ಲ ಕಾಮಿಕ್ಸ್‌ಗಳಲ್ಲಿ ಮಕ್ಕಳ ಮೈನವಿರೇಳಿಸುವ ಅಂಗೋಪಾಂಗಗಳು.

ಅಂದ ಹಾಗೆ, ನಾನು ಮೊದಲು ಹೇಳಿದ ಅಂಕಲ್ ಸದ್ಯ ತೀರಿಕೊಂಡರು. ಮೇಲಿಂದ ದುಃಖ, ಸಂತಾಪ ಸೂಚಿಸಿದರೂ, ಒಳಗಿಂದೊಳಗೇ ನನಗೆ ತುಂಬಾ ಖುಷಿಯಾಗಿದೆ. ಯಾಕೆಂದರೆ, ಎಲ್ಲೇ ಇರಲಿ, ಯಾವುದೇ ವಿಷಯವಾಗಲಿ, ತಮ್ಮ ಮೀಸೆ ತೂರಿಸದೇ ಬಿಟ್ಟ ಜನವೇ ಅಲ್ಲ ಅದು. ಮಹಾ ತರಲೆ. ಈಗೊಂದೆರಡು ತಿಂಗಳ ಹಿಂದೆ ನನ್ನನ್ನು ನೋಡಲು ಬಂದ ಹುಡುಗನ ಬಳಿ ನನ್ನ ಗೇಣುದ್ದ ತಲೆಕೂದಲನ್ನು ತೋರಿಸಿ, 'ತಲೆ ಕೂದಲು ಬೆಳೆಯಲು ಹಾಕುವ ಗೊಬ್ಬರ ಇದೆಯೋ ನಿನ್ನ ಬಳಿ' ಎಂದು ಪೀಠಿಕೆ ಹಾಕಿ, ನನ್ನ ಮೂರ್ಖತನ (ಮುಗ್ಧತನ...!) ಸಾಹಸ, ಹಠಮಾರಿತನವನ್ನೆಲ್ಲ ವಿಸ್ತಾರವಾಗಿ ವಿವರಿಸಿ ಪಟ್ಟಿ ಕೊಟ್ಟಾಗ, ಬಂದ ಆ ಹುಡುಗ ಪೇರಿ. ಇಂತಹ ಹುಡುಗಿಯನ್ನು ನಿಭಾಯಿಸಲಾಗದು ನನ್ನ ಬಳಿ ಎಂದು ಆತ ನನ್ನನ್ನು ತಿರಸ್ಕರಿಸುವಂತೆ ಮಾಡಿದ ಮಹಾ ಕಟುಕ ಈ ಅಂಕಲ್. ಇದೊಂದು ಸ್ಯಾಂಪಲ್ ಅಷ್ಟೇ. ಅವರ ಅವಾಂತರಕ್ಕೆ ಕೊನೆಯೇ ಇಲ್ಲ. ಆದರೆ ಈಗ ಅವರಿಲ್ಲ. ಹೀಗಾಗಿ ಯಾವುದಾದರೂ ಬಕರ ಬಲೆಯೊಳಗೆ ಸಿಕ್ಕಿ ಬೀಳಬಹುದೇ ಎಂದು ಕಾಯುತ್ತಿದ್ದೇನೆ. ವಾಚಕ ಮಹಾಶಯರೇ, ನಿಮ್ಮ ಕಡೆ ಎಲ್ಲಾದರೂ ಸುಂದರ ಚಿಗುರು ಮೀಸೆಯ, ಸುಂದರ ನೌಕರಿ ಇದ್ದು ಸುಂದರವಾದ ಕಾರು, ಬೈಕು ಇರುವ ಸುಂದರ ಗುಣದ ಸುಂದರ ವ್ಯಕ್ತಿಯಿದ್ದರೆ ದಯವಿಟ್ಟು ನನಗೆ... ಬೇಡ ಬೇಡ ನಮ್ಮಪ್ಪನಿಗೆ ತಿಳಿಸಿ. ತುಂಬಾ ಉಪಕಾರ ಆಗುತ್ತದೆ. ಥ್ಯಾಂ! ನೆನಪಿರಲಿ ನನ್ನ ಪಟ್ಟಿಯಲ್ಲಿ ಏನೇ ವ್ಯತ್ಯಾಸವಾದರೂ ಚಿಂತೆ ಇಲ್ಲ, ಆದರೆ ಸುಂದರ ಮೀಸೆ ಮಾತ್ರ ಕಡ್ಡಾಯ. ತಿಳಿಸುತ್ತೀರಲ್ಲವೇ?

■



ಸರ್... ನನಗೆ ಮೀಸೆ ಬಂದಿದೆ ಎಂದ್ಹಾಗಲೆ
ಬಿಡಿಯುರಿ ಕೇಳುತ್ತೇನೆ



ಸಂದರ್ಶನ

■ ಸುಮಂಗಲಾ ಬಾದರದಿನ್ನಿ

# (ಜೀವ)ಕೋಶದಲ್ಲಿ ಆಕಾಶ ಕಾಣುವ
# ನಾಗಲೋಟಿಮಠ

‘ಮ್ಯೂಸಿಯಂ’ ಅಂದಾಕ್ಷಣ ಹಳೆ ಕಾಲದ ಕತ್ತಿ, ಗುರಾಣಿ, ಶಿಲ್ಪಕಲೆಗಳ ವಿಷಣ್ಣ ಅವಶೇಷಗಳೇ ನಮ್ಮ ಕಣ್ಣಿಗೆ ಕಟ್ಟುತ್ತವೆ. ‘ವೈದ್ಯಕೀಯ ಮ್ಯೂಸಿಯಂ’ಗಳ ಕಲ್ಪನೆ ನಮಗಿಲ್ಲ. ರೋಗಕ್ಕೆ ಸಂಬಂಧಪಟ್ಟ ಅವಯವ, ಅಂಗಾಂಶಗಳನ್ನು ಸೂಕ್ತ, ಖಚಿತ ಮಾಹಿತಿಗಳೊಂದಿಗೆ ಕಾದಿಡುವ ಈ ಮ್ಯೂಸಿಯಂಗಳು, ವೈದ್ಯಕೀಯ ಶಾಸ್ತ್ರದ ಬೆಳವಣಿಗೆಗೆ ಉತ್ತಮ, ಉಪಯುಕ್ತ ಆಕರಗಳಾಗಿ ಬಹುಕಾಲ ನಿಲ್ಲುವಂಥವು. ನಾಡಿನ ಪರಿಣತ ಪೆಥಾಲಜಿಸ್ಟ್ ಡಾ|| ಎಸ್.ಜೆ. ನಾಗಲೋಟಿಮಠ, ನಮ್ಮ ನಾಡಿನಲ್ಲಿರುವ ಇಂತಹ ಮೂರು ಮ್ಯೂಸಿಯಂಗಳ ರೂವಾರಿಯಾಗಿದ್ದಾರೆ. ಒಳ್ಳೆಯ ವೈದ್ಯ, ಆಡಳಿತಗಾರ, ಶಿಕ್ಷಕ ಆಗಿರುವ ಅವರು ಕನ್ನಡದಲ್ಲಿ ವಿಜ್ಞಾನ ಸಂಬಂಧ ಪುಸ್ತಕಗಳನ್ನೂ ಬರೆದಿದ್ದಾರೆ. ವಿಜ್ಞಾನ ಕುರಿತ ತಮ್ಮ ಸರಳ ಉಪನ್ಯಾಸಗಳಿಗಾಗೂ ಪ್ರಸಿದ್ಧರು. ದೇಹಾಂಶಗಳನ್ನು ಸೂಕ್ಷ್ಮದರ್ಶಕದಲ್ಲಿ ನೋಡಿ, ಅರ್ಥೈಸುವ ಈ ನಿಪುಣನ ಪ್ರೀತಿಯ ಹವ್ಯಾಸ, ದೂರದರ್ಶಕದಿಂದ ಆಕಾಶವನ್ನು ದಿಟ್ಟಿಸುವುದು ಮತ್ತು ಇತರರಿಗೆ ಸೌರವ್ಯೂಹವನ್ನು ವರ್ಣಿಸುವುದು!

ಇಂಥ ಅಪರೂಪದ, ಕುತೂಹಲಕಾರಿ ವ್ಯಕ್ತಿತ್ವದ ನಾಗಲೋಟಿಮಠರೊಂದಿಗೆ ಇಲ್ಲಿ ಮಾತನಾಡಿರುವ ಸುಮಂಗಲಾ ಬಾದರದಿನ್ನಿ, ವೃತ್ತಿಯಿಂದ ರಸಾಯನ ಶಾಸ್ತ್ರದ ಅಧ್ಯಾಪಿಕೆ ಮತ್ತು ಪ್ರವೃತ್ತಿಯಿಂದ ಕತೆಗಾರ್ತಿಯಾಗಿದ್ದಾರೆ.

‘‘ಪೆಥಾಲಜಿ ಅಂದ್ರೆ ಅಕ್ಷರಶಃ ಅನುವಾದ ‘ವಿಕೃತ ವಿಜ್ಞಾನ ಶಾಸ್ತ್ರ’. ಕೆಲವು ವೈದ್ಯರು ಇದಕ್ಕೆ ‘ರೋಗ ನಿದಾನ ಶಾಸ್ತ್ರ’ ಅಂತಲೂ ಹೇಳ್ತಾರೆ. ‘ರೋಗ ನಿದಾನ ಶಾಸ್ತ್ರ’ ಅಂದ್ರೆ, ಮುಖ ನೋಡಿ, ಪಲ್ಸ್ ನೋಡಿ ಹೇಳಬಹುದಾದದ್ದು... ಅಲ್ಲಿ ಪೆಥಾಲಜಿ ಇರಂಗಿಲ್ಲ. ಬೇರೆ ಬೇರೆ ರೋಗದಿಂದ ದೇಹದಲ್ಲಾಗುವ ಬದಲಾವಣೆಯನ್ನು ಅಧ್ಯಯನ ಮಾಡುವುದು ಪೆಥಾಲಜಿ. ವಿರೂಪಾಕ್ಷ ಅಂದಂಗ... ಇದೂ ವಿಕೃತ ವಿಜ್ಞಾನ ಶಾಸ್ತ್ರ’’ ಎನ್ನುತ್ತಾರೆ ನಾಗಲೋಟಿಮಠ.

ಏಷ್ಯಾದಲ್ಲಿಯೇ ನುರಿತ ಪೆಥಾಲಜಿಸ್ಟ್ ಎಂದು ಹೆಸರು ಪಡೆದಿರುವ ಡಾ. ಎಸ್. ಜೆ. ನಾಗಲೋಟಿಮಠರು ಪ್ರಥಮ ಬಾರಿಗೆ ಮ್ಯೂಸಿಯಂ ಸ್ಥಾಪಿಸಿದ್ದು ಬೆಳಗಾವಿಯಲ್ಲಿ. ‘‘20 ವರ್ಷ ಬೆಳಗಾಂವಾಗ ಇದ್ದಾಗ ವಯಸ್ಸೂ ಕಡಿಮೆ ಇತ್ತು, ಭಾಳಾ active ಇದ್ದೆ. ಪೂನಾ, ಬಾಂಬೆ, ಮದ್ರಾಸದಾಗಿನ ದೊಡ್ಡ ದೊಡ್ಡ ಸರ್ಜನ್ಸ್ ನಿನ್ನ ರಿಪೋರ್ಟ್ ಕೊಡು ಅಂತ ಬರೀತಿದ್ರು. ಸ್ಪೆಸಿಮನ್ ಕಲೆಕ್ಷನ್ ಕೂಡ ಭಾಳಾ ಆದ್ವು. ಅಸ್ಸಾಂನ ದಿಬ್ರೂಘಡ್‌ನಲ್ಲಿ ಆಪರೇಶನ್ ಆದ್ರ ಸ್ಪೆಸಿಮನ್ಸ್ ನನ್ನ ಟೇಬಲ್ ಮ್ಯಾಲ ಇರೂದು. ಅಲ್ಲದೆ, ಅವಾಗ ಬೆಳಗಾಂವದ ನಮ್ಮ ಕಾಲೇಜದಾಗ ವರ್ಷಕ್ಕ ಒಂದಿನ್ನೂರು ಅಂಗಾಂಶಗಳ ಪರೀಕ್ಷೆ (atopsy) ಆಗುತ್ತಿತ್ತು. ಹಂಗಾಗಿನೂ ಸ್ಪೆಸಿಮನ್ ಕಲೆಕ್ಷನ್ ಛಲೋ ಆತು. ಮತ್ತ ನನ್ನ ಸುದೈವಕ್ಕೆ ಸಹೋದ್ಯೋಗಿಗಳು, ವಿದ್ಯಾರ್ಥಿಗಳೂ ಭಾಳ ಎಕ್ಸಲೆಂಟ್ ಇದ್ರು... so any museum could have come up. ಈ ಮೂರೂ ಕಾರಣ ಸೇರಿ ಛಲೋ ಮ್ಯೂಸಿಯಂ ಕಟ್ಟೂಕಾತು’’ ಎಂದವರು ನೆನಪಿಸಿಕೊಳ್ಳುತ್ತಾರೆ. ಬೆಳಗಾವಿಯಲ್ಲಿ ಅಭಿವೃದ್ಧಿಪಡಿಸಲಾದ ಈ ಪೆಥಾಲಜಿಯ ಮ್ಯೂಸಿಯಂ, ವೈದ್ಯಕಿಯ ವಿದ್ಯಾರ್ಥಿಗಳಿಗೆ, ವೈದ್ಯರಿಗೆ, ಜತೆಗೆ ಸಾಮಾನ್ಯರಿಗೂ ಉಪಯುಕ್ತವಾಗಿದೆ. ಹತ್ತಾರು ವರ್ಷಗಳ ಶ್ರಮ, ಅನುಭವ, ಸಾಧನೆ ಎಲ್ಲ ಮೇಳೈಸಿರುವ ಇದನ್ನು ಸಾರ್ವಜನಿಕ ದೇಣಿಗೆಯಲ್ಲೇ ನಿರ್ಮಿಸಿರುವುದೊಂದು ಅಭೂತಪೂರ್ವ ಸಂಗತಿ. ಈ ಸಂಗ್ರಹಾಲಯಕ್ಕೆ ಪ್ರತಿವರ್ಷ, ಸುಮಾರು ಇಪ್ಪತ್ತು ಸಾವಿರ ವಿದ್ಯಾರ್ಥಿಗಳು, ಐದರಿಂದ ಹತ್ತು ಸಾವಿರ ಶಿಕ್ಷಕರು ಭೇಟಿ ನೀಡಿ ಪ್ರಯೋಜನ ಪಡೆದುಕೊಳ್ಳುತ್ತಾರೆ.

## ಸಿಮೆಂಟ್ ಚೀಲದಲ್ಲಿ ‘ಸ್ಟೋನ್’ಗಳು

‘‘ಆಮೇಲೆ 1991ರಾಗ ಬಿಜಾಪುರಕ್ಕೆ ಬಂದಾಗ ಇಲ್ಲೂ ಜನ ಬೆನ್ನುಹತ್ತಿದ್ರು. ಇಲ್ಲೂ ಒಂದು ಮ್ಯೂಸಿಯಂ ಮಾಡ್ರಿ ಸರ ಅಂತ. ಇಲ್ಲಿ ‘ಸ್ಟೋನ್ ಮ್ಯೂಸಿಯಂ’ ಮಾಡ್ದೆ.’’ ಬಿಜಾಪುರದಲ್ಲಿ ಅವರು ಅಭಿವೃದ್ಧಿಪಡಿಸಿರುವ, ಇಡೀ ಏಷ್ಯಾದಲ್ಲಿಯೇ ದೊಡ್ಡದೆನಿಸಿರುವ Stone (ದೇಹದ ಒಳಗಡೆ ಆಗುವ ಕಲ್ಲುಗಳು) museum ಹಿಂದಿನ ಕತೆಯನ್ನು ನಾಗಲೋಟಿಮಠ ಹೀಗೆ ಹೇಳುತ್ತಾರೆ.

‘‘ಆದ್ರೆ ಅದೇನು ಸುಮ್ಕೇ ಆಕ್ಕೈತೇನು.. ಸ್ಪೆಸಿಮನ್ ಕಲೆಕ್ಷನ್ ಆಗೂ ತನಾ ಕಾಯಬೇಕು. ಮತ್ತ ಸ್ಪೆಸಿಮನ್ ಬೇಕು ಅಂದ್ರೆ ಬೆಳಸಕ್ಕಾಕೈತೇನು? ಉದಾಹರಣೆಗೆ ಈಗ ಕ್ಯಾನ್ಸರ್ ಟಿಷ್ಯೂ ಬೇಕು ಅಂದರೆ ನಾವ ಬೆಳಸಾಕ ಬರಂಗಿಲ್ಲ... ಯಾರಿಗಾರ ಆ ಪರ್ಟಿಕ್ಯುಲರ್ ಕ್ಯಾನ್ಸರ್ ಆದಾಗಲೇ ಅದು ಸಿಗೋದು. ಒಮ್ಮೆ ನಮ್ಮ ಪರಿಚಯದ ಡಾಕ್ಟರ್ ಒಬ್ರಿಗೆ ಸ್ಟೋನ್ ಆತು. ಆಪೇರಶನ್ ಮಾಡಿ ತೆಗೆದ್ವಿ. ಆ ಸ್ಟೋನ್ ನೋಡಿದ ಕೂಡ್ಲೆ ಅನ್ನಿಸ್ತು. ಬಿಜಾಪುರ ಹೆಂಗೂ ಸ್ಟೋನ್ ಬೆಲ್ಟ್‌ನಾಗ ಬರ್ತದೆ. ಇಲ್ಲಿ stone museum ಯಾಕ ಮಾಡ್ಬಾರದು? ಗೆಳೆಯರಿಗೆಲ್ಲ ಕಾರ್ಡ್ ಹಾಕಿದ್ನಿ.



ಎಲ್ಲಾ ಕಡಿ ನಮ್ಮ ಹುಡುಗ್ರಿಗೆ ಕಳಿಸಿದ್ನಿ. stoneಗಳ ವಿಶಿಷ್ಟತೆ ಅಂದ್ರೆ, ಉಳಿದ ಸ್ಪೆಸಿಮನ್‌ಗಳ ಹಾಗೆ ಇವು ಕೆಡಂಗಿಲ್ಲ.. ಗೆಳೆಯರು ಅಲ್ಲಿ, ಇಲ್ಲಿ, ಕಸದ ಬುಟ್ಯಾಗ ಸೇರಿಸಿದ್ದ stones ಎಲ್ಲ ನಮ್ಮ ಹುಡುಗ್ರು ಸಿಮೆಂಟ್ ಚೀಲದಾಗ ತುಂಬಿಕೊಂಡು ಬಂದ್ರು!''

''ಸಂಗ್ರಹಿಸಿದ ಎಲ್ಲಾ stoneಗಳ analysis ಮಾಡಿದ್ನಿ. ಈ ಕೆಲಸದಲ್ಲಿ ನನ್ನ ಸಹೋದ್ಯೋಗಿಗಳಾದ ಡಾ॥ ಸತೀಶ್ ಜಜಿನಿ, ಚವ್ಹಾಣ ಮತ್ತು ಇನ್ನೊಬ್ಬ ಡಾಕ್ಟರರ ಸಹಕಾರ ಬಹಳ. ನಾ ಬರೀ ಹೀಂಗ ಮಾಡಿ ಅಂತ ಹೇಳಾಂವ, ಹೋಗಿ ಬಿಡಾಂವ.. ಮಸಲ ಕೆಲಸ ಮಾಡಿದೋರು ಅವರು.''

ಬೆಳಗಾವಿಯಲ್ಲೇ ಇನ್ನೊಂದು ಸೈನ್ಸ್ ಮ್ಯೂಸಿಯಂ ಸ್ಥಾಪಿಸಲು ಅವರು ಉದ್ಯುಕ್ತರಾದಾಗಲೂ ಮಂದಿ ತಾವಾಗೇ ಬಂದು ಖುಷಿಯಿಂದ ದೇಣಿಗೆ ನೀಡಿದರು. 35 ಸಾವಿರ ಸಂಗ್ರಹವಾಯಿತು. ನಾಗನೂರು ಸ್ವಾಮಿಗಳು ಖುಷೀಲೆ, ಒಂದು ಎಕರೆ ಜಾಗ ಕೊಟ್ಟರು.

ಜನಸಾಮಾನ್ಯರ ಕಡೆಯಿಂದ ವೈಜ್ಞಾನಿಕ ಸಂಶೋಧನೆ ಇತ್ಯಾದಿ ಕೆಲಸಗಳಿಗೆ ಪುರಸ್ಕಾರ ಸಿಗುವುದು ಅಸಾಧ್ಯ ಎಂದೆಲ್ಲಾ ನಾವು ಪೂರ್ವಗ್ರಹಿಕೆಗಳನ್ನಿಟ್ಟುಕೊಂಡಿರುತ್ತೇವೆ. ನಾಗಲೋಟಿಮಠರ ವಿಷಯದಲ್ಲಿ ಇದು ಶುದ್ಧ ಸುಳ್ಳು. ಜನರ ಬಿಚ್ಚುಮನದ ಪ್ರೋತ್ಸಾಹಕ್ಕೆ ಈ ಅಸಾಮಾನ್ಯ ಸಾಧಕನ ಪ್ರತಿಭೆ, ವಿಷಯ ಜ್ಞಾನ, ಪರಿಶ್ರಮ, ಅರ್ಪಣಾ ಮನೋಭಾವವೇ ಕಾರಣ. ಇದರ ಬಗ್ಗೆ ಇನ್ನೂ ಅನುಮಾನ ಉಳಿದಿದ್ದರೆ, ರಾಜ್ಯದಲ್ಲಿನ model Science museum ಎಂದು ಹೆಸರು ಗಳಿಸಿರುವ ಬೆಳಗಾವಿಯ ಈ ವೈದ್ಯಕೀಯ ಸಂಗ್ರಹಾಲಯವನ್ನು ಧಾರಾಳವಾಗಿ ಕಂಡುಬರಬಹುದು.

## ಪ್ಲಾಸ್ಟಿನೇಷನ್ ವಿಧಾನ

ವೈದ್ಯಕೀಯ ರಂಗದಲ್ಲಾಗುವ ಸಂಶೋಧನೆ, ಹೊಸ ತಂತ್ರ-ತಾಂತ್ರಿಕತೆಯ ಅನ್ವೇಷಣೆ ಕುರಿತು ಮುಗಿಯದ ಉತ್ಸಾಹ ಇರುವ ನಾಗಲೋಟಿ ಮಠ ಅಂಗಾಂಶಗಳನ್ನು ಸಂರಕ್ಷಿಸುವ ಹೊಸ ವಿಧಾನ plastination technique ಅನ್ನು ಸ್ಯಾನ್‌ಫ್ರಾನ್ಸಿಸ್ಕೊನಲ್ಲಿ ಒಂದೂವರೆ ತಿಂಗಳು ಇದ್ದು ಕಲಿತು ಬಂದರು. ಅಂಗಾಂಶಗಳನ್ನು ರಕ್ಷಿಸುವ ಹಳೆಯ ಸಾಂಪ್ರದಾಯಿಕ ವಿಧಾನದಲ್ಲಿ, ಸಂರಕ್ಷಕ ದ್ರಾವಣ (preservative) water based ಆಗಿದ್ದರೆ plastinationನಲ್ಲಿ ಅದು resin based. ಇದನ್ನು ಮೊದಲು ಕಂಡುಹಿಡಿದದ್ದು



ಜರ್ಮನಿಯ ಒಬ್ಬ ವೈದ್ಯರು. ಈ ವಿಧಾನದಲ್ಲಿ, ಎಂದಿನಂತೆ, ಫಾರ್ಮಾಲಿನ್‌ನಲ್ಲಿ ಮೊದಲು ಅಂಗಾಂಶವನ್ನು fix ಮಾಡಿದ ಮೇಲೆ, ನಿರ್ಜಲೀಕರಣ (dehydration) ಮಾಡಿ, ಅದರಲ್ಲೊಂದು ರಾಸಾಯನಿಕವನ್ನು ಸೇರಿಸಲಾಗುತ್ತದೆ. ಈ ರಾಸಾಯನಿಕ, ಅಂಗಾಂಶದ ಪ್ರತಿ ಜೀವಕೋಶದಲ್ಲಿ ಪ್ರವಹಿಸಿ, ಅದನ್ನು ಯಥಾಸ್ಥಿತಿಯಲ್ಲಿ ರಕ್ಷಿಸುತ್ತದೆ. ಒಂದು ಸಲ ಹೀಗೆ ಸಂಸ್ಕಾರಗೊಂಡ ಅಂಗಾಂಶ, ನೂರಾರು ವರ್ಷ ಕೆಡದೆ ಉಳಿಯಬಲ್ಲದು.

''ಭಾರತದಲ್ಲಿ ಇದನ್ನು ಸರಿಯಾಗಿ ಯಾರೂ ಬೆಳಸಿಲ್ಲವೆಂದು ನನ್ನ ತಿಳವಳಿಕೆ. ದುರ್ದೈವಕ್ಕ ಯಾವ ಕಾಲೇಜಿನವರೂ ಇದರ advantage ತಗೋಳ್ಳದು ಆಗಿಲ್ಲ. ಬಿಜಾಪುರದಾಗ ಸಮಯ ಕಡಿಮೆ ಇತ್ತು. ಮೈಸೂರ್‌ನಾಗ ಆಕ್ಕಿತ್ತೇನೋ... ಸರಕಾರದವರು ಹುಬ್ಬಳ್ಳಿ ಕೆ.ಎಂ.ಸಿ. ನಪ್ಪು ಸುಧಾರಿಸ್ರೀ ಅಂತ ಕಳಸಿದ್ರು. ನಾ ಏನ ಅದನ್ನ ಸುಧಾರಿಸುದು ಆಗ್ಲಿಲ್ಲ. ಉಲ್ಟಾ ಅದೇ ನನ್ನ ಸುಧಾರಿಸು ಹಂಗ ಕಾಣಿಸ್ತು. ಅದ್ಕ ರಿಸೈನ್ ಮಾಡಿ ಬಂದ್ನಿ...'', ಹೊಸದೊಂದೇನನ್ನೋ ಎಳೆಯರಿಗೆ ಕಲಿಸುವ ಹವಣಿಕೆಯಲ್ಲಿದ್ದಾಗಲೇ ಹೀಗೆ ಸ್ಥಳಾಂತರಿಸಲ್ಪಟ್ಟ ನಾಗಲೋಟಿ ಮಠರಲ್ಲಿ plastination technique ಅನ್ನು ಯಾರಿಗೂ ಸರಿಯಾಗಿ ಕಲಿಸಲಾಗದೇ ಹೋದ ವಿಷಾದ ಹಾಗೇ ಉಳಿದುಬಿಟ್ಟಿದೆ.

**ಆಕಾಶ ತೋರಿಸಿ ಭೂಗೋಳ ಪಾಠ**

ನಾಗಲೋಟಿ ಮಠರ ಸಂಶೋಧಕ ವ್ಯಕ್ತಿತ್ವ ಹಲವು ಮಗ್ಗುಲುಗಳನ್ನು ಹೊಂದಿರುವಂಥದು. ಸಂಶೋಧನೆಗಳಲ್ಲೇ ಮುಳುಗೇಳುವ ನಿಮ್ಮ ಇತರೇ ಹವ್ಯಾಸಗಳೇನು ಎಂದು ಕೇಳಿದರೆ, ''ಆ ಲೆಕ್ಕದಲ್ಲೇ ನಾ ಭಾಳ ಬಾದ. (ಉಪಯೋಗಕ್ಕೆ ಬಾರದವ). ಹಾಡ ಕೇಳಿ ಆನಂದ ಅನ್ನಿಸ್ತದ. ಸಂಗೀತ ಕೇಳೂ ಹುಚ್ಚು ಮಾತ್ರ ಅದ. ತಲೆ ಬುಡ ತಿಳಂಯಗಿಲ್ಲ ಮತ್ತ'' ಎಂದು ನಗುತ್ತಾರೆ.

ದೂರದರ್ಶಕದಲ್ಲಿ ಆಕಾಶ ದಿಟ್ಟಿಸುತ್ತ ಕೂಡುವುದು, ಮತ್ತು ಸುತ್ತಲಿನವರಿಗೂ ತೋರಿಸುವುದು ಇವರ ಇನ್ನೊಂದು ಪ್ರಿಯ ಹವ್ಯಾಸ. ಬಾಗಲ ಕೋಟೆಯಲ್ಲಿ, ಹೆಚ್ಚು ಕಡಿಮೆ ಪ್ರತಿದಿನ, ಸಂಜೆಯಾಯಿತೆಂದರೆ, ತಮ್ಮ ಮಾಯಾ ಪೆಟ್ಟಿಗೆಯನ್ನು ಹೊರಗಿಟ್ಟು, ಸರಿಯಾಗಿ ಹೊಂದಿಸಿ, ರಸ್ತೆಯಲ್ಲಿ ಹೋಗಿ ಬರುವವರಿಗೆಲ್ಲ ಟೆಲಿಸ್ಕೋಪ್‌ನಲ್ಲಿ ಅನಂತ ಕ್ಷಿತಿಜದ 'ದರ್ಶನ ಭಾಗ್ಯ' ನೀಡುತ್ತಿದ್ದರು. ಅಲ್ಲಿ ನೆರೆದ ಆಬಾಲವೃದ್ಧರಾದಿಯಾಗಿ ಎಲ್ಲರಿಗೂ ಆಕಾಶ ಕಂಡ ರೋಮಾಂಚನ. ಜತೆಗೆ ಡಾಕ್ಟರರ ಭೂಗೋಳದ ಪಾಠ ಕೇಳುವ ಪುಳಕ!

**'ಸರಳವಾಗಿ ಬರದ್ರ ಜನರಿಗೆ ಹಿಡಿಸ್ತದ'**

ನಾಗಲೋಟಿಮಠರು ಸ್ಥಾಪಿಸಿರುವ ವೈದ್ಯಕೀಯ ವಿಜ್ಞಾನ ಸಂಗ್ರಹಾಲಯಗಳಂತೆಯೇ ಅವರ ವೈದ್ಯಕೀಯ ಪುಸ್ತಕಗಳನ್ನೂ ಜನಸಾಮಾನ್ಯರು ತೆರೆದ ಹೃದಯದಿಂದ ಸ್ವಾಗತಿಸಿದ್ದಾರೆ.

ಅವುಗಳ ಬಗ್ಗೆ ಉತ್ಸುಕತೆ ತೋರಿದ್ದಾರೆ. ''ಕೂಸಿನ ಹಡದ ಬಿಟ್ ಬಿಡೂದು ಅಂತಾರಲ್ಲ... ನಾ ಹಂಗೇ. ಬರ್ದ ಬಿಟ್ ಬಿಡಾಂವ. ಮಂದಿಗಿ ನಾನಾಗೆ ಕೇಳಿಲ್ಲ, ಅವರೇ ಆಗೀಗ, ಕಾರ್ಯಕ್ರಮದಾಗ, ಅಲ್ಲಿ-ಇಲ್ಲಿ ಭೆಟ್ಟಿಯಾದಾಗ ಹೇಳ್ತಿರ್ತಾರೆ. 'ಚಟಗಳು' ಅನ್ನೋ ಪುಸ್ತಕ ಭಾಳ ಜನಪ್ರಿಯ ಆಗೇದ. ಭಾಳ ಮಂದಿ ಅದನ್ನು ಓದೂ ಚಟ ಹತ್ತಿಸಿಕೊಂಡು ತಮ್ಮ ಹಳೆಯ ಚಾಳಿ ಬಿಟ್ಟೀವಿ ಅಂತಾರೆ'' ಎನ್ನುವ ಈ ಖ್ಯಾತ ಪೆಥಾಲಜಿಸ್ಟ್‌ಗೆ, 'ಭಾಳಾ ಸರಳವಾಗಿ ಬರದ್ರ ಸಾಮಾನ್ಯಜನರಿಗೆ ಹಿಡಿಸ್ತದ, ಅರ್ಥ ಆಗ್ತದ' ಎನ್ನುವ ಗುಟ್ಟು ಗೊತ್ತಿದೆ. ಕನ್ನಡದಲ್ಲಿ ವೈದ್ಯಕೀಯಕ್ಕೆ ಸಂಬಂಧಿಸಿದಂತೆ 38 ಕೃತಿ, ಪೆಥಾಲಜಿ ಕುರಿತು ಇಂಗ್ಲಿಷ್‌ನಲ್ಲಿ ಹತ್ತು ಗ್ರಂಥಗಳನ್ನು ಬರೆದಿರುವ ನಾಗಲೋಟಿಮಠರ ಎರಡು ವೈದ್ಯಕೀಯ ಗ್ರಂಥಗಳು ವಿದೇಶದಲ್ಲಿ ಪ್ರಕಟವಾಗಿದೆ.

## ಬ್ರುಸಲೋಸಿಸ್

ರೋಗ ಬಂದ ಹಸುವಿನ ಹಾಲನ್ನು ಕಾಯಿಸದೇ, ಹಸಿಯಾಗೇ ಕುಡಿಯುವುದರಿಂದ ಬರುವ ಬ್ರುಸಲೋಸಿಸ್ ಎಂಬ ರೋಗದ ಕುರಿತು ಸಮಗ್ರ ಅಧ್ಯಯನ, ಸಂಶೋಧನೆ ಮಾಡಿರುವುದೂ ನಾಗಲೋಟಿಮಠರ 'ಪ್ರಥಮ'ಗಳಲ್ಲಿ ಒಂದು. ಅವರ ಪ್ರಕಾರ ಇಂಗ್ಲೆಂಡ್‌ನಲ್ಲಿ ಕಾಣಸಿಕೊಂಡಿದ್ದ ಈ ರೋಗ ಭಾರತದಲ್ಲೂ ಇದೆ ಮತ್ತು ಇಂಗ್ಲೆಂಡ್‌ಗಿಂತಲೂ ಇಲ್ಲಿ ಜಾಸ್ತಿ ಇದೆ. ಬ್ರುಸಲೋಸಿಸ್ ಕುರಿತಾದ ಸಂಶೋಧನೆಗೆ, 'ಇದು ಕೇವಲ ವೈದ್ಯಕೀಯ ಕ್ಷೇತ್ರಕ್ಕೆ ಮಾತ್ರವಲ್ಲ ದೇಶಕ್ಕೆ, ಸಮಾಜಕ್ಕೆ ನೀಡಿದ ಕಾಣಿಕೆ' ಎಂದು ರಾಷ್ಟ್ರಮಟ್ಟದ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

## ನನ್ನ ವಿದ್ಯಾರ್ಥಿಗಳು ನನ್ನ ಮೀರಿಸಬೇಕು

''ದೇವರು ಎಲ್ಲಾ ಕೊಟ್ಟಾನ I'm totally satisfied. ರಿಸರ್ಚ್‌ನಾಗ... ಕ್ರಿಯೇಟಿವ್ ಫೀಲ್ಡ್‌ನಾಗ, ಸಾಹಿತ್ಯದೊಳಗೆ ಮೂರೂ ಕಡೆ ಮನ್ನಣೆ ಬಂತು. ಇನ್ನು ನನ್ನ ವಿದ್ಯಾರ್ಥಿಗಳು ನನಗಿಂತ ಹೆಚ್ಚಿನ ಸಾಧನೆ ಮಾಡಬೇಕು. ಈಗ ಬಾಗಲಕೋಟೆ ಮೆಡಿಕಲ್ ಕಾಲೇಜಿನ ಜವಾಬ್ದಾರಿ ಹೊತ್ತುಕೊಂಡೀನಿ. ಅಲ್ಲೊಂದು ಒಳ್ಳೇ ವಾತಾವರಣ ಸೃಷ್ಟಿಸಬೇಕು ಅಷ್ಟೇ'' ಎಂದು ತೃಪ್ತಿಯ ನಗೆಯೊಂದಿಗೆ 'ಅಜೆಂಡಾ'ದಲ್ಲಿರುವ ತಮ್ಮ ಹೊಸ 'ಕಾಯಕಲ್ಪ'ಗಳ ಕುರಿತು ಉತ್ಸಾಹದಿಂದ ಮಾತನಾಡುವ ನಾಗಲೋಟಿಮಠ, ಚಿಕ್ಕಂದಿನಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡವರು. ಅವರ ಉತ್ಕೃಷ್ಟ ಪ್ರತಿಭೆಯನ್ನು ಪುರಸ್ಕರಿಸಲು, ತಮ್ಮದನ್ನಾಗಿ ಮಾಡಿಕೊಳ್ಳಲು ಎಷ್ಟೋ ವಿದೇಶಿ ಸಂಸ್ಥೆಗಳು ಪ್ರಯತ್ನಪಟ್ಟವು. ಆದರೆ ''ಹಿಂದ ಮುಂದ ಯಾರೂ ಇರ್ಲಿಲ್ಲ. ನಾ ಏನಾರ ಅಲ್ಲಿಗಿ ಹೋಗಿದ್ದಿ ಅಂದ್ರ, ಅಲ್ಲೇ settle ಆಗಿಬಿಡ್ತಿದ್ದಿ. ಇಲ್ಲೇ ನಮ್ಮ ದೇಶದಾಗ ಸೇವಾ ಮಾಡಿದ್ರಾತು ಅಂತ ಇಲ್ಲೇ ಉಳಕೊಂಡ್ನಿ'' ಎನ್ನುವ ಅವರ ಬಳಿ ಪ್ರಲೋಭನೆ ಸುಳಿಯಲಿಲ್ಲ.

ಬಹುಶಃ, ಅವರು ಇಲ್ಲೇ settle ಆಗುವ ನಿರ್ಧಾರ ಮಾಡಿದ್ದರಿಂದಲೇ ಕರ್ನಾಟಕಕ್ಕೆ ಮೂರು ಉತ್ತಮ ಮ್ಯೂಸಿಯಂಗಳು ದೊರೆತದ್ದು. ■



# ಕತ್ತಲ ದೊರೆಯ ಸಾಮ್ರಾಜ್ಯ

ಕಗತ್ತಲ ಸಮಯವದು. ಸ್ವಲ್ಪ ಹೊತ್ತಿಗೆಲ್ಲ ಚುಮುಚುಮು ಬೆಳಕು ಮೂಡಿತ್ತು. ಸೂರ್ಯನ ಚಿಗುರು ಕಿರಣವೊಂದು ಆ ಕತ್ತಲ ಸಾಮ್ರಾಜ್ಯವನ್ನು ಮುಳುಗಿಸುವಂತೆ ಮಿಂಚಿನ ದಾಳಿ ಮಾಡಿತು. ಕತ್ತಲ ಸಾಮ್ರಾಟನಿಗೆ, ಮಿಂಚಿನಂತೆ ಪ್ರಬಲವಾದ ಬೆಳಕ ಕುಡಿಯ ದಾಳಿಯನ್ನೆದುರಿಸಲಾಗಲಿಲ್ಲ. ಅವನು ದಾರಿಗಾಣದೇ, ಎಲ್ಲಾದರೂ ಅವಿತುಕೊಳ್ಳಲು ಪಲಾಯನ ಮಾಡತೊಡಗಿದ. ಪರಾರಿಯಾಗುತ್ತಿದ್ದವನ ಬೆನ್ನಿಗೆ ಬಿತ್ತು ಚುರುಕಿನ ಕಿರಣ. ಕತ್ತಲ ದೊರೆ ಓಡಿ ಓಡಿ ಸುಸ್ತಾದ ಆದರೂ ತನ್ನುಳಿವಿಗಾಗಿ ಅವನು ಓಡಲೇಬೇಕಿತ್ತು.

ಅವನೆದುರು ದೊಡ್ಡ ಮರವೊಂದು ಕಂಡಿತು. ಓಡುವ ಶಕ್ತಿ ಇಮ್ಮಡಿಗೊಂಡು, ಆ ಸಾಮ್ರಾಟ, ವೇಗವಾಗಿ ಓಡಿ, ಆ ಮರದ ಹಿಂದೆ ಅವಿತ. ಹಿಂಬಾಲಿಸುತ್ತಿದ್ದ ಬೆಳಕ ಮರಿ ಕಣ್ಣು ಪಿಳಕಿಸಿತು, ಓಡುತ್ತಿದ್ದವನೆಲ್ಲಿ ಹೋದನೆಂದು. ಕೂಡಲೇ ಕ್ಷಣದಲ್ಲಿ ಮರವನ್ನೇರಿತದು. ಅಲ್ಲಿಂದ, ಅವಿತು ಕುಳಿತಿದ್ದ ಕತ್ತಲ ದೊರೆಯ ಕಂಡು ಕೆಳಗಿಳಿಯತೊಡಗಿತು. ಕಿರಣದ ಈ ಕಿಲಾಡಿತನದಿಂದ ತಬ್ಬಿಬ್ಬಾದ ಆ ದೊರೆ ಮತ್ತೆ ಅಲ್ಲಿಂದ ಓಡತೊಡಗಿದ.

ತುಸು ವಿಶ್ರಾಂತಿ ದೊರಕಿದ್ದರಿಂದ ಮೊದಲಿಗಿಂತಲೂ ವೇಗವಾಗಿ ಓಡಿದನು. ಓಡುತ್ತೋಡುತ್ತಾ ಬೆಟ್ಟದ ಹಿಂಭಾಗಕ್ಕೋಡಿದ, ಅವಿತು, ಏದುಸಿರು ಬಿಡುತ್ತಾ ಕುಳಿತ. ಬೆಳಕಿನ ಕಿರಣಕ್ಕೆ ಕ್ಷಣಕ್ಷಣಕ್ಕೂ ಶಕ್ತಿ ಹೆಚ್ಚುತ್ತಿತ್ತು. ಕಾರಣ, ಕತ್ತಲ ದೊರೆಯನ್ನೋಡಿಸಿದ ಪ್ರದೇಶವೆಲ್ಲ ಬೆಳಕಿನಿಂದ ತುಂಬುತ್ತಿತ್ತು. ತನ್ನ ಶಕ್ತಿ, ಸಾಮರ್ಥ್ಯ ಹೆಚ್ಚಾದಂತೆ ಕಿರಣ ವೇಗವಾಗಿ ಬರತೊಡಗಿತು. ನೇರವಾಗಿ ಬೆಟ್ಟವನ್ನೇರತೊಡಗಿತು ಕಿರಣ. ಏರಿ ನೋಡಿತದು ಎಲ್ಲೆಡೆ. ಎಲ್ಲೂ ಕಾಣಲಿಲ್ಲ, ದೊರೆ. ಕೆಳಗಿಳಿಯತೊಡಗಿತು. ಆಗಲೇ ಗುಹೆಯಂತಿದ್ದ ಸುರಂಗದಿಂದ ಕತ್ತಲ ದೊರೆ, ಮತ್ತೆ ಹೊರಬಂದು ಓಡತೊಡಗಿದ.



ಕೂಡಲೇ ಉಪಾಯವೊಂದು ಹೊಳೆಯಿತವನಿಗೆ. ನೇರವಾಗಿ, ಹರಿಯುತ್ತಿದ್ದ ಹೊಳೆಯಲ್ಲಿ ಧುಮುಕಿಬಿಟ್ಟ. ಆದರೆ ಮುಂದಿನ ಕ್ಷಣವೇ, ಕಿರಣವೂ ಮೇಲಿನಿಂದ ನೋಡಿದಾಗ ಪತ್ತೆಯಾಗಿಬಿಟ್ಟಿದ್ದ, ಕತ್ತಲ ದೊರೆ.

ತನಗಿನ್ನು ಉಳಿಗಾಲವಿಲ್ಲವೆಂಬ ಭಯ ಆವರಿಸಿತು. ನೀರಿನಲ್ಲೇ ಓಡಿದ ಅವನು, ದಡ ಮುಟ್ಟಿ ಮತ್ತೆ ಓಡತೊಡಗಿದ. ನೀರಿಗಿಂತ ಗಾಳಿಯಲ್ಲಿ ಅವನ ವೇಗ ಹೆಚ್ಚಾಯಿತು. ಈ ಬಾರಿ, ಅವಿತುಕೊಳ್ಳದೇ, ಓಡಿಯೇ ತಪ್ಪಿಸಿಕೊಳ್ಳಬೇಕೆಂಬ ಒಂದೇ ಗುರಿಯೊಂದಿಗೆ ಅವನು ಉಳಿದಿದ್ದ ಪ್ರಾಣವನ್ನು ಒಗ್ಗೂಡಿಸಿಕೊಂಡು ಓಡತೊಡಗಿದ.

ಸ್ವಲ್ಪ ಸಮಯದ ನಂತರ ಮನೆಯೊಂದು ಕಂಡಿತು. ಮನೆಯ ಮುಂಭಾಗದಲ್ಲಿ, ಹಗ್ಗದ ಮಂಚದ ಮೇಲೆ, ಆಗತಾನೇ ಎದ್ದು ಕುಳಿತಿದ್ದ ಮನುಷ್ಯನೊಬ್ಬ ಕಂಡ. ಅವನು ಆಕಳಿಸಲೆಂದು ಬಾಯಿ ತೆರೆದ. ಧಾವಂತದಿಂದ ಓಡಿಬಂದ ಕತ್ತಲ ದೊರೆ, ಗುಹೆಯಂತೆ ಕಾಣುತ್ತಿದ್ದ ಆ ಮನುಷ್ಯನ ಬಾಯಿಯೊಳಗೆ ನುಗ್ಗಿದ. ಇನ್ನೇನು ಹಿಡಿದೇ ಬಿಟ್ಟೆನೆಂದು ಮುನ್ನುಗ್ಗಿದ ಬೆಳಕು, ಕ್ಷಣದ ಸಾವಿರದೊಂದನೇ ಭಾಗದಲ್ಲಿ ಆ ಮನುಷ್ಯನ ಬಾಯಿ ಮುಚ್ಚಿಕೊಂಡಿದ್ದರಿಂದ, ಹೊರಗೇ ಉಳಿಯಿತು. ಒಳನುಗ್ಗಿದ ಕತ್ತಲ ದೊರೆ, ನೇರವಾಗಿ ಗಂಟಲಿಗೆ, ಅಲ್ಲಿಂದ ಒಳಗೆ ಖಾಲಿಯಿದ್ದ ಹೃದಯದ ಕೋಣೆಯನ್ನು ಪ್ರವೇಶಿಸಿ ಅಡಗಿ ಕುಳಿತ.

ಬೇಸ್ತು ಬಿದ್ದ ಬೆಳಕಿನ ಕಿರಣ, ಆ ಮನುಷ್ಯನನ್ನು ಪ್ರವೇಶಿಸುವುದಾದರೂ ಹೇಗೆಂದು ತಿಳಿಯದೇ ನಿರಾಸೆಯಿಂದ ಮುಂದಕ್ಕೆ ಹೋಯಿತು. ಆಗಿನಿಂದ, ಶತಮಾನಗಳೇ ಕಳೆದರೂ, ಕತ್ತಲ ದೊರೆ ಸುರಕ್ಷಿತವಾಗಿ ಅಲ್ಲೇ ವಾಸಿಸಿದ್ದಾನೆ; ತನ್ನ ವಾಸಕ್ಕೆ ಪ್ರಶಸ್ತವಾದ ಸ್ಥಳ ಇದೇ ಎಂದು ತಿಳಿದ ಅವನು, ಒಮ್ಮೊಮ್ಮೆ ಹೊರಬಂದರೂ, ಮತ್ತೆ ಇನ್ನೊಬ್ಬ ಮನುಷ್ಯನ ಹೃದಯವನ್ನು ಹೊಕ್ಕುಬಿಡುತ್ತಾನೆ.

(ಆಪ್ತರೊಬ್ಬರು ಹೇಳಿದ ಜಪಾನೀ ಕವಿತೆಯ ಸಾರಾಂಶ)

ಬೆಂಗಳೂರು

**ಎಸ್. ವಿಜಯಕುಮಾರ್**

# ಸಾಕುತಾಯಿ

ಜೈಲಿಗೆ ಹೋದ ನಿರಪರಾಧಿಯೊಬ್ಬನ ಪುಟ್ಟ ಮಗನನ್ನು ಸಾಕುವ ಹೊಣೆ, ಅವಿವಾಹಿತ ಮುಗ್ಧ ಯುವತಿಯೊಬ್ಬಳಿಗೆ ಒದಗಿಬರುತ್ತದೆ. ಆ ಮಗುವಿನೊಂದಿಗೆ ವಾಸಿಸುತ್ತಿರುವುದಕ್ಕಾಗಿ ಆಕೆ ಅನುಭವಿಸುವ ಮಿಥ್ಯಾಪವಾದ, ನೋವನ್ನು, ಮೌನವಾಗಿ ಎದುರಿಸುವಲ್ಲಿ ಆಕೆ, ಛಲ, ಆತ್ಮವಿಶ್ವಾಸ ಗಳಿಸಿಕೊಳ್ಳುತ್ತಾಳೆ.

ಆ ಮಗುವಿನೊಂದಿಗೆ ಆಕೆ ತನ್ನ ಊರಿಗೆ ಮರಳುತ್ತಾಳೆ. ಊರವರಲ್ಲಿ ಕ್ರಮೇಣ, ವಿಚಿತ್ರ, ಕುತೂಹಲ, ಗೊಣಗಾಟ ಪ್ರಾರಂಭವಾಗುತ್ತದೆ. ಅದ್ಯಾವುದನ್ನೂ ಗಮನಕ್ಕೆ ತೆಗೆದುಕೊಳ್ಳದೆ ಆಕೆ, ಮಗುವನ್ನು ಶಾಲೆಗೂ ಸೇರಿಸುತ್ತಾಳೆ. ಕೊನೆಗೂ ಅದು ಯಾರ ಮಗುವೆಂಬ ಗುಟ್ಟು ಬಿಟ್ಟುಕೊಡದೆ ಪ್ರೀತಿಯಿಂದ ಸಾಕುತ್ತಾಳೆ. ಎಲ್ಲದಕ್ಕೂ ಆಕೆಯ ಉತ್ತರ ಮೌನವೇ.

ಆಕೆಯ ಅಪಾರ ತಾಳ್ಮೆಯ ಪರಿಣಾಮವಾಗಿ ಊರವರು ಮಗುವಿನ ವಿಷಯವನ್ನು ಹೆಚ್ಚು ಕೆದಕದೆ ಇರುವಂಥ ಸಮಯದಲ್ಲಿ, ಶಾಲೆಯಲ್ಲಿ ಮತ್ತೊಂದು ಸಮಸ್ಯೆ ಹುಟ್ಟಿಕೊಳ್ಳುತ್ತದೆ. ಮಗುವಿನ ಹುಟ್ಟಿನ ಬಗ್ಗೆ, ತಂದೆಯ ಬಗ್ಗೆ ಶಾಲೆಯ ಮಕ್ಕಳೂ, ಅವನ ಸ್ನೇಹಿತರೂ ಆಡಿಕೊಳ್ಳುವ ಸ್ಥಿತಿಯೊದಗಿ, ಅವರೊಂದಿಗೆ ಕೂಗಾಡಿ, ಗುದ್ದಾಡಿ ಸಿಟ್ಟು ತೀರಿಸಿಕೊಂಡು ಮನೆಗೆ ಬರುತ್ತಾನೆ. ಮಗುವಿನ ನೋವು ಆಕೆಯನ್ನು ತಟ್ಟುತ್ತದೆ. ಪ್ರಾರಂಭದಲ್ಲಿ ವ್ಯಥೆಪಟ್ಟರೂ, ಅಂಥ ಸಂದರ್ಭವನ್ನು ಅಹಿಂಸಾತ್ಮಕವಾಗಿ ಹೇಗೆ ಎದುರಿಸಬೇಕೆಂಬ ಆತ್ಮಸ್ಥೈರ್ಯವನ್ನು ಮಗುವಲ್ಲಿ ತುಂಬಿ ಅವನನ್ನು ತಯಾರು ಮಾಡುತ್ತಾಳೆ. ಅದರ ಪರಿಣಾಮವಾಗಿ ಮಗು, ಶಾಲೆಯಲ್ಲಿ ಆಡಿಕೊಳ್ಳುವ ಮಕ್ಕಳನ್ನು ಸ್ಥೈರ್ಯದಿಂದ ಎದುರಿಸುತ್ತದೆ. ತನ್ನ ಸೋಲಿಗೆ ಮರುಕಪಡದೆ, ಅಪಾರ ಆತ್ಮವಿಶ್ವಾಸದೊಂದಿಗೆ ತನ್ನ ಸ್ನೇಹಿತರನ್ನು ಎದುರಿಸುವಾಗ ಅವನ ಕಣ್ಣು ಮಿಂಚುತ್ತದೆ.

ಕಥೆಯ ಕೊನೆಗೆ ಮಗುವಿನ ತಂದೆ, ತನ್ನ ಬಂಧನದ ಅವಧಿ ಮುಗಿಸಿ ಜೈಲಿನಿಂದ ಬಿಡುಗಡೆಯಾಗಿ, ತನ್ನ ಮಗುವನ್ನು ಪಡೆದು ಆಕೆಗ ಕೃತಜ್ಞತೆಯನ್ನು ಅರ್ಪಿಸಲು ಬರುತ್ತಾನೆ. ಆತನಿಗೆ, ತನ್ನ ಮಗನನ್ನು ಸಾಕುವಾಗ ಅವಳು ಎದುರಿಸಿದ ಕಷ್ಟದ ಸನ್ನಿವೇಶಗಳ ಪೂರ್ಣ ಅರಿವು ಕೊನೆಗೂ ಆಗುವುದಿಲ್ಲವೆನ್ನುವ ನೆನಪು.

(ಚೀನೀ ಭಾಷೆಯ 'The out caste' ಸಿನೆಮಾದ ಕತೆ.)

ಬೆಂಗಳೂರು — ಎಂ. ಆರ್. ಭಗವತಿ



ಉಮೇಶ್



# ಕೃಪೆಯ ಸ್ವರೂಪ

**ಎಂ.ಆರ್. ಭಟ್**

ಶ್ರೀ ಅಶ್ವಿನೀಕುಮಾರದತ್ತನ ಗುರುವಿನ ಹೆಸರು ರಾಜನಾರಾಯಣ ಬಸು. ರಾಜನಾರಾಯಣನು ಭಕ್ತನಾಗಿದ್ದನು. ಜೀವನದ ಉತ್ತರಾರ್ಧದ ದಿನಗಳಲ್ಲಿ ಅವನ ಒಂದು ಕೈಯು ಪಕ್ಷವಾತದಿಂದ ಪೀಡಿತವಾಗಿತ್ತು. ಅವನು ರಾಜಗೃಹದಲ್ಲಿ ಇರುತ್ತಿದ್ದನು.

ಅಶ್ವಿನೀಕುಮಾರನು ಅವರ ದರ್ಶನಾರ್ಥ ಹೋದನು. ಗುರುವಿನ ಅಸ್ವಾಸ್ಥ್ಯದ ಕಾರಣ, ಗಂಭೀರ ಹಾಗೂ ಉದಾಸೀನನಾಗಿ ಅವನು ಕೊಠಡಿಯನ್ನು ಪ್ರವೇಶಿಸಿದನು. ಅಶ್ವಿನೀ ಕುಮಾರನನ್ನು ನೋಡಿದೊಡನೆ ರಾಜನಾರಾಯಣನು ಪ್ರಸನ್ನನಾದನು. ಹಾಗೂ, 'ಅಶ್ವಿನೀ! ಬಹು ದಿನಗಳ ನಂತರ ನೀನು ಬಂದಿರುತ್ತೀ. ಬಾ, ಬಾ!'' ಎಂದು ಹೇಳುತ್ತ ಬಳಿಗೆ ಬಂದ ಅಶ್ವಿನಿಯನ್ನು ಒಂದೇ ಕೈಯಿಂದ ಆಲಂಗಿಸಿದನು. ಇನ್ನೊಂದು ಕೈಯು ಪಕ್ಷವಾತದಿಂದ ಪೀಡಿತವಾಗಿತ್ತು.

ಅನಂತರ ರಾಜನಾರಾಯಣನು ಮಹಾತ್ಮರ ವಾಣಿಗಳನ್ನು ಹೇಳಲಾರಂಭಿಸಿದನು. ದುಃಖದ ಉಲ್ಲೇಖವೇ ಇರಲಿಲ್ಲ. ಬಹಳ ಆನಂದವು ಹಬ್ಬಿತ್ತು.

ಒಂದು ಪ್ರಹರ ಕಳೆಯಿತು. ಅಶ್ವಿನೀಕುಮಾರನು ಹೊರಟುಹೋಗಲು ಆಜ್ಞೆ ಕೇಳಿ ಹೀಗಂದನು: ''ನಿನ್ನ ಸ್ವಾಸ್ಥ್ಯವು ಕೆಟ್ಟಿದೆಯೆಂದು ಕೇಳಿ, ನಾನು ನಿನ್ನನ್ನು ನೋಡಲು ಬಂದಿದ್ದೆ. ನನ್ನ ಮನಸ್ಸಿನಲ್ಲಿ ಬಹು ಉದಾಸೀನತೆಯಿತ್ತು. ಆದರೆ, ಇಲ್ಲಿ ನಾನು ಬೇರೆ ಸ್ಥಿತಿಯನ್ನು ಕಂಡೆನು. ಇಲ್ಲಿ ದುಃಖವೇ ಇಲ್ಲ. ನೀನು ಮೂರು ತಿಂಗಳುಗಳಿಂದ ಹಾಸಿಗೆ ಹಿಡಿದಿರುತ್ತಿ, ಆದರೆ, ನಿನಗೆ ದುಃಖದ ಅನುಭವವು ಎಳ್ಳಷ್ಟಾದರೂ ಉಂಟಾಗುವುದಿಲ್ಲವಲ್ಲ!''

ಅಶ್ವಿನೀಕುಮಾರನ ಮಾತನ್ನು ಕೇಳಿ, ರಾಜನಾರಾಯಣನು ಹಸನ್ಮುಖನಾಗಿ ಹೀಗಂದನು: ''ಅಶ್ವಿನೀ, ನೋಡು. ನಾನು ಮುದುಕನಾಗಿದ್ದೇನೆ! ಭಗವಾನನ ಕೃಪೆಯಿಂದ ಇಂದಿನ ತನಕ ಬಹು ಸುಂದರ ದೃಶ್ಯಗಳನ್ನು ನೋಡಿದೆನು. ಬಹು ಸುಂದರ ಸುಖ, ಆರಾಮಗಳನ್ನು ಅನುಭವಿಸಿದೆನು. ಈಗ ಆತನ ಕೃಪೆಯಿಂದಲೇ ಸ್ವಲ್ಪ ಸಮಯ ರೋಗಶಯ್ಯೆಯ ಮೇಲೆ ಮಲಗುವುದರಿಂದ ನಾನು ಪ್ರಸನ್ನನಾಗಬಾರದೇಕೆ? ಯಾವ ರೂಪದಿಂದಲೂ ಬರಲಿ- ಎರಡೂ ಸ್ವರೂಪಗಳು ಆತನದ್ದೇ ಅಲ್ಲವೇ?''



ಲಘು ಕತೆ



## ಜಯರಾಮ ಹೆಗಡೆ

# ಚಂದದವರು

ನಿಮಗೆ ರಾತ್ರಿ ಪ್ರಯಾಣ ಹಿಡಿಸುತ್ತೋ ಇಲ್ಲವೋ ಗೊತ್ತಿಲ್ಲ; ಕೊಂಚ ಪ್ರಕೃತಿ ಸೌಂದರ್ಯ ಪ್ರಜ್ಞೆಯಿರುವ ನನಗಂತೂ, ಹಗಲು ಪ್ರಯಾಣವೆಂದರೆ ಖುಷಿ. ಬಸ್ಸಿನ ಕಿಡಕಿಯಲ್ಲೇ ಕುಳಿತು, ಪಂಚೇಂದ್ರಿಯಗಳನ್ನು ಆಗ ಕೆಲಸಕ್ಕೆ ಹಚ್ಚಬಹುದು ನೋಡಿ. ಪ್ರವಾಸ ಜೀವನ ಯಾತ್ರೆಗೆ ಸಂಕೇತವಾಗುವುದು ಆಗಲೇ ಅಲ್ಲವೇ? ರಾತ್ರಿ, ಪ್ರಯಾಣದಲ್ಲಿ ಬಸ್ಸಿನಲ್ಲಿ ನನಗಂತೂ ನಿದ್ದೆ ಬರುವದಿಲ್ಲ; ಓದೋಣವೆಂದರೆ ಬೆಳಕಿರುವುದಿಲ್ಲ. ವಿಶೇಷ ಸಂಗಾತಿಗಳು ಸಿಗದಿದ್ದರೆ ರಾತ್ರಿಯಿಡೀ ನರಕ.

ಅದಕ್ಕಾಗಿ ಬೆಳಗ್ಗೆಯೇ ಬೆಂಗಳೂರಿಂದ ಕೆಎಸ್ಆರ್‌ಟಿಸಿ ಬಸ್ಸಿನಲ್ಲಿ ಶಿರಸಿಗೆ ಹೊರಟೆ.

ಬೆಳಗ್ಗೆ ಹೊರಡಲು ಇನ್ನೊಂದು ಮುಖ್ಯ ಕಾರಣವಿದೆ. ಅದನ್ನೂ ಮೊದಲೇ ಹೇಳಿಬಿಡುತ್ತೇನೆ. ನಾನು ಶಿರಸಿಯಲ್ಲಿ ಪತ್ರಕರ್ತನಾದರೂ, ಜೊತೆ ಜೊತೆಗೆ ಕಾಸ್ಮೆಟಿಕ್ಸ್ ಹೋಲ್‌ಸೇಲ್ ವ್ಯಾಪಾರ ಮಾಡುತ್ತೇನೆ. ಮೊದಲೇ ಹೇಳಿದೆನಲ್ಲ. ಕೊಂಚ ಸೌಂದರ್ಯೋಪಾಸಕ ಅಂತ; ಲೆಕ್ಚರರ್ ಆದೆ, ಜರ್ನಲಿಸ್ಟ್ ಆದೆ. ಎಲ್ಲೂ ನನಗೆ ಈ ಸೌಂದರ್ಯದ ಕೆಲಸ ಮಾಡಲಿಕ್ಕೆ ಆಸ್ಪದವೇ ಸಿಗಲಿಲ್ಲ; ಒಂದೆರಡು ಲಕ್ಷ ರೂ. ತೊಡಗಿಸಿ, ಸೌಂದರ್ಯವರ್ಧಕ ವಸ್ತು ಖರೀದಿ, ಮಾರಾಟ ಆರಂಭಿಸಿದ ಮೇಲೆ ನೋಡಿ, ಹೊಸ ಹೊಸ ವ್ಯಕ್ತಿಗಳ ಪರಿಚಯವಾಗಹತ್ತಿತು. ಸ್ವಲ್ಪ ದುಡ್ಡು ಕೈಯಲ್ಲಿ ಓಡಾಡಹತ್ತಿತು. ಬೆಂಗಳೂರು,



ಮದ್ರಾಸ್, ಮುಂಬಯಿ ತಿರುಗಾಟ, ಕಾಸ್ಮೆಟಿಕ್ಸ್ ನನಗೆ ಹೊಸ ಜಗತ್ತನ್ನೇ ತೆರೆಯಿತು; ವಿಶೇಷವಾಗಿ ಮಹಿಳೆಯರನ್ನು ಖುಷಿಪಡಿಸುವ ಅವಕಾಶವೂ ಸಿಕ್ಕಿತು.

ಓ ಮರೆತೇ ಹೋಯಿತು. ಹಗಲು ಬಸ್ಸಿನಲ್ಲಿ ಯಾಕೆ ಹೊರಟೆ ಹೇಳುತ್ತಿದ್ದೆನಲ್ಲ! ಮಧ್ಯ ನನ್ನ ಕತೆ ಹೇಳಲು ಶುರು ಮಾಡಿಬಿಟ್ಟೆ. ಆಗುವುದೇ ಹೀಗೆ ನೋಡಿ, ಸುದ್ದಿ ಹೇಳು ಅಂದರೆ ಕತೆ ಹೇಳಲು ಶುರು ಮಾಡಿಬಿಡುತ್ತೇವೆ. ಕತೆ ಹೇಳು ಅಂದರೆ ಸುದ್ದಿ ಹೇಳಲು ಶುರುಮಾಡಿಬಿಡ್ತೇವೆ.

ಕಾಸ್ಮೆಟಿಕ್ಸ್ ಖರೀದಿಗೆಂದು ಬೆಂಗಳೂರಿಗೆ ಹೋದವನಿಗೆ, ಮಾರ್ಕೆಟ್ ರೇಟ್ ವ್ಯತ್ಯಾಸದಿಂದ ಮಾಲು ಖರೀದಿ ಮಾಡಲಾಗಲಿಲ್ಲ; ಒಂದು ಐದು ಲಕ್ಷ ರೂಪಾಯಿ ಕೈಯಲ್ಲಿ ಕ್ಯಾಶ್ ಉಳಿದು ಹೋಯಿತು. ಅಷ್ಟೊಂದು ದುಡ್ಡಿನ ಜೊತೆ ರಾತ್ರಿ ಒಬ್ಬನೇ ಪ್ರಯಾಣ, ಗೊತ್ತಲ್ಲ; ಹೆದರಿಕೆ! ಸರಿ, ಧೈರ್ಯ ಮಾಡಿ ಹಗಲೇ ಹೊರಟೆ. ಗೆಳೆಯರು, ಸೂಟ್‌ಕೇಸ್ ಹುಶಾರಿ ಎಂದು ಬೀಳ್ಕೊಟ್ಟರು. ಪ್ರಯಾಣದಲ್ಲಿ ವಿಪರೀತ ಹಣ, ಭಯ, ಚಿಂತೆ ಎಲ್ಲ ತರದ ಕಳವಳಗಳಿಗೆ ಕಾರಣವೆನ್ನುವ ಸಂಗತಿ ಆಗ ನನ್ನ ಅನುಭವಕ್ಕೆ ಬರಹತ್ತಿತು.

ಬಸ್ ಹೊರಟಿತು.

ನಾನು ಬಸ್ಸಿನಲ್ಲಿ ಕುಳಿತಾಗೆಲ್ಲ, ಸುತ್ತ ಕಣ್ಣು ಹಾಯಿಸಿ, ಯಾರ್‍ಯಾರು ಕುಳಿತಿದ್ದಾರೆಂದು ನೋಡುವ ಚಟದವನು. ಇವತ್ತಂತೂ ಕೈಯಲ್ಲಿ ಹಣವಿದೆಯಲ್ಲ! ನನ್ನ ಪಕ್ಕದ ಸೀಟಿನಲ್ಲಿ ಒಬ್ಬ ಗಟ್ಟಿ, ಮಧ್ಯ ವಯಸ್ಸಿನ ಸುಶಿಕ್ಷಿತ ವ್ಯಕ್ತಿ, ನನಗೆ ಹೋಲಿಸಿದರೆ ಆತ ಕುರೂಪಿಯೇ ಅನ್ನಬಹುದು. ನಾನು ಕುಳಿತಿದ್ದು ಮುಂದಿನ ಸೀಟು, ಅದರ ಮುಂದೆ ಡ್ರೈವರನ ಪಕ್ಕದ ಅಡ್ಡ ಸೀಟು ಇದೆ; ಅದರಲ್ಲಿ ಯಾರೋ ಇಬ್ಬರು ಚಂದದ ಹೆಂಗಸರು; ತಾಯಿ ಮಗಳಿರಬಹುದು. ಮಗಳು ತುಂಬಾ ಸುಂದರಿ; ಮದುವೆಯಾದವಳಂತೆ ಕಾಣುತ್ತಾಳೆ.

ನನಗೆ ಸೂಟ್‌ಕೇಸಿನ ಮೇಲೆ ಪೂರ್ತಿ ಲಕ್ಷ್ಯ; ಹಣವಿರುವುದು ಯಾರಿಗಾದರೂ ಗೊತ್ತಾಗಿ ಹೋಗಿದೆಯೇ?

ಡ್ರೈವರ್ ಬಸ್ಸನ್ನು ಸಿಕ್ಕಾಪಟ್ಟೆ ವೇಗದಲ್ಲಿ ಓಡಿಸುತ್ತಿದ್ದ; ಎದುರುಗಡೆ ಬರುವ ಲಾರಿಗೆ ಎಲ್ಲಿ ಹೊಡಿಸಿಬಿಡುತ್ತಾನೋ, ಪಕ್ಕದ ಮರಗಳಿಗೆ ಡಿಕ್ಕಿ ಹೊಡೆಸಿ, ಎಲ್ಲಿ ಎಕ್ಸಿಡೆಂಟ್ ಮಾಡಿಬಿಡುತ್ತಾನೋ ಎಂದು ಹೆದರಿಕೆಯಾಯಿತು. ನನ್ನಂತೆ ಉಳಿದ ಪ್ಯಾಸೆಂಜರ್‌ಗಳೂ ಒಬ್ಬರ ಮುಖ ಒಬ್ಬರು ನೋಡ ತೊಡಗಿದರು.

ಹೊರಗೆ ಊರು, ಗಿಡಮರ, ದೃಶ್ಯ ನೋಡುತ್ತ ಶೋಲ್ಡರ್ ಬ್ಯಾಗಿನಲ್ಲಿದ್ದ ಒಂದು ಪುಸ್ತಕ ಬಿಚ್ಚಿ ಕೂತೆ. ಕಾಸ್ಮೆಟಿಕ್ಸ್ ಕಂಪೆನಿಯ ಜಾಹೀರಾತಿನ ಪುಸ್ತಕ. ಶೀರ್ಷಿಕೆ, 'ಹ್ಯಾಂಡ್‌ಸಮ್ ಈಸ್ ಹ್ಯಾಂಡ್‌ಸಮ್ ಡಸ್' ಅಂತ. ಮೋಹಕ ಹುಡುಗಿಯರ ಚಿತ್ರ, ಸಿನೆಮಾ ನಟ-ನಟಿಯರ ಕಾಸ್ಮೆಟಿಕ್ಸ್ ಪ್ರಚಾರದ ಚಿತ್ರಗಳು, ವಿವರಗಳು. ಪುಸ್ತಕದಲ್ಲಿ ನಾನು ಹುಗಿದು ಹೋದೆ.

ತುಮಕೂರು ದಾಟಿದ ನಂತರ ಒಂದು ಡಾಬಾದಲ್ಲಿ ಬಸ್ ನಿಂತಿತು.

ನನಗೆ ಒಂದಕ್ಕೆ ಹೋಗಬೇಕು.

ಸೂಟ್‌ಕೇಸ್‌ನ್ನು ಬಸ್ಸಿನಲ್ಲಿ ಇಟ್ಟುಹೋಗಲೇ, ತೆಗೆದುಕೊಂಡು ಹೋಗಲೇ, ಯೋಚನೆಗೆ ಬಿದ್ದೆ. ಪಕ್ಕದಲ್ಲಿದ್ದ ಆಸಾಮಿ ಇಳಿಯಲೇ ಇಲ್ಲ; ನಿದ್ದೆ ಮಾಡುತ್ತ ಅಲ್ಲೇ ಕುಳಿತಿದೆ. ಏನಾದರೂ ಸೂಟ್‌ಕೇಸನ್ನು ಅಗಲಬೇಡ ಅಂತ ಗೆಳೆಯರು ಹೇಳಿದ್ದು ನೆನಪಾಗಿ, ಸೂಟ್‌ಕೇಸ್ ಹಿಡಿದೇ ಬಸ್ ಇಳಿದು ನಡೆದೆ. ಕಾಲಸಂದಿಯಲ್ಲೇ ಸೂಟ್‌ಕೇಸ್ ಇಟ್ಟುಕೊಂಡು ಒಂದಕ್ಕೆ ಮಾಡುವಾಗ ಯಾರಾದರೂ ನೋಡಿ ನಗುತ್ತಾರೋ ಎಂದು ಸುತ್ತ ಕಣ್ಣಾಡಿಸಿದೆ. ನೋಡುತ್ತೇನೆ, ಪಕ್ಕದಲ್ಲೇ ಒಬ್ಬ ವ್ಯಕ್ತಿ ಒಂದಾ ಮಾಡುತ್ತ ನಿಂತಿದೇ! ಅವನ ಕಣ್ಣು ನನ್ನ ಸೂಟ್‌ಕೇಸಿನ ಮೇಲಿದೆ. ನಾನು ನೋಡಿದ್ದು ಗೊತ್ತಾಗಿ ತಕ್ಷಣ ಮುಖ ತಿರುಗಿಸಿತು. ಆತನನ್ನು ನೋಡಿದರೆ ಬೇರೆ ಯಾರೂ ಅಲ್ಲ. ನನ್ನ ಪಕ್ಕದಲ್ಲೇ ಕುಳಿತಿದ್ದ ಕುರೂಪಿ ಆಸಾಮಿ!

ನನಗೆ ಅವನ ಮೇಲೆ ಅನುಮಾನ ಶುರುವಾಗಿ ಹೋಯಿತು!

ಕಾಫಿ, ತಿಂಡಿ ಏನೂ ತೆಗೆದುಕೊಳ್ಳಲು ಅವಕಾಶವಾಗದೇ, ಸೂಟ್‌ಕೇಸ್ ಜೊತೆ ಬಂದು ಬಸ್ಸಿನಲ್ಲಿ ಕುಳಿತುಕೊಳ್ಳುವಾಗ, ಒಂದು ಸಲ ಬಸ್ಸಿನೊಳಗೆ ಕಣ್ಣು ಹಾಯಿಸಿದೆ. ಸುಮಾರಷ್ಟು ಪ್ರಯಾಣಿಕರು ನನ್ನನ್ನ ನೋಡಿ ನಗ್ತಾ ಇದ್ದಾರೆ ಎನ್ನಿಸಿತು. ಬಸ್ಸಿನಲ್ಲಿ ಹತ್ತಿಪ್ಪತ್ತು ಸೂಟುಕೇಸುಗಳು ಉರುಳಾಡುತ್ತಿರುವಾಗ, ಇವನೊಬ್ಬ ಸೂಟಕೇಸ್ ಹಿಡಿದುಕೊಂಡೇ ಬಸ್ ಇಳಿದು, ಹತ್ತಿ ಮಾಡುತ್ತಾನಲ್ಲ! ಎಂದು ಅವರು ನಗುತ್ತಿರಬಹುದೇ ಎಂದು ಮುಜುಗರ ಶುರುವಾಯಿತು.

ಪಕ್ಕದ ವ್ಯಕ್ತಿ ನನ್ನ ಹಿಂದೆಯೇ ಬಂದು ಕುಳಿತಿತ್ತು. ಇವನನ್ನು ಯಾರೆಂದು ಕೇಳಿಬಿಡಬೇಕು! ಇವನಿಗೆ ಸೂಟಕೇಸ್‌ನಲ್ಲಿ ಏನಿದೆಯೆಂದು ಗೊತ್ತಾಗಿರಬಹುದೇ? ದಾರಿಯಲ್ಲಿ ಎಲ್ಲಾದರೂ ದುಡ್ಡು ಹೊಡೆದರೆ ಏನು ಗತಿ!

ನನಗೆ ಮೊದಲ ಬಾರಿ ಜೀವನದಲ್ಲಿ ಹಣವಂತರ ಕಷ್ಟ ಅರಿವಾಗತೊಡಗಿತು. ಅಧಿಕ ಸಂಪತ್ತು ಚಿಂತೆಗೆ ಕಾರಣ ಅನ್ನುತ್ತಾರಲ್ಲ ಹಾಗೆ. ಒಂದು ವೇಳೆ ನನ್ನ ಹತ್ತರ ಈ ಹಣ ಇಲ್ಲದೇ ಇದ್ದಿದ್ದರೆ ಪ್ರಯಾಣ ಎಷ್ಟು ಮಜಾ ಇರುತ್ತಿತ್ತು! ಆರಾಮವಾಗಿ, ಎದುರು ಕುಳಿತ ಹೆಂಗಸರೊಡನೆ ಹರಟೆ ಹೊಡಿತ್ತಾ, ಖುಷಿಯಿಂದ ಹೋಗಬಹುದಿತ್ತಲಾ!

"ನೀವು ಶಿವಮೊಗ್ಗದಲ್ಲಿ ಇಳಿಯುವವರೋ?", ಅವನನ್ನು ಮಾತನಾಡಿಸಿದೆ.

"ಇಲ್ಲಾ ಸಾರ್, ಶಿಕಾರಿಪುರಕ್ಕೆ ಹೋಗಬೇಕು; ನೀವು ಶಿವಮೊಗ್ಗಾನಾ?"

"ಇಲ್ಲ, ಶಿರಸಿಗೆ ಹೋಗಬೇಕು."

"ಈ ಬಸ್ಸು ಶಿರಸಿ ಮೇಲೆ ಹೋಗುತ್ತಾ?"

"ಹೌದು."

ಅಲ್ಲಿಗೆ ಮಾತುಕತೆ ನಿಂತುಹೋಯಿತು.

ಯಾವುದೋ ತಿರುವಿನಲ್ಲಿ, ಇನ್ನೇನು ನಮ್ಮ ಬಸ್, ಎದುರುಗಡೆ ಇನ್ನೊಂದು ಬಸ್ಸಿಗೆ ತಾಗಿಯೇ ಹೋಯಿತು ಮಾಡಿದೆ. ಡ್ರೈವರ್ ಬ್ರೇಕ್ ಹೊಡೆದ ಭರಾಟೆಗೆ ನಾವೆಲ್ಲ ಮುಂದಿನ ಸೀಟಿನ ಮೇಲೆ ಬೀಳುವಂತಾಯಿತು. ಈ ರೀತಿ ಮೇಲಿಂದ ಮೇಲೆ, ಬಸ್ಸು ಎಕ್ಸಿಡೆಂಟ್ ಆಗುವ ಹೆದರಿಕೆ, ನನ್ನ ಸೂಟ್‌ಕೇಸಿನ ಒತ್ತಡವನ್ನು ಆಗಾಗ ಮರೆಸುತ್ತಿತ್ತು.

ಮುಂದಿನ ಸೀಟಿನ ಹೆಂಗಸರ ಕಡೆ ನೋಡಿದೆ. ತಾಯಿ, ಮಗಳು ನಾನು ಮಾರುವ ಕಾಸ್ಮೆಟಿಕ್ಸ್ ಬಳಸುವವರು. ಮಗಳು ಸುಂದರಿಯಂತ ಆಗಲೇ ಹೇಳಿದೆನಲ್ಲ. ಒಮ್ಮೆ ನೋಡಿದರೆ, ಮತ್ತೆ ಮತ್ತೆ ನೋಡಬೇಕೆನ್ನುವ ರೂಪ. ಆಕೆಗೆ ತನ್ನ ಸೌಂದರ್ಯ ರಾಶಿಯ ಅರಿವಿರಬೇಕು. ಎಲ್ಲರೂ ತನ್ನನ್ನು ನೋಡಲಿ ಅಂತ ಆಕೆಯ ಮನಸ್ಸಿನೊಳಗಿರಬಹುದೋ ಏನೋ. ಆಕೆ, ನನಗೆ ಗೊತ್ತಾಗದಂತೆ ನನ್ನ ಕಡೆಗೆ ನೋಡುತ್ತಾಳೆಂದು ನನ್ನ ಅನಿಸಿಕೆ. ಎಲ್ಲ ಸೌಂದರ್ಯ, ಸೌಂದರ್ಯೋಪಾಸಕರ ಮಧ್ಯೆ ಗೋಡೆಯಿರುತ್ತದೆ ಅನ್ನುತ್ತಾರಲ್ಲ, ನನ್ನ ಎದುರಿನ ಸೀಟನಲ್ಲಿ, ಮಗಳಿಗೆ ಮರೆಯಾಗಿ ಆಕೆಯ ತಾಯಿ ಕುಳಿತಿದ್ದಾಳೆ, ಅಡ್ಡಲಾಗಿ; ಮಾಸಿದ ಸೌಂದರ್ಯ; ನರೆಗೂದಲಿನ ಲಕ್ಷಣವಾದ ಸೌಮ್ಯಮುಖ. ಆಕೆಯ ಮೈಯಿಂದಲೂ ಕಾಸ್ಮೆಟಿಕ್ಸ್ ಸುವಾಸನೆ ಹೊಡೆಯುತ್ತಿದೆ. ಬಸ್ಸು ಗುದ್ದಿದಾಗ ಮೈ, ಕೈ ತಾಗಿದರೂ, ಏನೂ ಆಗಿಲ್ಲ ಅನ್ನುವಂತಿದ್ದಾಳೆ ತಾಯಿ.

ನನಗೋ, ಸೂಟ್‌ಕೇಸಿನ ಚಿಂತೆಯಿಂದ ಒಂದು ನಿಮಿಷ ಕೂಡ ಬಿಡುಗಡೆಯಿಲ್ಲ.

ಶಿವಮೊಗ್ಗ ಬಂದೇಬಿಟ್ಟಿತು.

ಮಧ್ಯಾಹ್ನ ಊಟ ಮಾಡಬೇಕಲ್ಲ!

ಮತ್ತೆ ಅದೇ ಸೂಟ್‌ಕೇಸ್ ಸಮಸ್ಯೆ! ಎಲ್ಲಿ ಇಟ್ಟುಹೋಗಬೇಕು?

"15 ನಿಮಿಷ ಇದೆ ಸಾರ್, ಬೇಗ ಊಟ ಮಾಡಿ ಬಂದ್‌ಬಿಡಿ; ತಡ ಮಾಡಿದರೆ ಬಸ್ ನಿಲ್ಲಿಸಲ್ಲ; ನೋಡಿ ಮತ್ತೆ", ಡ್ರೈವರ್ ಬಾಗಿಲು ದಡ್‌ಗುಡಿಸಿ ಇಳಿದುಹೋದ.

ಪಕ್ಕದ ಆಸಾಮಿ ಮೇಲೆ ನನಗೆ ಮೊದಲಿನಿಂದಲೂ ಸಂಶಯ!

ಬಗಲು ಚೀಲ ನನ್ನ ಜಾಗದಲ್ಲಿಟ್ಟು, ಸೂಟ್‌ಕೇಸ್ ಕೈಗೆ ತೆಗದುಕೊಂಡು ಎದ್ದೆ.

"ಯಾಕೆ ಸಾರ್! ಸೂಟ್‌ಕೇಸ್ ತಗೊಂಡೇ ಇಳಿತೀದೀರಲ್ಲ; ನಾವಿಲ್ವ ಇಲ್ಲಿ?", ಎದುರಿನ ಹಿರಿಯ ಹೆಂಗಸು ಕೇಳಿಬಿಡಬೇಕೆ?

ಈ ಹೆಂಗಸರೊಡನೆ ಮಾತನಾಡುವ ಅವಕಾಶ ಬಂದಿದ್ದಕ್ಕೆ ನನಗೆ ಸಂತೋಷವೇ ಆಯಿತು. ಎಷ್ಟೆಂದರೂ ಕಾಸ್ಮೆಟಿಕ್ಸ್ ವ್ಯಾಪಾರಿ ನೋಡಿ. ಜೊತೆಗೆ ಕೊಂಚ ಸೌಂದರ್ಯ ಪ್ರಜ್ಞೆಯಿದ್ದವನು.

''ಅಲ್ಲ ಮೇಡಮ್, ಸೂಟ್‌ಕೇಸ್‌ನಲ್ಲಿ ಇಂಪಾರ್ಟೆಂಟ್ ಕಾಗದ-ಪತ್ರಗಳಿವೆ. ಅದಕ್ಕೇ ತಗೊಂಡೇ ಹೊರಟೆ.''

ಒಂದು ಸುಳ್ಳು ವಗಾಯಿಸಿ ಮುಗುಳುನಕ್ಕೆ. ಆದರೂ, ಒಳಗಿಂದೊಳಗೆ 5 ಲಕ್ಷ ರೂ ನನ್ನ ಎದೆಯನ್ನು ಒದೆಯುತ್ತಿತ್ತು.

''ನೀವು ಊಟಕ್ಕೆ ಇಳಿಯಲ್ವಾ?'', ವಿಶ್ವಾಸದಿಂದಲೇ ಹೆಂಗಸರನ್ನು ಮಾತನಾಡಿಸಿ, ನನ್ನ ಮನಸ್ಸಿನೊಳಗಿನ ತಳಮಳವನ್ನ ಮುಚ್ಚಿಟ್ಟುಕೊಂಡೆ.

''ನಮಗೆ ಊಟ ಬೇಡ, ನೀವು ಊಟ ಮಾಡಿ ಬನ್ನಿ, ನಾವು ಸೂಟ್‌ಕೇಸ್ ನೋಡಿಕೊಳ್ಳುತ್ತೇವೆ. ಹೋಗಿ ಬನ್ನಿ, ಚಿಂತೆಯಿಲ್ಲ''

ಆಕೆಯ ಮಗಳೇ ಉತ್ತರಿಸಿದಾಗ ಮನಸ್ಸಿಗೆ ಸ್ವಲ್ಪ ನೆಮ್ಮದಿ, ಧೈರ್ಯ ಸಿಕ್ಕಿತು. ಆಮೇಲೆ ಆಕೆಗೆ ಕಾಸ್ಮೆಟಿಕ್ಸ್ ಬಗ್ಗೆ ಹೇಳೋಣ ಅಂದುಕೊಂಡೆ.

''ಆಯ್ತು, ಬೇಗ ಬಂದುಬಿಡ್ತೀನಿ.''

ಸೂಟ್‌ಕೇಸ್ ಅಲ್ಲೇ ಇಟ್ಟು, ಆದರ ಬೀಗ ಭದ್ರವಾಗಿರುವುದನ್ನು ಇನ್ನೊಮ್ಮೆ ಪರೀಕ್ಷಿಸಿ ನೋಡಿ, ಹೆಂಗಸರ ಮುಖ ನೋಡಿ ಮುಗುಳ್ನಗುತ್ತ, ಬಸ್ ಇಳಿದು ಬಂದೆ.

ಪಕ್ಕದ ಆಸಾಮಿ ಅಲ್ಲೆ ಸುಮ್ಮನೆ ಕುಳಿತಿತ್ತು.

ಊಟಕ್ಕೆ ಬರುತ್ತಿದ್ದಂತೆ, ಆತನ ಬಗ್ಗೆ ಅನುಮಾನ ಮತ್ತೆ ಬಲವಾಗಿ ಕಾಡತೊಡಗಿತು. ಅವನ ಕುರೂಪಿ ಕರಿ ಮುಖ ನೋಡಿದರೆ ಕಳ್ಳನಂತೆ ಕಾಣುತ್ತಾನಲ್ಲ! ಸೂಟ್‌ಕೇಸ್ ಹಾರಿಸಿಕೊಂಡು ಹೋದರೆ ಏನು ಗತಿ!

ಮನಸ್ಸು ಗೊಂದಲಕ್ಕೆ ಬಿದ್ದುಬಿಟ್ಟಿತು.

ಹೆಂಗಸರಿಗೆ ಹೇಳಿದ್ದೆನಲ್ಲ! ಸೂಟ್‌ಕೇಸ್ ನೋಡಿಕೊಳ್ಳುತ್ತಾರೆ.

ಮನಸ್ಸಿಗೆ ಸಮಾಧಾನ ಹೇಳುತ್ತ ಕೌಂಟರಿನಲ್ಲಿ ಊಟದ ಟಿಕೆಟ್ ತೆಗೆದುಕೊಂಡೆ. ಚಿಲ್ಲರೆ ಪಡೆಯುವಾಗಲೂ ಸೂಟ್‌ಕೇಸ್ ಕೊರೆಯುತ್ತಿತ್ತು.



ಕಲಾಕೃತಿ: ಎ.ಟಿ. ಅಕ್ಕಿ ಛಾಯಾಚಿತ್ರ: ಎಚ್. ಚಂದ್ರಶೇಖರ್

ಟೇಬಲ್‌ನಲ್ಲಿ ಊಟಕ್ಕೆ ಕುಳಿತಾಗ, ತಟ್ಟೆಯಲ್ಲಿ ಏನೇನು ಐಟಮ್ ಇದೆ ಅನ್ನೋದು ತಲೆಗೇ ಹೋಗಲಿಲ್ಲ.

ಸೂಟ್‌ಕೇಸ್‌ನಲ್ಲಿ ಕಾಗದ-ಪತ್ರ ಇದೆ ಅಂದಿದ್ದೇನಲ್ಲ! ಅವನು ಕಳ್ಳನಾದರೂ ಸೂಟ್‌ಕೇಸ್ ಒಯ್ಯಲು ಕಾರಣವೇ ಇಲ್ಲ; ಸಮಾಧಾನ ಹೇಳಿ ಕೊಂಡೆ.

ಗಡಿಬಿಡಿಯಿಂದಲೇ ಊಟ ಮಾಡಿ ಗಾಡಿಗೆ ಹಿಂದಿರುಗಿದರೆ, ಪಕ್ಕದ ಆಸಾಮಿ ಅಲ್ಲೇ ಕುಳಿತು ಕೊಂಡಿದೆ;

ಆದರೆ ಇಬ್ಬರು ಹೆಂಗಸರ ಸೀಟು ಖಾಲಿಯಾಗಿದೆ!

ನನ್ನ ತಲೆಯಲ್ಲಿದ್ದದ್ದು ಸೂಟ್‌ಕೇಸು.

ಅನುಮಾನ ಹಾದು, ಸೂಟ್‌ಕೇಸ್ ಇದೆಯೇ ನೋಡಲು ಬಗ್ಗಿದೆ. ಇನ್ನೂ ಸೀಟಿನ ಕೆಳಗೆ ದೃಷ್ಟಿ ಹಾಯಿಸಲಿಲ್ಲ. ಗಾಡಿಯಲ್ಲಿ ಪ್ಯಾಸೆಂಜರ್ಸ್ ಒಬ್ಬೊಬ್ಬರು ಒಂದೊಂದು ಮಾತು ಬೀಸಾಕಹತ್ತಿಬಿಟ್ಟರು.

''ಏನಿಟ್ಟಿದೀರ್ರಿ ಸೂಟ್‌ಕೇಸಿನಲ್ಲಿ?''

"ಯಾರ್ರಿ ಅವರು ಹೆಂಗಸರು?"

ನನಗೆ ಒಮ್ಮೆಲೆ ಏನೇನೂ ಅರ್ಥವಾಗಲಿಲ್ಲ.

ಹತ್ತೆಂಟು ಜನ ಒಂದೇ ಸಮನೆ ಮಾತಾಡುತ್ತಲೇ ಇದ್ದರು.

ನನ್ನ ಪಕ್ಕದ ಆಸಾಮಿ ಮುಗುಳ್ನಗುತ್ತಾ ಸುಮ್ಮನೆ ಕುಳಿತಿತ್ತು.

"ಯಾರ ಹತ್ತಿರ ಸೂಟ್‌ಕೇಸು ಒಪ್ಪಿಸಿ ಹೋಗಿದಿರೀ?"

"ನಿಮ್ಮ ಪಕ್ಕದವರು ಹೆಂಗಸರಿಂದ ಸೂಟ್‌ಕೇಸನ್ನು ಇಸಿದುಕೊಳ್ಳದೇ ಹೋಗಿದ್ದರೆ ನಿಮ್ಮ ಕಾಗದ-ಪತ್ರ ಎಲ್ಲ ಹೋಗುತ್ತಿತ್ತು ಕಣ್ರೀ, ಪಕ್ಕದವರಿಗೆ ನೀವು ಬಹುಮಾನ ಕೊಡಬೇಕು ನೋಡಿ."

"ಏನು ಧೈರ್ಯರೀ ಆ ಹೆಂಗಸರಿಗೆ!"

"ಅವರನ್ನು ಪೊಲೀಸರಿಗೆ ಕೊಡಬೇಕಾಗಿತ್ತು. ಕಣ್ರೀ"

"ತಪ್ಪಿಸಿಕೊಂಡು ಹೋಗಿಬಿಟ್ರು, ಕಳ್ಳ ಹೆಂಗಸ್ರು.."

"ಈ ಥರ ಎಷ್ಟು ಜನರ ಸೂಟ್‌ಕೇಸನ್ನು ಹಾರಿಸಿದ್ದರೋ ಏನೋ!"

ಕೆಲವರು ಜೋರಾಗಿ ನಗುತ್ತಿದ್ದರು; ಏನೇನೋ ಕೇಳುತ್ತಿದ್ದರು. ಆಶ್ಚರ್ಯದಿಂದ ಕುದಿಯುತ್ತಿದ್ದರು. ಮಧ್ಯ ಮಧ್ಯ ಪಕ್ಕದ ಆಸಾಮಿಯನ್ನು ಎಲ್ಲರೂ ಹೊಗಳುವವರೆ.

ಪ್ಯಾಸೆಂಜರರ ಮಾತು ನನ್ನನ್ನು ಚಿಂದಿ ಚಿಂದಿ ಮಾಡಿಬಿಟ್ಟವು. ಸ್ವಲ್ಪ ಹೊತ್ತಿನಲ್ಲೇ ನನಗೆ ಎಲ್ಲವೂ ಅರ್ಥವಾಗಿಹೋಯಿತು. ಸೂಟ್‌ಕೇಸನ್ನು ಆ ಹೆಂಗಸರೇ ಕದಿಯಲು ಯತ್ನಿಸಿದ್ದರು.

ಬೆವರು ಒರೆಸಿಕೊಳ್ಳುತ್ತ ಪಕ್ಕದವನ ಹತ್ತಿರ ನಿಂತು ಹೇಳಿದೆ, "ಸ್ಸಾರಿ, ಸಾರ್, ನೀವೇ ಸೂಟ್‌ಕೇಸನ್ನ ಆ ಹೆಂಗಸರ ಕೈಯಿಂದ ಇಸಗಂಡರಂತೆ, ಆ ಹೆಂಗಸರು ಕಳ್ಳರು ಅಂತ ಗೊತ್ತಾಗಲಿಲ್ಲ ಸಾರ್, ಬಹಳ ಮಹತ್ವದ ಕಾಗದ-ಪತ್ರ ಇದ್ದವು. ಉಳಿಸಿ ಕೊಟ್ಟಿರಿ. ನೀವ್ಯಾರು ಸಾರ್? ಥ್ಯಾಂಕ್ಸ್! ನಿಮಗೆ 500 ರೂ. ಕೊಟ್ಟರೂ ಕಡಿಮೆ ಸಾರ್, ಬೇಡ ಅನ್ನಬೇಡಿ, ಕೊಡ್ತೀನಿ ತಗಳಿ"

ಉದ್ವೇಗದಲ್ಲಿ ನನ್ನಷ್ಟಕ್ಕೆ ನಾನು ಏನೇನನ್ನೋ ಹಲುಬುತ್ತಲೇ, ಜೇಬಿಗೆ ಕೈಹಾಕಿ ದುಡ್ಡು ತೆಗೆದೆ.

ಕುರೂಪಿ ಮಕದ ಆಸಾಮಿ ನಗುಮುಖದಿಂದಲೇ ಮಾತಾಡಿತು.

"ಇಟ್ಟಕಳಿ ಸಾರ್, ಯಾರನ್ನ ಬ್ಲಫ್ ಮಾಡ್ತಾ ಇದೀರಿ!" ನಾನು ಗರ ಬಡೆದವನಂತೆ ನಿಂತಿದ್ದೆ.

"ಏನ್ ಕಾಗದ ಪತ್ರ ಇಟ್ಟಿದ್ರೀ? ಸೂಟ್‌ಕೇಸಿನಲ್ಲಿ 5 ಲಕ್ಷ ರೂ. ಮಡಿಕ್ಕಂಡು ಕಳ್ಳರ ಕೈಗೆ ಒಪ್ಪಿಸಿ ಹೋಗಿದಿರಾ, ಏನ್ರೀ ನೀವು!", ಆತ ಮಾತಾಡುತ್ತಲೇ ಇದ್ದ.

ನಾನು ಕುಸಿದು ಕುಕ್ಕರಿಸಿ ಹೋದೆ. ನನ್ನ ಬಾಯಿಂದ ಶಬ್ದಗಳೇ ಹೊರಡಲಿಲ್ಲ!

ನನ್ನ ಸೂಟ್‌ಕೇಸಿನಲ್ಲಿ 5 ಲಕ್ಷ ರೂ. ಇದ್ದದ್ದು ಹೊರಗಿನವರಿಗೆ ಹೇಗೆ ಗೊತ್ತಾಯಿತು ಅನ್ನೋ ಆಶ್ಚರ್ಯಕ್ಕಿಂತ ನನ್ನ ಸೌಂದರ್ಯ ಪ್ರಜ್ಞೆ ಮೇಲೆ ನನಗೇ ನಾಚಿಕೆಯಾಗಿ ತಲೆತಗ್ಗಿಸಿಕೊಂಡೆ. ನಾನು ಓದಲೆಂದು ಹೊರಗಿಟ್ಟದ್ದ ಕಾಸ್ಮೆಟಿಕ್ಸ್ ಪುಸ್ತಕ, 'ಹ್ಯಾಂಡ್‌ಸಮ್ ಈಸ್ ಹ್ಯಾಂಡಸಮ್ ಡಸ್' ಆ ಕುರೂಪಿಯ ಕೈಯಲ್ಲಿತ್ತು.

ಬಸ್ಸು ಯಾವಾಗಲೋ ಸ್ಟ್ಯಾಂಡನ್ನು ಬಿಟ್ಟು, ಊರನ್ನು ದಾಟಿ, ಅರಣ್ಯದ ಮಧ್ಯ ಓಡುತ್ತಿತ್ತು.









## ಡಿಸೆಂಬರ್ ಸಂಚಿಕೆಯ
## 'ಸಂಪಾದಕೀಯ'ದಲ್ಲಿರುವ 'ಹಸಿ ಬಿಸಿ'ಯ ಬಗ್ಗೆ

ಜೀವನದಲ್ಲಿ ಇರಬೇಕಾದ ಲವಲವಿಕೆ, ಮುಗ್ಧತೆ, ಇವುಗಳ ಅಭಾವದಿಂದ ಸೃಷ್ಟಿಯಾಗುವ ನೀರಸತೆಯ ಬಗ್ಗೆ ಗಮನ ಸೆಳೆಯುವ ನಿಮ್ಮ ಸಂಪಾದಕೀಯ, ಈ ಲವಲವಿಕೆಯೇ ಸಾಹಿತ್ಯದ ಜೀವಾಳವೆನ್ನುತ್ತದೆ. ಜೀವಂತಿಕೆಯ ಪ್ರಮುಖ ಲಕ್ಷಣವೇ ಇದು ಎಂಬ ನಿಮ್ಮ ಅಭಿಪ್ರಾಯವನ್ನು ನಾನೂ ಅನುಮೋದಿಸುತ್ತೇನೆ.

ಆದರೆ:

ಬೆಳವಣಿಗೆಯೆಂಬುದು ಕೇವಲ 'ಬಾಲಿಶ ತರ್ಕ' ಆಗಬೇಕಿಲ್ಲ. 'ಹಸಿ ಬಿಸಿ'ಯ ಎಳೆತನ ಮಾಗಿ, (ಮಾಗಲೇಬೇಕು) ಅಚ್ಚರಿ, ಬೆರಗಾಗಿ ಜವಾಬ್ದಾರಿಯುತ ವ್ಯಕ್ತಿತ್ವ ಮೂಡಬೇಕಾದ ಅವಶ್ಯಕತೆಯನ್ನು ನಿಮ್ಮ ಸಂಪಾದಕೀಯ ಗೌಣವಾಗಿಸಿಬಿಟ್ಟಿದೆ. ನೀವು ಹೇಳುವ 'ಹಸಿ ಬಿಸಿ' ಕಾವ್ಯದ ಪ್ರಾರಂಭಿಕ ಹಂತ ಹಾಗೂ ಹೊರ ಮೈನ ಕಾಂತಿಯೇ ಹೊರತು ಅಂತರಿಕ ಜೀವಸತ್ತ್ವವಾಗಲಾರದು, (ಆಗಬಾರದು). Poetry should begin with delight and end in wisdom ಎಂಬುದು ಪ್ರಸಿದ್ಧ ಕವಿ Robert Frost ರ ನಂಬಿಕೆ.

'ಹಸಿಬಿಸಿ' ಜೀವಂತಿಕೆಯ ಲಕ್ಷಣವಾಗಬೇಕು; ಜೀವನೋದ್ದೇಶವಾಗಬಾರದು. 'ಹಸಿಬಿಸಿ'ಯ ಲವಲವಿಕೆಯನ್ನು ಮೀರಿನಿಂತ "straight faced ವ್ಯಕ್ತಿತ್ವ, ಭಾವನಾಶೂನ್ಯ ವಿಜ್ಞಾನ-ತಂತ್ರಜ್ಞಾನವನ್ನೂ, 'Men Don't cry' ಎಂಬ ದಾನವೀ ತಿಳಿವಳಿಕೆಯನ್ನೂ ಮೂಡಿಸುವ ಅಸಹಜ ಸ್ಥಿತಿ ನಿಜ. ಆದರೆ 'ಹಸಿಬಿಸಿ'ಯನ್ನಷ್ಟೇ ನೆಚ್ಚಿ ನಿಲ್ಲುವ ವ್ಯಕ್ತಿ (ಸಾಹಿತ್ಯ) ವಿಕಾಸ ಕ್ರಮದಲ್ಲಿ ಮನುಷ್ಯನಾಗದೇ ಮಂಗನಂತಾಗಿ ಉಳಿದುಬಿಡುವ ಅಪಾಯ ಇದೆ.

ಸಾಹಿತ್ಯವಾಗಲೀ, ವ್ಯಕ್ತಿಯಾಗಲೀ (it) should be childlike, not childish. ಅದಕ್ಕೆ ಸಾಧಿಸಬೇಕಾದ ಘನೋದ್ದೇಶ ಇದೆ. ಆ ಮಾರ್ಗದಲ್ಲಿ 'ಹಸಿಬಿಸಿ' ಕೇವಲ ಒಂದು tool ಎಂಬ ತಿಳಿವಳಿಕೆ ಅತ್ಯವಶ್ಯ.



**ಎಂ. ಆರ್. ರಾಮಶೇಷ**

# ಕೊನೆಯ ಆಲಾಪ

ಫೆಬ್ರವರಿ 2001ರ ಸಂಚಿಕೆಯ 'ಕೊನೆಯ ಆಲಾಪ'ದಲ್ಲಿ ತಾನ್‌ಸೇನ್ ಕುರಿತು ಪ್ರಚಲಿತವಿರುವ ದಂತಕತೆಗಳಲ್ಲಿ ಒಂದನ್ನು ಪ್ರಕಟಿಸಲಾಗಿದೆ. ಈ ದಂತಕತೆಯ ಇನ್ನೊಂದು ಮುಖ ಈ ಕೆಳಗಿನಂತಿದೆ.

ಅಕ್ಬರ್‌ನ ಜನಾನಾದವರ ಒತ್ತಾಯಕ್ಕೆ ಮಣಿದು ತಾನ್‌ಸೇನ್, 'ದೀಪಕ್' ರಾಗವನ್ನು ಹಾಡುತ್ತಾನೆ. ದೀಪಗಳೂ ಈ ರಾಗದ ಗಾಯನಕ್ಕೆ ತಂತಾನೆ ಹತ್ತಿ ಉರಿದು ಬೆಳಗತೊಡುತ್ತವೆ. ಆದರೆ ತಾನ್‌ಸೇನ್‌ನ ಮೈಯೊಳಗೆ ಈ ರಾಗದ ಸ್ವರಸಂಚಾರ, ಉಪಶಮನವಿಲ್ಲದೆ ನರನರಗಳನ್ನೆಲ್ಲಾ ವ್ಯಾಪಿಸಿ, ಆತನನ್ನು ಒಳಗೇ ದಹಿಸತೊಡಗುತ್ತದೆ. ಇದಕ್ಕೆ ಶಮನ ನೀಡಬೇಕಿದ್ದುದು ಈ ರಾಗ ಹಾಡಿದ ನಂತರ ಮತ್ತೊಬ್ಬರು ಹಾಡಬೇಕಿದ್ದ 'ಮಲ್ಹಾರ್' ರಾಗ. 'ಮಲ್ಹಾರ್' ಹಾಡುವವರನ್ನು ಹುಡುಕುತ್ತ ತಾನಸೇನ್ ದೇಶ ಪರ್ಯಟನೆಗೆ ಹೊರಡುತ್ತಾನೆ. ಅಕ್ಬರ್ ಇವನನ್ನು ಎಲ್ಲ ರಾಜ ಸವಲತ್ತುಗಳೊಂದಿಗೆ ಕಳುಹಿಸಿಕೊಟ್ಟಿರುತ್ತಾನೆ.

ತಾನ್‌ಸೇನ್‌ನನ್ನು ಹೊತ್ತ ಪಾಲಿಕೆ ನಗರ-ಹಳ್ಳಿಗಳನ್ನು ಹಾಯುತ್ತ, ಗುರ್ಜರ ದೇಶಕ್ಕೆ, ಭೂಕಂಪದಿಂದ ಜರಿದು ಹೋಗಿರುವ ಇಂದಿನ ಗುಜರಾತಿಗೆ-ಬರುತ್ತದೆ. ಒಂದು ಊರಿನ ಹೊರಂಚಿನಲ್ಲಿ ತಾನ್‌ಸೇನ್‌ನನ್ನು ಹೊತ್ತ ಗುಂಪು ಸಾಗುತ್ತಿರುತ್ತದೆ. ಪಕ್ಕದಲ್ಲೇ ಬಾವಿಯಿಂದ ನೀರು ಸೇದುವ ಹೆಂಗಳೆಯರು ತಾನ್‌ಸೇನ್‌ನ ಕಣ್ಣಿಗೆ ಬೀಳುತ್ತಾರೆ. ಉರಿಯ ಧಗೆಗೆ ನೀರು ಕುಡಿವಂತಾಗಿ ತಾನ್‌ಸೇನ್, ಪಾಲಿಕೆಯಿಂದಿಳಿದು ಬಂದು ನೀರು ಕೇಳುತ್ತಾನೆ. ಹರೆಯದ ಹುಡುಗಿಯೊಬ್ಬಳು ಅದೇ ತಾನೇ ಸೇದಿದ ಬಿಂದಿಗೆಯಿಂದ ಬೊಗಸೆಮಾಡಿದ್ದ ತಾನ್‌ಸೇನ್‌ಗೆ ನೀರು ಹಣಿಸುತ್ತಾಳೆ. ಒಂದು ಬಿಂದಿಗೆ ಕುಡಿದೂ, ಮತ್ತಷ್ಟು ಬೇಕು ಎಂಬಂತೆ ಸಂಜ್ಞೆ ತೋರಿದ್ದಕ್ಕೆ ಈಕೆಯ ಸೋದರಿ, ತಾನು ಸೇದಿದ ಕೊಡದ ನೀರನ್ನೂ ಹೊಯ್ಯುತ್ತಾಳೆ. ಎರಡು ಬಿಂದಿಗೆ ಕುಡಿದೂ ತಣಿಯದ ದಾಹಕ್ಕೆ ಬಾವಿಯ ಬಳಿಯಿದ್ದವರು ಬೆರಗಾಗಿ ನೋಡುತ್ತಾರೆ.

ಊರೊಳಗಿನ ಮನೆಗೆ ನೀರು ಹೊತ್ತು ಬಂದ ಸೋದರಿಯರು, ಹೀಗೆ ಬಿಂದಿಗೆಗಟ್ಟಲೆ ನೀರು ಕುಡಿದ ಅಚ್ಚರಿಯ ಸಂಗತಿಯನ್ನು ತಮ್ಮ ತಂದೆಗೆ ತಿಳಿಸುತ್ತಾರೆ. ಆತ, 'ಹಾಗಿದ್ದರೆ ಅವನು ತಾನ್‌ಸೇನ್ ಇರಬೇಕು. ದೀಪಕ್ ರಾಗ ಹಾಡಿದವರು, ಪ್ರತಿಯಾಗಿ, ಉಪಶಮನ ಗೊಳಿಸುವ ಮಲ್ಹಾರ್ ಕೇಳದಿದ್ದರೆ ಹೀಗಾಗುತ್ತದೆ' ಎಂದು ನುಡಿಯುತ್ತಾನೆ. ಇಷ್ಟು ದೊಡ್ಡ ಸಂಗೀತಗಾರ ತಮ್ಮ ಊರಿನ ಬಳಿಗೇ ಬಂದಿರುವುದನ್ನು ತಿಳಿದು ಆತ ಊರ ಸಮೀಪದಲ್ಲೇ ಇರಬಹುದೇನೋ ಎಂದು ಹುಡುಕಿ ಬರುತ್ತಾನೆ. ತಾನ್‌ಸೇನ್ ಊರ ಮುಂದಿನ ಛತ್ರದಲ್ಲಿಯೇ ಬೀಡುಬಿಟ್ಟಿರುತ್ತಾನೆ. ಪರಸ್ಪರ ಪರಿಚಯವಾದಾಗ, ತಾನ್‌ಸೇನ್‌ನೊಳಗಿನ ಬೇಗೆಯ ಉರಿ ಈ ಹೃದಯವಂತನ ಮನ ಕದಡುತ್ತದೆ. ತನ್ನ ಮಕ್ಕಳಿಂದ 'ಮಲ್ಹಾರ್' ಹಾಡಿಸಿ 'ದೀಪಕ್'ನ ಬೇಗೆಯನ್ನು ಉಪಶಮನಗೊಳಿಸಲು ಮುಂದಾಗುತ್ತಾನೆ.

ಸುದ್ದಿ ಹರಡಿ ಜನ ಬಂದು ನೆರೆಯುತ್ತದೆ. ನರನರಗಳೊಳಗೆ ಹರಿಯುತ್ತಿರುವ ದೀಪಕ ರಾಗದ ಸ್ವರಗಳುರಿಯಲ್ಲಿ, ಕೂತಲ್ಲಿ ಕೂರಲಾಗದ, ನಿಲ್ಲಲಾಗದೆ ಚಡಪಡಿಸುತ್ತಿದ್ದ ತಾನಸೇನ, ಮೈಯೆಲ್ಲಾ ಕಿವಿಯಾಗಿ ಕೂರುತ್ತಾನೆ. ಸಿರಿಕಂಠದ ಮಾಧುರ್ಯ ತುಂಬಿದ ಹದಿಹರೆಯದ ಸೋದರಿಯರು, ಮುಗ್ಧತೆಯಲ್ಲಿ 'ಮಲ್ಹಾರ್' ಗಾಯನಕ್ಕೆ ಮೊದಲಿಡುತ್ತಾರೆ. ಸ್ತಬ್ಧ ಪ್ರಕೃತಿಯನ್ನೇ ತುಯ್ದಾಡಿಸುವಂತೆ ಹರಿವ ಈ ಸೋದರಿಯರ ಸ್ವರಗಾಯನ, ರಾತ್ರಿಯ ತಿಳಿಯಾಗಸದಲ್ಲಿ ಮಿಂಚಿನ ಸೆಳಕುಗಳನ್ನು

ಹರಿದಾಡಿಸುತ್ತದೆ. ಮೋಡಗಳು ದಟ್ಟೈಸುತ್ತವೆ. ಮಳೆಹನಿಗಳ ಧಾರೆ ಮುಗಿಲಿಂದಿಳಿಯತೊಡಗುತ್ತದೆ. ಸುರಿವ ಮಳೆಯೊಂದಿಗೆ ಸೋದರಿಯರ ಗಾಯನ ಬೆರೆಯತೊಡಗಿ, ಅಲೌಕಿಕ ಉಲ್ಲಾಸದ ಅಲೆಗಳು ಚಿಮ್ಮಿ ಉಕ್ಕುತ್ತವೆ.



ದೇವದಾಸ್

ತಾನಸೇನ್‌ನ ಅಂತರಂಗದ ತಳಮಳ, ಒಳಗಿನ ಕೋಲಾಹಲ ಪ್ರಶಾಂತಗೊಳ್ಳುತ್ತದೆ. ಒಬ್ಬ ಮಹಾನ್ ಕಲಾವಿದನಿಗೆ ತನ್ನ ಮಕ್ಕಳಿಂದ ದೊರೆತ ಉಪಶಮನದ ಸಂತೋಷದಲ್ಲಿ ಈ ತಂದೆ, ಅಭಿನಂದನೆಗಳ ಮಹಾಪೂರದಲ್ಲಿ ಮನೆಗೆ ಹೋಗುತ್ತಾನೆ. ಈ ಸಂತೋಷಕ್ಕೆ ಬರಸಿಡಿಲು ಎರಗುವಂತೆ ಒಬ್ಬ 'ಕಾಫಿರ'ನ ಮುಂದೆ ಹಾಡಿರುವ ಹೆಣ್ಣನ್ನು ಮದುವೆಯಾಗುವುದಿಲ್ಲ ಎಂಬ ಸುದ್ದಿಯನ್ನು ನಿಶ್ಚಿತಾರ್ಥ ಮಾಡಿಕೊಂಡು ಹೋಗಿದ್ದವವರು ಕಳಿಸುತ್ತಾರೆ. ಊರ ಸಂಪ್ರದಾಯಸ್ಥರೂ ಬಹಿಷ್ಕಾರ ಹಾಕುತ್ತಾರೆ. ದಿಕ್ಕು ತೋಚದೆ ಕುಳಿತ ತಂದೆಯ ಪರಿಸ್ಥಿತಿಯನ್ನು ಕಂಡ ಸೋದರಿಯರು, ತಂದೆಗೆ ಎದುರಾಗಿರುವ ಸಂಕಟಕ್ಕೆ ತಾವೇ ಕಾರಣವೆಂದು ಬಾವಿಗೆ ಬಿದ್ದು ಅಸು ನೀಗಿಕೊಳ್ಳುತ್ತಾರೆ.

ಈ ದಾರುಣ ಘಟನೆಯನ್ನು ಕೇಳಿದ ತಾನ್‌ಸೇನ್ ಮಮ್ಮಲ ಮರುಗುತ್ತಾನೆ. ತನ್ನ ಗಾಯನದ ಸ್ವರದಲ್ಲಿ ಈ ಸೋದರಿಯರಿಬ್ಬರ ಹೆಸರನ್ನು ಸ್ವರಗಳಾಗಿ ಹಾಡತೊಡಗಿ, ಅವರಿಗೆ ಎದೆ ತುಂಬಿದ ಗೌರವ ನೀಡಿ, ಅವರ ಹೆಸರನ್ನು ಅಮರಗೊಳಿಸುತ್ತಾನೆ. ಧ್ರುಪದ್ ಗಾಯನದಲ್ಲಿ ಈಗಲೂ ಅದು ಜೀವಂತವಾಗಿದೆ.

ಈ ಕಥೆಯನ್ನು ಆಧರಿಸಿ ಗುಜರಾತಿಯಲ್ಲಿ 'ತಾನಾರೀರಿ' ಎಂಬ ಚಲನಚಿತ್ರ ಹೊರಬಂದಿದೆ. ಈ ಚಿತ್ರಕ್ಕೆ ಸುಪ್ರಸಿದ್ಧ ಗಾಯಕರಾಗಿದ್ದ ಉಸ್ತಾದ್ ನಸಿರುದ್ದೀನ್ ಡಾಗರ್ ಸಂಗೀತ ನೀಡಿದ್ದಾರೆ. ಇಡೀ ಚಿತ್ರ, ಒಂದು ಕಾಲ ಘಟ್ಟದ ಸಾಂಸ್ಕೃತಿಕ ವಿವರಗಳನ್ನು ತುಂಬಿಕೊಂಡಿದ್ದು, ಮನಕುಲಕುತ್ತ ಹೃದಯವನ್ನು ತಬ್ಬುತ್ತದೆ. 'ತಾನಾರೀರಿ' ಎಂಬ ಆ ಸೋದರಿಯರ ಹೆಸರು ಸ್ವರಗಳಾಗಿ ಒಂದು ಅಪೂರ್ವ ಶೈಲಿಯಲ್ಲಿ ಜೀವಂತವಾಗಿ ಮುಂದುವರಿಯುತ್ತಿರುವುದನ್ನು ಈ ಕಥೆ, ಹಲವು ಮುಖಗಳಲ್ಲಿ ಚಿತ್ರಿಸುತ್ತದೆ.

('ದೀಪಕ್' ರಾಗದ ಹಾಡಿದ ನಂತರ 'ಮಲ್ಹಾರ್' ಹಾಡಲು ದಿಲ್ಲಿಯಲ್ಲೇ ಒಬ್ಬ ಗಾಯಕಿಯನ್ನು ತಾನಸೇನ್ ನಿಯೋಜಿಸಿಕೊಂಡಿದ್ದ; ಆದರೆ ಆಕೆ ತಾನ್‌ಸೇನನ ವಿರೋಧಿಗಳ ಕುತಂತ್ರಕ್ಕೆ ಸಿಕ್ಕು ನಾಪತ್ತೆಯಾದಳು ಎಂಬ ದಂತಕತೆಯೂ ಇದೆ. ಶಂಕರ ಮೊಕಾಶಿ ಪುಣೇಕರರು 'ಬಿಲಾಸ್‌ಖಾನ್' ಎಂಬ ಕಥೆಯೊಂದನ್ನು ಬರೆದಿದ್ದು, ಇದರಲ್ಲಿ ತಾನ್‌ಸೇನ್, ಬಾಲಕನೊಬ್ಬ ಸಾವಿಗೀಡಾದ ನಂತರ ಆತ ತನ್ನ ಮಗನೆಂಬ ವಿಷಯ ತಿಳಿದು, ಅಶ್ರುಜಲ ಹರಿಸುತ್ತ, ಮಗನ ಶರೀರವನ್ನು ತೊಡೆಯ ಮೇಲಿರಿಸಿಕೊಂಡು 'ಬಿಲಾಸ್‌ಖಾನ್' ರಾಗ ಹಾಡಿದ್ದು ಮೂಡಿಬಂದಿದೆ.)

**ಲಿಂಗರಾಜು**



ಸಹನಾ

# ಚಾಂಪಿಯನ್ ಕನಸು

ಐದೂವರೆಗೆ ಮುಚ್ಚುವ ಲೈಬ್ರರಿಯಿಂದ ನಾಲ್ಕೂವರೆಗೇ ಹೊರಬಿದ್ದು, ಪೂರಾ ಕ್ಯಾಂಪಸ್ ಸುತ್ತಾಡಿ, ಅವರಿವರನ್ನು ಕೇಳಿಕೊಂಡು, ಮೂಲೆಯಲ್ಲಿ ಕಂಡ ಎಸ್‌ಟಿಡಿ/ಐಎಸ್‌ಡಿ ಬೋರ್ಡ್ ನೋಡಿ ಒಳಗೆ ನುಗ್ಗಿದರೆ,

"ಫೋನ್ ಔಟ್ ಆಫ್ ಆರ್ಡರ್ ಮ್ಯಾಡಮ್"

"ಹೌದಾ?!" ಛೇ! ಏನು ಮಾಡೋದು "ಬೇರೆ ಎಲ್ಲಿ ಫೋನ್ ಮಾಡಬಹುದು?"

"ನೀವು ಕ್ಯಾಂಪಸ್‌ನಿಂದ ಹೊರಗೆ ಹೋಗಿ, ಬಲಕ್ಕೆ ಒಂದು ಪೋಸ್ಟ್ ಆಫೀಸು ಇದೆ. ಅಲ್ಲಿಂದ ಮಾಡಬಹುದು."

ನೂರೈವತ್ತು ಎಕರೆಯ ಕ್ಯಾಂಪಸ್ ನಾನು ದಾಟಿ ಹೊರಗೆ ಬರುವುದರೊಳಗೆ ಐದೂವರೆ ಆಗಿಬಿಟ್ಟರೆ, ನನ್ನ ಆಫೀಸ್ ಬಾಗಿಲು ಹಾಕಿಬಿಡತ್ತೆ ಅಂತ ಓಡೋಡಿ ಹೊರಗೆ ಬಂದರೆ, "ಐದು ಗಂಟೆ ಆಯಿತು, ಮ್ಯಾಡಮ್, ಪೋಸ್ಟ್ ಆಫೀಸ್ ಬಾಗಿಲು ಹಾಕಿದೆ", ಗೇಟ್ ಬಳಿ ಗಾರ್ಡ್ ಹೇಳಿದ ಪಕ್ಕದ ಜೆರಾಕ್ಸ್ ಷಾಪ್‌ಗೆ ನುಗ್ಗಿ,

"Do you have a Phone?"

"Sorry, Madam."

"Where can I make a phone call?"

"ನೀವು ಸೀದಾ ಹೋಗಿ, ಬಲಕ್ಕೆ ತಿರುಗಿ ನೆಟ್ಟಗೆ ಹೋಗಿ. ಒಂದು ದೊಡ್ಡ ಕಲೋನಿಯಲ್ ಬಿಲ್ಡಿಂಗ್ ಇದೆ. ಅದರ ಹತ್ತಿರ ಟೆಲಿಕಾಮ್ ಆಫೀಸ್ ಇದೆ. ಅಲ್ಲಿ ಹೋಗಿ.

"ಇಷ್ಟು ಹೊತ್ತಿಗೆ ತೆಗಿದಿರತ್ತಾ?"

"ಖಂಡಿತ."

"Thank you."

ಮತ್ತೆ ಘಂಟೆ ನೋಡಿಕೊಂಡೆ. 5.10 ಆಗಿತ್ತು. ಬೇಗ ಸಿಗಲಪ್ಪ ದೇವರೇ ಅಂದುಕೊಂಡು ನಡೆಯುತ್ತಿದ್ದಾಗ, ಟೆಲಿಕಾಮ್ ಆಫೀಸ್‌ನ ಹೊರಗೇ, ಒಂದಲ್ಲ ಎರಡು ಬೂತ್‌ಗಳನ್ನು ನೋಡಿ ನಿರಾಳ...

ಒಳಗೆ ನುಗ್ಗಿ ನಂಬರ್ ಡಯಲ್ ಮಾಡಿದರೆ... ಏನೂ ಇಲ್ಲ.

"ನೋಡಿ, ಇದು ಯಾಕೋ ಕನೆಕ್ಟ್ ಆಗ್ತಾ ಇಲ್ಲ"

"ಓ, ಆಗ್ತಾ ಇಲ್ಲವಾ, ಬಿಡಿ ಆಗ್ಲಿಂದ ಯಾವ ಫೋನೂ ಹೋಗ್ತಾ ಇಲ್ಲ. ಎಕ್ಸ್‌ಚೇಂಜು ಪ್ರಾಬ್ಲಮ್ ಇರಬೇಕು."

ಛೇ, ನನ್ನ ಲಕ್ ಸರಿ ಇಲ್ಲ. ಇನ್ನಂತೂ ಫೋನ್ ಮಾಡಲು ಸಾಧ್ಯ ಇಲ್ಲ. ಆದರೇನಂತೆ, ನೀನು ಆಫೀಸ್‌ನಿಂದ ಬರುವ ದಾರಿ ಅದೇ ಅಲ್ಲವಾ! ನೀನು ಆಫೀಸು ಐದೂವರೆಗೆ ಬಿಟ್ಟರೆ ಇಲ್ಲಿಗೆ ಬರಲು 15 ನಿಮಿಷ ಸಾಕು. ಆದರೂ ಆರು ಘಂಟೆವರೆಗೂ ಕಾಯೋದು ಅಂತ ಅಂದುಕೊಂಡು, ಸಿಗ್ನಲ್ ಬಳಿ ಬಂದು ನಿಂತು, ಬರುವ ಪ್ರತಿಯೊಂದು ಬೈಕನ್ನೂ ಯಾವುದು, ಯಾವ ಬಣ್ಣದ್ದು, ಕೂತಿರುವವರು ಹೆಲ್ಮೆಟ್ ಹಾಕಿದ್ದಾರಾ ಇತ್ಯಾದಿ ವಿವರಗಳನ್ನು ಗಮನಿಸ್ತಾ, ಆಗಾಗ ಟೈಮ್ ನೋಡ್ತಾ ನಿಂತಾಗ,

ಅಯ್ಯೋ ನಾನು ಈ ಕಡೆ ನಿಂತಿರುವಾಗ, ಈ ಲಾರಿಗಳೆಲ್ಲಾ ಅಡ್ಡ ನಿಂತು ನಿನಗೆ ನಾನು ಕಾಣದೇ ಹೋದರೆ! ದೇವರೇ ಹಾಗಾಗದಿರಲಿ ಅಂತ ಪ್ರಾರ್ಥಿಸ್ತಾ, ಲಾರಿಗಳ ಅಡಿಯಿಂದ ಕಾಣುವ ಎಲ್ಲಾ ಚಕ್ರಗಳನ್ನೂ ಗಮನಿಸ್ತಾ ಇರುವಾಗ, ನನ್ನ ಕಣ್ಣುಗಳು ಮೈಸೂರು ರೆಜಿಸ್ಟ್ರೇಷನ್ ಇರುವ ಹಸಿರು ಬಣ್ಣದ ಬಜಾಜ್ 4S ಚಾಂಪ್‌ಗೆ ಕಾಯ್ತಾ ಇದ್ದವು. ಅಷ್ಟರಲ್ಲೇ, ಎರಡು ಬಜಾಜ್ 4S ಚಾಂಪ್, ನಿನ್ನ ಬೈಕಿನ ಬಣ್ಣದ್ದೇ ಹೋದಾಗ... ಏನು ಹೇಳೋದು ಏನಾಯಿತು ಅಂತ.

ಕೊನೆಗೆ ಕಾದೂ ಕಾದೂ ಕಣ್ಣು ಸೋತು, ಕೊನೆಯ ಬಸ್ಸು ಮಿಸ್ ಮಾಡುವ ಹಾಗಿಲ್ಲ, ಸರಿ ಹತ್ತಿ ಅಂದುಕೊಂಡು ಸಿಗ್ನಲ್ ಮಧ್ಯವೇ ಹತ್ತಲು ಓಡಿ, ಬಸ್ ಹತ್ತುವಾಗಲೂ ಕೊನೆಯ ಆಸೆ, ನಿನ್ನ ಬೈಕ್ ಹಿಂದ ಇರಬಹುದು ಅಂತ. ನಾನು ಹತ್ತಿದ್ದನ್ನು ನೋಡಿದ ಕಂಡಕ್ಟರ್, "ನೋಡಮ್ಮಾ ಹಾಗೆಲ್ಲ ಸಿಗ್ನಲ್ ಮಧ್ಯದಲ್ಲಿ ಹತ್ತಬಾರದು." ಸರಿ ಆಯಿತಲ್ಲ ಇನ್ನು ಕಿಟಕಿಯ ಹೊರಗೇ ಕಣ್ಣು. ಎಲ್ಲಾದರೂ ಹಸಿರು ಬಣ್ಣದ ಬಜಾಜ್ 4S ಚಾಂಪ್ ಕಾಣತದಾ ಅಂತ.

ಇದೆಲ್ಲದರ ಮಧ್ಯೆಯೂ ಬಸ್ ಹತ್ತಿದ ಧಡೂತಿ ಹೆಂಗಸೊಬ್ಬಳು, ಕಾಂಗರೂ ಥರ ತನ್ನ ಮಗುವನ್ನು ಅಪ್ಪಿಕೊಂಡು, ಕಿಕ್ಕಿರಿದ ಜನರ ಮಧ್ಯೆ ಎಲ್ಲರನ್ನೂ ತಳ್ಳಿಕೊಂಡು ಜಾಗ ಮಾಡಿಕೊಂಡು ಸೀಟು ಪಡೆದದ್ದು, ಅಲ್ಲಿ ಇನ್ನೇನು ಮಗು ಅಪ್ಪಚ್ಚಿ ಆಗ್ತದೇನೋ ಅನ್ನೋ ಹಾಗೆ ನುಗ್ಗಿ, ಸೀಟ್ ಮೇಲೆ ಕೂತುಬಿಟ್ಟದ್ದು ಗಮನ ಸೆಳೆಯಿತು.

...ಸಿಗದಿದ್ದರೇನಾಯಿತು, ಮನೆಗೆ ಹೋಗಿ ಫೋನ್ ಮಾಡೋದು, ಫೋನ್‌ನಲ್ಲಿ ಏನು ಹೇಳೋದು ಅಂತೆಲ್ಲಾ ಯೋಚನೆಯಲ್ಲಿ ನನ್ನ ಸ್ಟಾಪ್ ಮುಗಿದದ್ದು ತಿಳಿಯದೆ, ತಡಬಡಾಯಿಸಿ ನೆಕ್ಸ್ಟ್ ಸ್ಟಾಪ್‌ನಲ್ಲಿ ಇಳಿದು, ಓಡೋಡಿ ಮನೆಗೆ ಬಂದರೆ, ನನ್ನ ಮನೆಯ ಮುಂದೆ ನಿನ್ನ ಮೈಸೂರಿನ ರೆಜಿಸ್ಟ್ರೇಷನ್ ಇರುವ ಹಸಿರು ಬಜಾಜ್ 4S ಚಾಂಪ್!!



ನಿರುಪಮಾ.

# ಗಾಳಿ ಪುಟ

## ‘ನೇಯ್ಗೆ ಚಿತ್ರ’

ತಮ್ಮ ‘ವೃಕ್ಷ’ ಮತ್ತು ‘ಮಿಥುನ’ ಸರಣಿಯ ಕಲಾಕೃತಿಗಳು ಮತ್ತು ತಾಮ್ರಪಟಗಳಿಂದ ಖ್ಯಾತರಾಗಿರುವ ಚಿತ್ರಕಲಾವಿದ ಎಸ್.ಜಿ. ವಾಸುದೇವ್ ಅವರ ಪ್ರಯೋಗ ಶೀಲತೆಯ ಈಚಿನ ಫಲಶ್ರುತಿ ‘ನೇಯ್ಗೆಚಿತ್ರ’. ಸುರಿತೆ ನೇಕಾರ ಸುಬ್ಬರಾಯುಲು ಅವರ ಸಹಯೋಗದಲ್ಲಿ ವಾಸುದೇವ್ ರೇಷಿಮೆ ಎಳೆಗಳಲ್ಲಿ ನೇಯ್ದಿರುವ ಈ ತೂಗು ಚಿತ್ರಗಳು ತಮ್ಮ ‘ಒಳಮೌನ’ದಿಂದ ಸ್ಪಂದಿಸುತ್ತವೆ. ಇಲ್ಲಿ ಚಿತ್ರವೊಂದು ನೇಯ್ಗೆಯಲ್ಲಿ ಸಿಕ್ಕು ಬಿದ್ದಂತೆ ಅಥವಾ ಕಟ್ಟಲ್ಪಟ್ಟಂತೆ ಭಾಸವಾಗದೇ ಇರುವುದಕ್ಕೆ ಬಹುಶಃ ಮುಖ್ಯ ಕಾರಣವೆಂದರೆ ಕಲೆ (art) ಮತ್ತು ಕರಕುಶಲತೆ (craft)ಗಳ ಲಗ್ನ ಸುಸೂತ್ರವಾಗಿರುವುದು. ಸೌಮ್ಯ ಏಕವರ್ಣ ಛಾಯೆಯ ಈ ಚಿತ್ರಗಳಲ್ಲಿ ಪ್ರಕೃತಿ ಮತ್ತು ಪುರುಷರ ನಡುವಿನ ಲೀಲೆ ಮೆಲುದನಿಯಲ್ಲಿ ವ್ಯಕ್ತವಾಗಿದೆ. ಕಲೆಗಾರ ಮತ್ತು ನೇಕಾರರ ಈ ಯಶಸ್ವಿ ಜುಗಲ್‌ಬಂದಿಯ ಸಂದರ್ಭದಲ್ಲಿ ವಿತರಿಸಲಾದ ಪುಸ್ತಿಕೆಯಲ್ಲಿ, ನೇಕಾರ ಸುಬ್ಬರಾಯುಲು ಅವರ ಪ್ರಸ್ತಾಪ ಕೇವಲ ಆನುಷಂಗಿಕವಾಗಿ ಬಂದಂತಿದೆ ಯಾಕೋ.

## ನಾಟಕ-ಸಿನಿಮಾ



ಅತುಲ್ ತಿವಾರಿ

ಗಿರೀಶ್ ಕಾರ್ನಾಡರ ‘ಅಗ್ನಿ ಮತ್ತು ಮಳೆ’ ಅನ್ಯ ಭಾಷೆಯಲ್ಲಿ ಹೆಚ್ಚಿನ ಹೊಗೆಯನ್ನು ಎಬ್ಬಿಸುತ್ತಿರುವಂತಿದೆ. ಅದರ ಇಂಗ್ಲಿಷ್ ಪ್ರದರ್ಶನವನ್ನು ಮಾಡಿದ್ದ ಬೆಂಗಳೂರಿನ ಅರ್ಜುನ ಸಜ್ನಾನಿ ಈಗ ಭಾರತ-ಆಸ್ಟ್ರೇಲಿಯಾದ ಕಂಪನಿಯೊಂದರ ಸಹಯೋಗದಲ್ಲಿ ಅದನ್ನು ಹಿಂದಿಯಲ್ಲಿ ಚಿತ್ರಪಟವನ್ನಾಗಿ ನಿರ್ದೇಶಿಸುವ ತಯಾರಿಯಲ್ಲಿದ್ದಾರೆ. ‘ಮಿಶನ್ ಕಾಶ್ಮೀರ್’, ‘1947 ಅರ್ತ್’ ಚಿತ್ರಗಳಿಗೆ ಸಂಭಾಷಣೆ ಬರೆದಿರುವ ಅತುಲ್ ತಿವಾರಿ ಇದಕ್ಕೂ ಸಂಭಾಷಣೆ ಬರೆಯುತ್ತಿದ್ದಾರೆ. ಎನ್.ಎಸ್.ಡಿ. ಪದವೀಧರ ಅತುಲ್, ‘ನೀನಾಸಂ’ಗಾಗಿ ಹಲವು ನಾಟಕಗಳನ್ನು ನಿರ್ದೇಶಿಸಿದವರು. ಕನ್ನಡ ಕವಯತ್ರಿ ಹಾ.ಮ. ಕನಕರ ಗಂಡ ಕೂಡ. (ಅತುಲ್‌ರ ಕನ್ನಡ ಪ್ರೇಮ ಇಳಿಮುಖವಾದುದನ್ನು ಖಂಡಿತ ಅರ್ಥ ಮಾಡಿಕೊಳ್ಳಬಲ್ಲೆವು.)

ಸಂಭಾಷಣೆಯೇ ಜೀವಾಳವಾಗಿರುವ ನಾಟಕವೊಂದರ ಚಿತ್ರ ರೂಪಕ್ಕೆ ಬೇರೆ ಸಂಭಾಷಣೆಗಳ ಅಗತ್ಯವಿದೆಯೇ ಎಂದು ಕೇಳಿದರೆ ಅತುಲ್ ಹೇಳುವುದು ಇಷ್ಟು: ''ಖಂಡಿತ. ರಂಗಭೂಮಿಯ ಖಚಿತ ಕಾಲ, ಭೂಮಿಕೆಗಿಂತ ಸಿನಿಮಾದ ನೆಲೆಯೇ ಭಿನ್ನ. ಹೀಗಾಗಿ ಮಾತುಗಳ ವಾಚ್ಯನಾಟಕೀಯತೆಯನ್ನು ಇಲ್ಲಿ ಸೌಮ್ಯಗೊಳಿಸಬೇಕಾಗುತ್ತದೆ.''

## ಶರ್ಮಾಜೀ



ನಿಬಿಡ ಪ್ರತಿಮಾನಿಷ್ಠ ಕಾವ್ಯಕ್ಕೆ, ಸಂವೇದನಾಶೀಲ ಕತೆಗಾರಿಕೆಗೆ, ಚುರುಕು ಚಾಟೂಕ್ತಿಗಳಿಗೆ ಮತ್ತು ತೆರೆದ ಮನಸ್ಸಿನ ಸ್ನೇಹಶೀಲ ವ್ಯಕ್ತಿತ್ವಕ್ಕೆ ಹೆಸರಾಗಿರುವ ರಾಮಚಂದ್ರಶರ್ಮರಿಗೆ ಎಪ್ಪತ್ತೈದು ತುಂಬಿತು. ಜೀವನ ಪ್ರೇಮಿಯಾದ ಅವರಿಗೆ ಖುಷಿ ಕೊಡುವ ಸಂಗತಿಯಲ್ಲ ಅದು. ಆದರೆ ಈ ಸಂದರ್ಭದ ವಿಶೇಷವೆಂದರೆ ಶರ್ಮಾಜೀ ಅವರ ಸಮಗ್ರ ಕಥೆ ಮತ್ತು ಕವಿತೆಗಳ ಪುಸ್ತಕಗಳು 'ಸಪ್ನಾ ಬುಕ್ ಹೌಸ್'ನಿಂದ ಪ್ರಕಟಗೊಂಡಿದ್ದು. ಓದುವದಕ್ಕಿಂತ ಮಿಗಿಲಾದ ಸನ್ಮಾನ ಯಾವುದಿದೆ ಸಾಹಿತಿಗೆ? ಸಂಭಾವನಾ/ಸನ್ಮಾನ ಗ್ರಂಥಗಳಿಗಿಂತ ಲೇಖಕನನ್ನು ಇಡಿಯಾಗಿ ಕೊಡುವ ಇಂಥ ಸಮಗ್ರ ಸಂಪುಟಗಳು ಸ್ವಾಗತಾರ್ಹವಾಗಿವೆ. ಭಾಷೆಯನ್ನು ಹಸನುಗೊಳಿಸಿದ ಈ ಮೇಧಾವಿಯ ಕೃತಿಗಳು ಹೊಸ ಸಾಹಿತ್ಯಾಸಕ್ತರನ್ನು ವ್ಯಾಪಕವಾಗಿ ತಲುಪಲಿ, ಹಳಬರೂ ಒಮ್ಮೆ ಓದಿ ಕಣ್ಣುಜ್ಜಿಕೊಳ್ಳುವಂತಾಗಲಿ ಎನ್ನುತ್ತ ಪದ್ಮಾ ಮತ್ತು ಶರ್ಮಾಜಿ ದಂಪತಿಗಳಿಗೆ ನೆಮ್ಮದಿ, ಆರೋಗ್ಯವನ್ನು ಕೋರುತ್ತೇವೆ.

ಶರ್ಮಾಜೀ, ನಮಗೆ ನಿಮ್ಮಿಂದ 'ಕಥೆ' ಬಾಕಿ ಇದೆ, please.

## 'PUNCH ಭೂತ'

ಕನಸು, ಹಟ, ಮಹಾತ್ವಾಕಾಂಕ್ಷೆ ಇಲ್ಲದ ಸಾಹಿತ್ಯಲೋಕ, ಋತುಗಳೇ ಇಲ್ಲದ ಭೂಮಿಯಂತೆ ನೀರಸ. ಇಂಥಲ್ಲಿ, ಸದಾ ಹಿರಿಯನ ಪಾರ್ಟು ಹಾಕಿದ ಎಳೆಯನಂತೆ ತೋರುವ, ಸುಮತೀಂದ್ರ ನಾಡಿಗ, ಹತಾತ್ತನೆ ಚಿಗುರಿದ್ದಾರೆ. ತಮ್ಮೆಲ್ಲ ಪಾರಭೌತಿಕ ಆಶಯಗಳನ್ನು ಉಜ್ಜಿ ಹೊಳಪುಗೊಳಿಸುತ್ತ ನಾಡಿಗರು ಬರೆದ ಪದ್ಯಗಳ ಸಂಕಲನ 'ಪಂಚಭೂತ' ಹೊರಬಂದಿದೆ. ಎಲ್ಲ ಕಾಲಕ್ಕೂ ತಮ್ಮದೇ ಶೈಲಿಯಲ್ಲಿ 'Punch ಭೂತ'ರಾಗಿ (ಆಗಾಗ 'ಪಂಚೆ'ಭೂತ ಕೂಡ ಆಗಿ) ಸ್ಪಂದಿಸುತ್ತಾ ಬಂದಿರುವ ಸುಮತೀಂದ್ರರ ಈ ಮಹಾತ್ವಾಕಾಂಕ್ಷೆಯ ಸಂಕಲನದಲ್ಲಿ ಮರ್ತ್ಯಲೋಕದ ಅಂಚಿನ ಸೆಳಕುಗಳಿವೆ. ನಾಡಿಗರದೇ trump card ಆಗಿಬಿಟ್ಟಿರುವ ದಾಂಪತ್ಯದ, ಕೌಟುಂಬಿಕ ಪದ್ಯಗಳು ಅಲ್ಪಮರ್ತ್ಯರಿಗೂ ಹಿತವಾಗುವಂತೆ ಈ ಸಂಕಲನವನ್ನು ಬೆಚ್ಚಗಾಗಿಸಿವೆ. ಉದ್ದಕ್ಕೂ ರೇಖಾಚಿತ್ರಗಳನ್ನು ಬಳಸಿದ ರೀತಿ, ಪುಸ್ತಕದ ಆಕಾರ ಹೊಸದಾಗಿದೆ. Yes. Nadig is back, Back to future!

ಆಸ್ಟ್ರೇಲಿಯದಲ್ಲಿ, ಬೀರ್ ಪೀಪಾಯಿ ಜತೆ ನಾಡಿಗ್



ಶಬ್ದತೀರ



# ಭೂಭಾರ

ನಮ್ಮ ಅಳವಿಗೂ ನಿಲುಕದ ಅಗಾಧ ಮನುಜ ದುರಂತದಲ್ಲಿ ಗುಜರಾತದ ಭೂಪಟ ಕುಸಿದಿದೆ. ಹದಿನೈದು ಸೆಕೆಂಡುಗಳಲ್ಲಿ ಮೂರು ತಲೆಮಾರು ನಿರ್ನಾಮವಾಗಿವೆ. ಜಿಡಿ ಅಂಗಗಳಂತೆ ಒಂಟಿ ಬಚಾವಾಗಿ ಉಳಿದವರು, ಮತಿಭ್ರಷ್ಟರಂತೆ ಅಪರಿಚಿತ ನಿಲ್ದಾಣಗಳಲ್ಲಿ ಕೂತಿದ್ದಾರೆ. ಇನ್ನು ಕೆಲವರು ಭಗ್ನಾವಶೇಷಗಳ ಬಳಿ ಕುಕ್ಕರುಗಾಲಲ್ಲಿ ಕೂತು, ಮಿಕಿಮಿಕಿ ನೋಡುತ್ತ ಕೈಯಿಂದ ಬೆದಕುತ್ತಿದ್ದಾರೆ. ಸಿಕ್ಕಿದ ಸೀರೆ, ಧೋತರಗಳ ಚುಂಗು ಹಿಡಿದು ಸ್ವಯಂ ಸೇವಕರು ಎಳೆದಾಗ, ಉಳಿದವರು, 'ಮೆಲ್ಲಗೆ ಮೆಲ್ಲಗೆ' ಎನ್ನುತ್ತಾರೆ. ವಾರಗಳಾದ ಮೇಲೂ ಇಬ್ಬರು ಮಕ್ಕಳು ಬಿರುಕುಗಳಲ್ಲಿ ಬಾಯಿಕೊಟ್ಟು ''ದೀಪೂ''... ''ಜ್ಯೋತಿ ಭಾಭೀ''... ಎಂದು ಕೂಗಿ ಮಾರ್ದನಿಗಾಗಿ ಕಿವಿಗೊಡುತ್ತಿದ್ದಾರೆ.

''ನಾವು ಕೊಟ್ಟ ನಿಧಿ ಅಲ್ಲಿ ತಲುಪುತ್ತದಯೆ?'', ''ನಮ್ಮಲ್ಲಿ crisis management ಇಲ್ಲ'' ''ಬಟ್ಟೆಗಳೆಲ್ಲ ಮಾರ್ಗದಲ್ಲೇ ಗುಳುಂ ಆಗುತ್ತವೆ ಜಿಡಿ'', ''ಆ ಸೈನಿಕರಿಗೆ, ಜಿಡಿ ಸಂಬಳ ಸಿಗುತ್ತದೆ. ಯುದ್ಧವಂತೂ ಇಲ್ಲ. ಇದನ್ನಾದರೂ ಮಾಡಲಿ'' ಎಂದು ಲೊಚಗುಡುತ್ತ ಕೂತ ನಮಗೆ ಇದೆಲ್ಲವನ್ನೂ ಮರೆಸಲು ಒಂದು ಪ್ಲೇಟು ಗೋಬಿ ಮಂಚೂರಿ ಸಾಕು. ನಮ್ಮ ಕೂದಲು ಕೊಂಕಿದರೆ ಮಾತ್ರ ತಾನೆ ಅದು ದುರಂತ. ಎದುರಿಗಿರುವ ಒಂದು ಮೃತ ದೇಹವನ್ನು ತೋರಲಾಗದ ನಮ್ಮ ಮನಸ್ಸಿಗೆ ಇಪ್ಪತ್ತು ಸಾವಿರವೂ ಒಂದೆ, ಎಪ್ಪತ್ತು ಸಾವಿರವೂ ಒಂದೆ.

ಇಂಥಲ್ಲಿ, ಸೈನಿಕರಲ್ಲದೆಯೂ, ನಿಜಕ್ಕೂ ಕೈಲಿದ್ದುದನ್ನು ಬಿಸಾಕಿ, ಜೀವದ ಹಂಗು ತೊರೆದು, ಭೂಮಿ ಕಂಪಿಸುತ್ತಿರುವಾಗಲೇ, ಎದೆ ಕಲ್ಲಾಗಿಸಿಕೊಂಡು ಬದುಕುಳಿದವರನ್ನು ಹೊರಗೆಳೆದವರು, ಊಟ, ನಿದ್ರೆ, ಆಹಾರ, ನೀರು ಮರೆತು, ಮೂಗು-ಬಾಯಿಗೆ ಬಟ್ಟೆ ಕಟ್ಟಿಕೊಂಡು, ಸಾವಿನಲ್ಲಿ ಒಂದಾದ ವಿಭಿನ್ನ ಜಾತಿ-ಮತ-ಧರ್ಮಗಳ ಶವಗಳನ್ನು ಹೊತ್ತೊಯ್ದು ಸಾಮೂಹಿಕ ಸಂಸ್ಕಾರ ಮಾಡಿದವರು, ಸರ್ವಸ್ವ ಕಳಕೊಂಡು ಕಂಗೆಟ್ಟು ಕೈಚೆಲ್ಲಿ ಕೂತವರನ್ನು ಸಂತೈಸಿ ಡೇರೆಗಳಿಗೊಯ್ದವರು... ಇದ್ದಾರಲ್ಲ! ಅವರಿಗೆ ನಮಸ್ಕಾರ.

ಇವರು ಅಲ್ಲೇ ಅಲ್ಲ, ಇಲ್ಲೂ ಇದ್ದಾರೆ. ಸುಮ್ಮನೆ ಇರುತ್ತಾರೆ. ಅಂಗಡಿಗಳಲ್ಲಿ ಪೊಟ್ಟಣ ಕಟ್ಟುತ್ತಿರುತ್ತಾರೆ, ದಂಡೆಗಳಲ್ಲಿ ದೋಣಿಗಳನ್ನೆಳೆಯುತ್ತಿರುತ್ತಾರೆ. ಗೆಳೆಯನ ಮದುವೆಯಲ್ಲಿ ಕುಡಿದು, ಹುಚ್ಚಾಪಟ್ಟೆ ಕುಣಿದು ಬೈಸಿಕೊಳ್ಳುತ್ತಿರುತ್ತಾರೆ. ''ಮನೇಲಿ ಎಲ್ರೂ ಬುದ್ಧಿವಂತರು ಇವನೊಬ್ನೆ ಹೀಗೆ ನೋಡಿ'' ಎಂದು ಹೇಳಿಸಿಕೊಳ್ಳುತ್ತಿರುತ್ತಾರೆ. ಬಸ್‌ಸ್ಟಾಂಡಿನಲ್ಲಿ ನಿಂತು, ಹೋಗಿ ಬರುವವರನ್ನು ನೋಡುತ್ತ, ಡ್ರೈವರು, ಕಂಡಕ್ಟರುಗಳ ಹತ್ತಿರ ಪೋಲಿ ಸನ್ನೆಗಳಿಂದ ಮಾತಾಡುತ್ತಿರುತ್ತಾರೆ.

ಯಾವುದೇ orderಗೆ, ಶ್ರೇಣಿಗೆ, ತರಬೇತಿಗೆ ಒಳಗಾಗದ ಇವರಿಗೆ ಗೊತ್ತು-ರಾತ್ರೆ, ಬೇನೆ ಶುರುವಾದ ಬಸುರಿಗೆ ಆಟೋ ಎಲ್ಲಿಂದ ತರಬೇಕು, ಇಲೆಕ್ಟ್ರಿಕ್ ಗ್ರಿಡ್ ಬಳಿ ಆಡುತ್ತಿರುವ ಮಕ್ಕಳನ್ನು

ಹೇಗೆ ಬಯ್ದು ಕಳಿಸಬೇಕು, ಬಡಪಾಯಿ ಹೆಂಗಸೊಬ್ಬಳ ಬಳಿ ಕಂಡಕ್ಟರು ರೋಪು ಹಾಕುತ್ತಿದ್ದಾಗ ಹೇಗೆ ಸುಮ್ಮನೆ ಆಕೆಯ ಬಳಿ ನಿಂತು ಕಂಡಕ್ಟರನ ಬಲವನ್ನು ತಗ್ಗಿಸಬೇಕು... ಇದೆಲ್ಲ ಗೊತ್ತು. ಇವನು ಅಡ್ವಾನ್ಸ್ ಬುಕಿಂಗ್ ಜಾತಿಗೆ ಸೇರಿದವನಲ್ಲ. ಫಿಕ್ಸೆಡ್ ಡಿಪಾಸಿಟ್ ಜಾತಿಗೂ ಸೇರಿದವನಲ್ಲ. ಸುಪರ್ ಡೀಲಕ್ಸ್ ಜಾತಿಗೂ ಸೇರಿದವನಲ್ಲ. ಇವನ ಕಾಲಲ್ಲಿ ಹವಾಯ್ ಚಪ್ಪಲಿ ಇರುತ್ತದೆ. ಮುಂದೆ ಸೀಟುಗಳು ಖಾಲಿ ಇದ್ದರೂ ಎಸ್‌ಟಿ ಬಸ್ಸಿನಲ್ಲಿ ಹಿಂಗಡೆಯಲ್ಲೇ ಕೂರುತ್ತಾನೆ. ಕಂಡಕ್ಟರು ಇದ್ದರೂ, ತಾನೇ ಚಿಲಕ ತೆಗೆಯುವುದು, ಬಾಗಿಲು ಹಾಕುವುದು ಮಾಡುತ್ತಾನೆ. ಇವನು 'ರೈಟ್' ಎಂದು ಕೂಗಿದರೆ ಯಾವ ಡ್ರೈವರಿಗೂ ಅಪಮಾನವಾಗುವುದಿಲ್ಲ.

ಇರವು ಮತ್ತು ಅರಿವಿನ ನಡುವೆ ಕಂದರಗಳೇ ಇಲ್ಲದ ಇವನನ್ನೇ, ಚುನಾವಣೆಯ ಸಮಯದಲ್ಲಿ ಪಕ್ಷಗಳು, ಬಾವುಟ ಕಟ್ಟಿದ ಸೈಕಲ್ ಕೊಟ್ಟು ಮಣ್ಣಿನ ರಸ್ತೆಯಲ್ಲಿ ಓಡಿಸುತ್ತವೆ. ಇವನನ್ನು ಹುಂಬ ಎನ್ನುವವರಿದ್ದಾರೆ. ಇವನಿಗೆ ಸಿಟ್ಟುಬಂದರೆ ಅವನು ತುಂಬ ಅಪಾಯಕಾರಿ ಅನ್ನುತ್ತಾರೆ. ಗಲಭೆಗಳಾದಾಗಲೂ ಇವನನ್ನು ಛೂ ಬಿಡಲಾಗುತ್ತದೆ. ಆಗ ಮಂದಿರ, ಮಸೀದಿಗಳಿಗೆ ಕಲ್ಲು ಹೊಡೆಯುವವನು, ಚೌಕದ ಪ್ರತಿಮೆಗಳಿಗೆ ಚಪ್ಪಲಿ ಹಾರ ಹಾಕುವವನು, ಜೈಲುಗಳಲ್ಲಿ ಭರ್ತಿ ಆಗುವವನು ಇವನೇ. ಲಾಠಿ ಚಾರ್ಜ್ ಆದಾಗ ಹವಾಯಿ ಚಪ್ಪಲಿಯನ್ನು ರಸ್ತೆಯಲ್ಲೇ ಬಿಟ್ಟು ಮಾಯವಾಗುವವನೂ ಇವನೇ.

ಈ ಇಂಥ ಇವನೇ ನಮ್ಮ ಎಲ್ಲ ಪುಟ್ಟ ಊರು, ಹಳ್ಳಿ, ಕೇರಿಗಳ crisis managementನ ಮುಖ್ಯ ಶಕ್ತಿ, ಮತ್ತು ಆಕೃತಿ. human stock ಅಂತಾರಲ್ಲ, ಅದರೊಳಗಿನ raw stock. ಈತ ತನ್ನೊಳಗೆ ಎಂದಿಗೂ ಮುಳುಗಿದವನಲ್ಲ. ಆತ್ಮನಿರತನಲ್ಲ. ಅವನ ಮನಸ್ಸು ಊದಿಕೊಂಡಿಲ್ಲ. ಹೀಗಾಗಿಯೇ ಅವನಿಗೆ ಭಯವಿಲ್ಲ.

ಆತ್ಮನಿರತರು ತರುವ ದೊಡ್ಡ ಬೆಲೆ ಭಯ.

ಭೂಕಂಪ, ಪ್ರವಾಹಗಳಂಥ ಪ್ರಕೋಪಗಳೇ ನಮ್ಮ ಸೂಕ್ಷ್ಮಗಳ ಬಾಯಿ ಬಿಡಿಸಬೇಕಾಗಿಲ್ಲ. ಸ್ವಲ್ಪ ಕಣ್ತೆರೆದರೆ ನಮ್ಮೆದುರೇ ಇವೆ ಇಲ್ಲ. ನಮ್ಮ ಸುತ್ತು ಮುತ್ತ, ಇಲ್ಲೇ ನಿರಂತರ, ದೈಹಿಕ, ಮಾನಸಿಕ ಅಪಘಾತಗಳಿವೆ, ಗಾಯಾಳುಗಳಿದ್ದಾರೆ. ಮುನಿಸಿಪಲ್ ಆಸ್ಪತ್ರೆಗೆ ಹೋಗಿ, ಓಪಿಡಿ ನೋಡಿ. ಇಷ್ಟೇ ಯಾಕೆ, ನೇರ ನಮ್ಮಿಂದಲೇ ಘಾಸಿಗೊಂಡವರೂ ನಮಗೆ ತೋರುವುದಿಲ್ಲ. ಬಹುಶಃ, ಶಾಶ್ವತಿಯ ಭ್ರಮೆಯಲ್ಲಿ, ಚಿತ್ರವಿಚಿತ್ರ ವೇಷಗಳನ್ನು ತೊಟ್ಟುಕೊಂಡಿರುವ ನಮ್ಮಂಥವರಿಗೆ ಪಾಠ ಕಲಿಸಲೆಂದೇ ನಿಸರ್ಗ ಇಂಥ ಘೋರ ಪ್ರಕೋಪಗಳನ್ನು ನಡೆಸುತ್ತದೆ.

ಬಾಕಿ ಏನೂ ಬೇಡ, ಇದ್ದಲ್ಲೇ, ನಮ್ಮ ನಮ್ಮ ದಾರಿಯಲ್ಲಿ, ನಮ್ಮ ನಮ್ಮ ಬಿಂದುಗಳಲ್ಲಿ ವಿನಮ್ರರಾಗೋಣ. ತಲೆಯ ಮೇಲೆ, ಹೆಗಲ ಮೇಲೆ ಹೊತ್ತುಕೊಂಡಿರುವ ವೇಷಭೂಷಗಳ ಹೊರೆಯನ್ನು, ಮನಸ್ಸಿನ ಬೊಜ್ಜನ್ನು ಇಳಿಸಿ, ಭೂ ಭಾರ ಕಡಿಮೆ ಮಾಡೋಣ. ಆಗಲೇ ಥಟ್ಟಂತ, ಹಗುರು ಹವಾಯಿ ಚಪ್ಪಲಿನ ಗೆಳೆಯನಂತೆ, ಧಾವಿಸಬಲ್ಲೆವು ಪಕ್ಕದ ಗಲ್ಲಿಯಿಂದ ಕೇಳಿಬಂದ ಕೂಗಿಗೆ. ಸ್ಪಂದಿಸಬಲ್ಲೆವು ಎದುರು ನಿಂತವನ ನಿಟ್ಟುಸಿರಿಗೆ.




**ಜಯಂತ ಕಾಯ್ಕಿಣಿ**
jayantkaikini@vsnl.net

ಜಯಂತ

# ಕಲಾಪ್ರವರ್ತಕನೇ ವರ್ತಕನೂ ಆಗಬೇಕಾದ್ದು ಶೋಚನೀಯ-ದೇವದಾಸ್ ಶೆಟ್ಟಿ

ಮಾಸಿದ ಕೊಡೆ, ಖಾಲಿಯಾಗಿಯೇ ಇವೆ ಎಂದೆನಿಸುವ ಹೂಜೆಗಳು, ಬಿಚ್ಚಿದ ಬುತ್ತಿ, ಹೋಳಿ ಆಡಿದಂತಿರುವ ಆಕಾಶ, ಗುಂಪಿನಲ್ಲೇ ಇರುವ ಬೆಳಕ್ಕಿಗಳು, ಲಾಟೀನು, ಊರುಗೋಲು, 'ಗುಷ್ಟಗೂ'ದಲ್ಲಿ ತೊಡಗಿರುವ ಹೆಂಗಸರು...

ಮಲೆನಾಡಿನ ಅಥವಾ ಗ್ರಾಮೀಣ ಪರಿಸರದ ಕಲಾವಿದನ ಪ್ರತಿಮೆಗಳಲ್ಲ ಇವು.

ಗಾರೆ, ಸಿಮೆಂಟು, ಗಾಜಿನ ಮಹಾನಗರದಲ್ಲಿ ಹುಟ್ಟಿ ಬೆಳೆದು, ಅಲ್ಲೇ ಕಾರ್ಮಿಕನಾಗಿ ಜೀವನ ಕಳೆದಿರುವ ಕಲೆಗಾರ ದೇವದಾಸ್ ಶೆಟ್ಟಿ ಇವರನ್ನು ಕಾಡುವ ಪ್ರತಿಮೆಗಳು ಇವು.

ಮುಂಬಯಿಯಲ್ಲಿ ಹುಟ್ಟಿ, ಅಲ್ಲೇ ಕನ್ನಡ ಶಾಲೆಯಲ್ಲಿ ಕಲಿತು, ಎಳೆ ವಯಸ್ಸಿನಲ್ಲೇ ಸಂಸಾರದ ಭಾರ ಹೊತ್ತುಕೊಂಡು, ಶಿಕ್ಷಣ ಮುಂದುವರೆಸ





ಲಾಗದೆ, ಔಷಧದ ಕಾರ್ಖಾನೆಯಲ್ಲಿ ಕಾರ್ಮಿಕನಾಗಿ ದುಡಿಯುತ್ತ-ಜತೆ ಜತೆಗೆ ಕಲೆಯನ್ನೂ ನೆಚ್ಚಿಕೊಂಡು ಬದುಕಿದ ದೇವದಾಸ ಶೆಟ್ಟಿ, ಮೆಲು ಮಾತಿನ, ಸ್ನೇಹಶೀಲ ಮನುಷ್ಯ. ಕಾರ್ಖಾನೆಯಲ್ಲಿ ಕುದಿಯುವ ಬ್ಯಾಲರಿನ ದೇಖರೇಖೆ ಮಾಡುತ್ತಿದ್ದ ಈ ಕಲಾವಿದ, ತನ್ನ ರಕ್ತದಲ್ಲಿ ಹರಿಯುತ್ತಿದ್ದ ದಕ್ಷಿಣ ಕನ್ನಡದ ಸ್ಮೃತಿಗಳಿಂದ ರೋಮಾಂಚಿತನಾದವನು.







ರೇಖಾಚಿತ್ರಗಳು

ಲೋಕಲ್ ರೈಲುಗಳ ದಟ್ಟಣೆಯಲ್ಲಿ ನೇಣು ಹೋದವರಂತೆ ನಿಂತಿರುವ ನಿತ್ಯಯಾತ್ರಿಕರ ಮುಖಗಳಲ್ಲಿ, ಕಣ್ಣು, ಮೂಗು, ಬಾಯಿಗಳನ್ನು ಕಾಣದೆ ಕಂಗೆಟ್ಟವನು.

"ಕೊನೆಗೂ ಭಾವಬದ್ಧ ಕಲಾಕೃತಿ ಉಳಿಯುತ್ತದೆ. ನಾನು ಎಷ್ಟೋ ಸರ್ಕಸ್ ಮಾಡಿ, ಪ್ರಯೋಗ ಅಂತ ಏನೇ ತಿಪ್ಪರಲಾಗ ಹಾಕಿದರೂ ಆ ಕ್ಯಾನ್‌ವಾಸಿನಲ್ಲಿ ಜೀವ ಬರೋದಿಲ್ಲ. ಅವರು ಇವರು ಮಾಡಿದರು ಅಂತ ಏನೆಲ್ಲ ಪ್ರಯೋಗಗಳನ್ನು ಮಾಡಿದೆ. ಆದರೆ ಅವು ಸಹಜವಾಗದೆ ಜಡವಾಗತೊಡಗಿದವು."

"ಈ ಜನಾರಣ್ಯದಲ್ಲಿ ಹುಟ್ಟಿ ಬೆಳೆದವನು ನಾನು. ಎಷ್ಟೊಂದು ದೈನಿಕಗಳಲ್ಲಿ ನಿರತವಾದ ಅಪಾರ ಮನುಷ್ಯರಾಶಿಯನ್ನು ಅಭ್ಯಾಸವೆಂಬಂತೆ ನೋಡಿದವನು. ಈ ನನ್ನ ಕಣ್ಣಿನ ಬೇಸರ, ದಣಿವು ನೀಗಿಸುವಂಥ ರಚನೆಗಳಿಗೆ ಕೈ ಹಾಕಿದೆ. ಗ್ರಾಮೀಣ ಚಿತ್ರಗಳು, ಜನಪದದ ಆಶಯಗಳು ಹಳದಿ, ಹಸಿರು, ಗುಲಾಬಿ, ನೀಲಿಗಳಲ್ಲಿ ಮೂಡತೊಡಗಿದವು. ಕೌಟುಂಬಿಕ ವಾತಾವರಣ ತಂತಾನೆ ನನ್ನ ಕ್ಯಾನ್‌ವಾಸನ್ನು ಕವಿಯತೊಡಗಿತು" ಎನ್ನುವ ದೇವದಾಸ್ ಶೆಟ್ಟಿ, ತೈಲ ಮತ್ತು ಜಲವರ್ಣಗಳಲ್ಲಿ ತಮ್ಮ ಕಲಾಜೀವನ ಆರಂಭಿಸಿ, ನಂತರ ಮ್ಯೂರಲ್‌ಗಳಲ್ಲಿ ಕೆಲಸ ಮಾಡಿ, ಈಗ ಮತ್ತೆ ತೈಲವರ್ಣದಲ್ಲಿ ನಿರತರಾಗಿದ್ದಾರೆ.

"ಮೂರ್ತತೆ ಮತ್ತು ಅಮೂರ್ತತೆ ಇವೆರಡೂ, ಅನುಭವಕ್ಕೆ ಸಂಬಂಧಿಸಿದ ಸಂಗತಿಗಳು" ಎನ್ನುವ ದೇವದಾಸರ ಸರಳ ಮತ್ತು ಭಾವತೀವ್ರ ಚಿತ್ರಗಳು ನವ್ಯ ಕವಿಯೊಬ್ಬನು ಬರೆದ ಭಾವಗೀತೆಗಳಂತೆ ಇವೆ.





ಕಣ್ಣು, ಮೂಗು ಕಿವಿಯಂಥ ರೂಹುಗಳೇ ಇಲ್ಲದ ಇವರ ವ್ಯಕ್ತಿಗಳು, ತಮ್ಮ ಪರಿಸರದಿಂದ, ಕೌಟುಂಬಿಕತೆಯಿಂದ ತಮ್ಮ ಚಹರೆಗಳನ್ನು ತಳೆಯುತ್ತಿರುವಂತೆ ಭಾಸವಾಗುತ್ತದೆ.

ಹೊಲದಲ್ಲಿ ಹೂಡಿದ ಒಲೆಯೆದುರು ಬೆಳಗುತ್ತ ಕೂತ ಹೆಣ್ಣು ತಟ್ಟುತ್ತಿರುವದು ರೊಟ್ಟಿಯೋ, ಪೂರ್ಣ ಚಂದ್ರನೋ? ಸೈಕಲ್ ಮೇಲೆ ಡಬಲ್ ಸೀಟು ಕೂರಿಸಿಕೊಂಡು ಹೋಗುತ್ತಿರುವ ವ್ಯಕ್ತಿ, ನೀಲಿ ಗುಡ್ಡಗಳಾಚೆ ಯಾವ ಲೋಕಕ್ಕೆ ಹೋಗುತ್ತಿದ್ದಾನೆ? ಹೂವಿನ ಬುಟ್ಟಿಯನ್ನು ರಸ್ತೆಯಲ್ಲಿ ಇಟ್ಟುಕೊಂಡ ಹೆಣ್ಣು ಅದ್ಯಾವ ಬೆಳ್ಳಕ್ಕಿಗಳನ್ನು ನೋಡಿ ಮೈಮರೆತಿದ್ದಾಳೆ? ಇಂಥ ರಮ್ಯ ಕುತೂಹಲವನ್ನು ಉದ್ದೀಪಿಸುವ ದೇವದಾಸರ ಈ ಭಾವಗೀತಾತ್ಮಕ ಚಿತ್ರಗಳು ಸೌಮ್ಯ ಕರುಣೆಯಿಂದ ಕಂಗೊಳಿಸುತ್ತವೆ.



ಕಳೆದ ಮೂರು ದಶಕಗಳಿಂದ ಮೂವತ್ತಕ್ಕೂ ಹೆಚ್ಚು ಏಕವ್ಯಕ್ತಿ ಪ್ರದರ್ಶನಗಳನ್ನು, ಸಮೂಹ ಪ್ರದರ್ಶನಗಳನ್ನು ಕೊಟ್ಟಿರುವ ದೇವದಾಸ ಶೆಟ್ಟಿ - ಬೃಹತ್ ಆಕಾರದ ಮ್ಯೂರಲ್ ನಿರ್ಮಿಸುವಲ್ಲಿ ನಿಷ್ಣಾತರಾಗಿದ್ದಾರೆ. "ಅಮೂರ್ತ ಪ್ರತಿಮೆಗಳನ್ನು ಸಂಯೋಜಿಸುವುದಕ್ಕಿಂತ ಸುಸಂಗತ ಪ್ರತಿಮೆಗಳನ್ನು ಅಸಂಗತ ವಿನ್ಯಾಸದಲ್ಲಿ ಸಂಯೋಜಿಸುವದು ನನಗೆ ಅತ್ಯಂತ ಪ್ರಿಯವಾದ ಸಂಗತಿ. ಪ್ರತಿ ಬಿಡಿ ಪ್ರತಿಮೆಗೂ ಅದರದೇ ಆದ ಉದ್ದೀಪನ ಶಕ್ತಿ ಇರುತ್ತದೆ. ಆದರೆ ಅವುಗಳನ್ನೇ ವಿಭಿನ್ನ ವಿನ್ಯಾಸದಲ್ಲಿ ಹೊಂದಿಸಿದಾಗ ಉಂಟಾಗುವ ಅಲೆಗಳು ವಿಶಿಷ್ಟವಾಗಿರುತ್ತವೆ. ಉದಾಹರಣೆಗೆ ಒಲೆ ಅದರಷ್ಟಕ್ಕೆ



ಸುಸಂಗತ. ಹೂವೂ ಅದರಷ್ಟಕ್ಕೆ ಸುಸಂಗತ. ಕೊಡೆಯೂ ಅಷ್ಟೆ. ಆದರೆ ಈ ಮೂರನ್ನೂ ಒಟ್ಟಿಗೆ ತಂದಾಗ ಅಲ್ಲೊಂದು ತೀವ್ರ ವಾದ ವಿಶಿಷ್ಟ ಅನುಭವ ಸಾಧ್ಯ. ಅದೊಂದು ಕತೆಯನ್ನೇ ನಿಮಗೆ ಹೇಳ ತೊಡಗುತ್ತದೆ. ಒಂದು ಸಹಜ, ಸರಳ ಸಂಗತಿಯೂ ತುಸುವೇ ಭಿನ್ನ ಸಂಯೋಜನೆಯಿಂದ ಬೇರೆ ಸತ್ಯವನ್ನು ಹೊಳೆಯಿಸಬಲ್ಲದು.''

ತಮ್ಮ ಕಾರ್ಖಾನೆಯ ಉದ್ಯೋಗದಿಂದ 'ಸ್ವಯಂ ನಿವೃತ್ತಿ' ತೆಗೆದುಕೊಂಡು ಈಗ ಪೂರ್ಣಾವಧಿ ಕಲಾವಿದರಾಗಿರುವ ದೇವದಾಸ್‌ರಿಗೆ ಮಧ್ಯಮ ವರ್ಗೀಯ ಕಲಾವಿದ ಕಲೆಯಿಂದಲೇ ಬದುಕಲು ಪಡಬೇಕಾದ ಬವಣೆಯ ಬಗ್ಗೆ ಬೇಸರವಿದೆ.

``ಕಲೆ ಒಂದು ಬಗೆಯ ವಿಚಿತ್ರ ಗ್ರಾಹಕ ಉತ್ಪಾದನೆ ಥರ ಆಗಿದೆ. ಪ್ರತಿಭೆಯ ಪ್ರವರ್ತಕನಾಗಬೇಕಾದ ಕಲಾವಿಧ ಸ್ವತಃ ತನ್ನ ಕಲೆಯ ವರ್ತಕನೂ ಆಗಬೇಕಾಗಿರೋದು ಶೋಚನೀಯ. ಕೊನೆಗೂ ಕಲೆಯನ್ನು ಕೊಳ್ಳುವದು ಶ್ರೀಮಂತ ವರ್ಗವಾದ್ದರಿಂದ, ಆ ವರ್ಗದ ವ್ಯಾಕರಣಗಳೊಂದಿಗೆ ವ್ಯವಹರಿಸುವುದು ಸೂಕ್ಷ್ಮ ಮನಸ್ಸಿನ ಕಲಾವಿದನಿಗೆ ಕಷ್ಟಕರವಾದದ್ದು. ಯಾವುದೇ ರೀತಿಯ 'ಪ್ರಮೋಟರು'ಗಳು ಇಲ್ಲದ ಕಲಾವಿದ, ಸ್ವತಃ ಒಬ್ಬ ಚತುರ ಮಾರಾಟಗಾರನೂ ಆದಾಗ ಮಾತ್ರ ಈ ದೇಶದಲ್ಲಿ ಹೆಸರು ಪಡೆಯುತ್ತಾನೆ. ಸಂತೆಯಲ್ಲಿ ಕೂಗಿ ಕೂಗಿ ಗ್ರಾಹಕರನ್ನು ಕರೆದು ನಾಟಿ ಔಷಧಗಳನ್ನೊ, ಪ್ಲಾಸ್ಟಿಕ್ ಹೂವುಗಳನ್ನೊ ಮಾರುವವರ ವರಸೆಯೇ, ಇಲ್ಲಿ ನಯನಾಜೂಕಿನ ಸುಸಂಸ್ಕೃತ ಶೈಲಿಯಲ್ಲಿ ನಡೆಯುತ್ತದೆ. ಇಲ್ಲಿ ಮೆರೆಯುವ ಹಣದ ಠೇಕಾರ ಎಂಥವರ ಆತ್ಮಾಭಿಮಾನವನ್ನೂ ಕುಗ್ಗಿಸುವಂಥದ್ದು'' ಎನ್ನುವ ದೇವದಾಸ್, ತಮ್ಮ ಕಲಾಕೃತಿಗಳ ಛಾಯಾಚಿತ್ರಗಳನ್ನು ಮುಂಚಿನಿಂದಲೂ 'ಭಾವನಾ'ದ ವಿನ್ಯಾಸಕ್ಕಾಗಿ ಕೊಡುತ್ತ ಬಂದಿದ್ದಾರೆ. ಈ ಕಿರು ರೂಪವಲ್ಲಾದರೂ ಕಲೆ ಹೆಚ್ಚಿನ ಆಸಕ್ತರನ್ನು ತಲುಪುತ್ತದಲ್ಲ ಎಂಬ ಸಮಾಧಾನ ಅವರಿಗೆ.

ನಿಮ್ಮ ರೇಖಾ ಚಿತ್ರಗಳ ಮೇಲೆ ಹೆಬ್ಬಾರರ ಪ್ರಭಾವವಿದೆಯೆ ಎಂದು ಕೇಳಿದರೆ, ಹೀಗೆ ಹೇಳುತ್ತಾರೆ. ``ಆ ಮಹಾನ್ ಕಲಾವಿದನಿಗೂ ನನಗೂ ಹೋಲಿಕೆಯಿಲ್ಲಿ? ಅವರಂತೆ ಜನಪದ, ಗ್ರಾಮೀಣ, ಸಾಮಾನ್ಯ ಜೀವನದ ಮಾನವೀಯ ಕ್ಷಣಗಳೇ ನನಗೂ ಪ್ರೇರಣೆ. ಅವರು ನನ್ನ ಮಾನಸ ಗುರು. ನನ್ನ ಒಂದೆರಡು ಪ್ರದರ್ಶನಗಳಿಗೆ ಖುದ್ದು ಬಂದು, ಖುಷಿ ಪಟ್ಟು, 'ನಿಮ್ಮ ಒಳದನಿಯನ್ನು ಆಲಿಸಿ ಚಿತ್ರ ಬರೆಯಿರಿ' ಎಂದು ಪ್ರೀತಿಯಿಂದ ಹರಸಿದ್ದಾರೆ. ಅವರ ಆ ಮಾತಿನಿಂದಲೇ ನನಗೆ ತುಂಬಾ ಧೈರ್ಯ

ತೈಲವರ್ಣ ಚಿತ್ರ











ಮ್ಯೂರಲ್



ಬಂದಿದೆ. ಸ್ವಭಾವತಃ ಚಿಂತಕನಲ್ಲದ ನನಗೆ ಆ ಕುರಿತು ಒಂದು ಕೀಳರಿಮೆ ಇತ್ತು. ಅರ್ಥವಾಗದ ಭಾಷೆಯಲ್ಲಿ ತಮ್ಮ ಕಲಾಕೃತಿಗಳನ್ನು ವಿವರಿಸುವ ಕಲಾವಿದರನ್ನು ಕಂಡು ಭಯವಾಗುತ್ತಿತ್ತು. ಆದರೆ ಹೆಬ್ಬಾರರ ಹಿತನುಡಿಯ ನಂತರ ನಾನು ನನಗೆ ಖುಷಿ ಕೊಡುವ ಚಿತ್ರಗಳನ್ನು ಮಾಡುತ್ತಿದ್ದೇನೆ. ನನಗೇ ಖುಷಿ ಕೊಡದ ಕಲಾಕೃತಿ ಉಳಿದವರಿಗೆಂತು ಖುಷಿ ಕೊಟ್ಟೀತು?''

ಎಷ್ಟೇ ಆಕರ್ಷಕವೆನಿಸಿದರೂ ಸುಗಮ ಸಂಗೀತ ಒಂದು ಮಿತಿಯೊಳಗೇ ಉಳಿದು ಬಿಡುತ್ತದೆ. ಅತೃಪ್ತಿಯನ್ನು ಹೆಚ್ಚಿಸುತ್ತದೆ. ಮಹಾನಗರದ ಮಧ್ಯಮ ವರ್ಗದ ಸುಗಮ ಸಂಗೀತದಂತಿರುವ ದೇವದಾಸರ ಕಲಾಕೃತಿಗಳೂ ತಮ್ಮ ಮಿತಿಯನ್ನು ಹಿಗ್ಗಿಸಲು ಇದು ತಕ್ಕ ಸಮಯ ಅನಿಸುತ್ತದೆ. 'ರಮ್ಯತೆ'ಗೂ ಆಯಾ ಕಾಲದ್ದೇ ಆದ ವಿಶಿಷ್ಟ ಲಯ, ಕಾಣ್ಕೆ ಇರುತ್ತದೆ. ಈ ದಿಸೆಯಲ್ಲಿ ದೇವದಾಸ ಹೊಸದರ ತವಕದಲ್ಲಿದ್ದಾರೆ. 'ದುನಿಯಾದಾರಿ' ಬಿಟ್ಟು, ತನ್ನದೇ ಒಳ ದನಿಯ ದಾರಿ ಹಿಡಿದಿರುವ ಈ ಪ್ರಾಮಾಣಿಕ ಕಲೆಗಾರನ ಮನಸ್ಸಿಗೆ, ಹೊಸ ಪ್ರತಿಮೆಗಳ, ಹೊಸ ಅನುಭೂತಿಗಳ ಭಾಗ್ಯದ ಬಾಗಿಲು ಬೇಗ ತೆರೆಯುವಂತಾಗಲಿ. ■



# ಕೊಸೇ-ಸಿಪ್

- ಯಶಸ್ಸು ಅನ್ನೋದು 'ರಿಲೇಟಿವ್' ಸಂಗತಿ. ಏಕೆಂದರೆ ಯಶಸ್ಸು ಬಂದಾಗಲೇ ರಿಲೇಟಿವ್ಸ್ ಬರೋದು!
- ಪಾಟ್ನಾ ರೈಲ್ವೆ ಪ್ಲಾಟ್‌ಫಾರ್ಮಿನ ಗೇಟಿನ ಫಲಕ ಹೀಗೆ ಹೇಳುತ್ತದೆ.
  ಪುಕ್ಕಟೆ ಹೋಗಿ, ಪುಕ್ಕಟೆ ಬನ್ನಿ, ಸಿಕ್ಕು ಬಿದ್ದರೆ ಪುಕ್ಕಟೆ ತಿನ್ನಿ (ಜೈಲಿನಲ್ಲಿ!)
- ಬ್ಯೂಟಿ ಪಾರ್ಲರಿನ ಹೊರಗೊಂದು ಬೋರ್ಡು: ಇಲ್ಲಿಂದ ಹೊರ ಬೀಳುತ್ತಿರುವ ಚೆಲುವೆಯನ್ನು ಕಂಡು ಸಿಳ್ಳೆ ಹಾಕಬೇಡಿ. ಆಕೆ ನಿಮ್ಮ ಅಜ್ಜಿಯೂ ಆಗಿರಬಹುದು!
- ಪ್ರೇಮ ಕುರುಡು. ಆದರೆ ಮದುವೆ ಕಣ್ಣು ತೆರೆಸುವಂಥದು!
- ಒಂದು ಹೋಟಲಿನಲ್ಲಿಯ ಫಲಕ: ಇಲ್ಲಿಯ ಕುಡಿಯುವ ನೀರನ್ನು
  ಸ್ವತಃ ಮ್ಯಾನೇಜರೇ ಪಾಸ್ ಮಾಡಿದ್ದಾರೆ.
- ಸಲೂನಿನೊಳಗಿನ ಫಲಕ : ಹೇರ್‌ಕಟ್ 15.00 ರೂ
  ಮಕ್ಕಳು 10.00 ರೂ.
- ಸ್ಮಾರ್ಟ್ ಗಂಡು + ಸ್ಮಾರ್ಟ್ ಹೆಣ್ಣು = ಪ್ರಣಯ
  ಸ್ಮಾರ್ಟ್ ಗಂಡು + ಪೆದ್ದು ಹೆಣ್ಣು = ಉಬ್ಬಿದ ಹೊಟ್ಟೆ
  ಪೆದ್ದು ಗಂಡು + ಸ್ಮಾರ್ಟ್ ಹೆಣ್ಣು = ವಿಮೋಚನೆ
  ಪೆದ್ದು ಗಂಡು + ಪೆದ್ದು ಹೆಣ್ಣು = ಮದುವೆ.
- 'ಸರ್ವೇಜನಾಃ ಸುಖಿನೋ ಭವಂತು' ಎಂದು ಪ್ರಾರ್ಥಿಸುವುದು ತಪ್ಪು. ಏಕೆಂದರೆ ಇದರಿಂದ ಕೇವಲ 'ಸರ್ವೇ' ಡಿಪಾರ್ಟ್‌ಮೆಂಟಿನವರಿಗೆ ಮಾತ್ರ ಒಳ್ಳೇದಾಗಬಹುದು.
- ನಾಡಿಗರ ಪದ್ಯವೊಂದು ಹೀಗಿದೆ
  ಕಾಕಾ ಎನ್ನುತ್ತದೆ ಕಾಗೆ ಕೂ ಕೂ ಎನ್ನುತ್ತದೆ ಕೋಗಿಲೆ
  ಕೀಕೀ ಎನ್ನುವದು ಯಾರು?
  ಉತ್ತರ : ಬೀಗದ ಕೈ ಕಳಕೊಂಡೋರು
- (ಅದೇ ವರಸೆಯಲ್ಲಿ) 'ಮೀನ್' ಮೆಂಡೆಡ್ ಯಾರು? ಮೀನು ತಿನ್ನೋರು.

**ಕಚಗುಳಿ :** ಆಫೀಸಿನಲ್ಲಿ 'ಬಾಸ್' ಇಲ್ಲದ ಸಮಯ ಸಾಧಿಸಿ, ಕದ್ದು ಮನೆಗೆ ಓಡಿದ್ದ ನವವಿವಾಹಿತನೊಬ್ಬ, ತಕ್ಷಣ ಮರಳಿ ಬಂದು ಏದುಸಿರು ಬಿಡುತ್ತ, ''ಅಬ್ಬ, ಬಚಾವಾದೆ. ಬಾಸ್ ನಮ್ಮನೇಲಿದ್ರು! ಸದ್ಯ ಅವರು ನನ್ ನೋಡೋ ಮೊದಲೇ ಓಡಿಬಂದೆ. ಇಲ್ದಿದ್ರೆ ಸಿಕ್ಕೀ ಬೀಳ್ತಿದ್ದೆ'' ಎಂದ. ■

Printed, published and owned by **Vijay Sankeshwar**, Published at 1st Floor, "Giriraj Annexe", P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-253630
Printed at Anand Printers & Publishers, 9/A, Puntharapalya Village, Nayandahalli, Mysore Road, Bangalore - 560 039
Editor: **Jayant Kaikini**

